# ಇಸ್ಲಾಮ್ ನಿಮ್ಮಿಂದ ಏನು ಬಯಸುತ್ತದೆ?

ಡಾ. ಸಯ್ಯದ್ ಹಾಮಿದ್ ಆಲಿ

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಮುನ್ನುಡಿ

ನಿಮ್ಮ ಕೈಯಲ್ಲಿರುವ ಈ ಪುಸ್ತಕ ಇಸ್ಲಾಮ್ ಧರ್ಮದ ಒಂದು ಸಮಗ್ರ ಹಾಗೂ ಸಂಕ್ಷಿಪ್ತ ಪರಿಚಯವಾಗಿದೆ. ಇಸ್ಲಾಮ್ ಧರ್ಮದ ಬೋಧನೆಗಳನ್ನು ಅರಿಯ ಬಯಸುವವರು ಈ ಪುಸ್ತಕದ ಮೂಲಕ ತಮ್ಮ ದಾಹ ತೀರಿಸಿಕೊಳ್ಳಬಹುದು. ಹಾಗೆಯೇ ತಾವು ಇನ್ನಷ್ಟು ನಿಷ್ಠಾವಂತ ಮುಸ್ಲಿಮರಾಗಬೇಕೆಂದು ಅಪೇಕ್ಷಿಸುವ ಮುಸ್ಲಿಮರೂ, ಇಸ್ಲಾಮ್ ಧರ್ಮದ ಆದೇಶಗಳೇನು ಮತ್ತು ಅಲ್ಲಾಹನ ಧರ್ಮವು ತಮ್ಮಿಂದ ಏನನ್ನು ಬಯಸುತ್ತದೆ ಎಂಬುದನ್ನು ಈ ಪುಸ್ತಕದ ಮೂಲಕ ತಿಳಿಯಬಹುದು.

ಲೇಖಕರು ಇಲ್ಲಿ ಪ್ರತಿಯೊಂದು ವಿಷಯವನ್ನೂ ಪವಿತ್ರ ಕುರ್‌ಆನಿನ ಸುಸ್ಪಷ್ಟ ಸೂಕ್ತಗಳು ಮತ್ತು ಪ್ರವಾದಿ ಮುಹಮ್ಮದ್‌ರ(ಸ) ವಿವಾದಾತೀತ ಸುನ್ನತ್‌ಗಳ ಆಧಾರದಲ್ಲೇ ಪ್ರಸ್ತುತಪಡಿಸಿದ್ದಾರೆ. ಒಂದು ರೀತಿಯಲ್ಲಿ, ಅವರು ಪವಿತ್ರ ಕುರ್‌ಆನಿನ ಸೂಕ್ತಗಳು ಮತ್ತು ಪ್ರವಾದಿವರ್ಯರ(ಸ) ವಚನಗಳನ್ನೇ ಅನುವಾದ ಮತ್ತು ಸಂಕ್ಷಿಪ್ತ ವಿವರಣೆಗಳೊಂದಿಗೆ ಒಂದು ನಿರ್ದಿಷ್ಟ ಕ್ರಮದಲ್ಲಿ ಕ್ರೋಢೀಕರಿಸಿದ್ದಾರೆ ಎಂದೇ ಹೇಳಬಹುದು. ಇಲ್ಲಿ ಲೇಖಕರು, ಹದೀಸ್ ವಿಜ್ಞಾನದ ದೃಷ್ಟಿಯಿಂದ ಎಲ್ಲ ವಿಧದಲ್ಲೂ ಅಧಿಕೃತ ಹಾಗೂ ನಂಬಲರ್ಹವಾದ ಹದೀಸ್‌ಗಳನ್ನು ಮಾತ್ರ ಸ್ವೀಕರಿಸಿದ್ದು, ದುರ್ಬಲ ಹಾಗೂ ಪ್ರಕ್ಷಿಪ್ತವಾದ ವರದಿಗಳನ್ನು ಸಂಪೂರ್ಣ ದೂರವಿರಿಸಿದ್ದಾರೆ. ಲೇಖಕರು ಹೆಚ್ಚಿನ ಹದೀಸ್‌ಗಳನ್ನು ಬುಖಾರಿ ಮತ್ತು ಮುಸ್ಲಿಮ್‌ಗಳಂತಹ ಅತ್ಯಂತ ವಿಶ್ವಸನೀಯ ಗ್ರಂಥಗಳಿಂದಲೇ ಉಲ್ಲೇಖಿಸಿದ್ದಾರೆ. 'ಸಿಹಾಹುಸಿತ್ತ' ಅಥವಾ ಅತ್ಯಂತ ನಂಬಲರ್ಹವಾದ ಆರು ಹದೀಸ್ ಗ್ರಂಥಗಳ ಪೈಕಿ ಇತರ ಗ್ರಂಥಗಳಿಂದಲೂ ಹದೀಸ್‌ಗಳನ್ನು ಉಲ್ಲೇಖಿಸ ಲಾಗಿದ್ದರೂ, ಸಾಕಷ್ಟು ನಿಷ್ಕರ್ಷೆಯ ಬಳಿಕ ವಿಶ್ವಾಸಾರ್ಹ ಹದೀಸ್‌ಗಳನ್ನು ಮಾತ್ರ ಆರಿಸಿಕೊಳ್ಳಲಾಗಿದೆ. 'ಸಿಹಾಹುಸಿತ್ತ' ದ ಹೊರಗಿನ ಹದೀಸ್‌ಗಳನ್ನು ತೀರಾ ವಿರಳವಾಗಿ ಮಾತ್ರ ಉಲ್ಲೇಖಿಸಲಾಗಿದೆ. ಪವಿತ್ರ ಕುರ್‌ಆನ್ ಮತ್ತು ವಿಶ್ವಸನೀಯ ಹದೀಸ್‌ಗಳಿಂದ ಸಮರ್ಥಿಸಲ್ಪಡುವ ಹದೀಸ್‌ಗಳನ್ನು ಮಾತ್ರ ಆವರಿಸಿದೆ.

ದೇವದತ್ತ ಸೌಭಾಗ್ಯದಿಂದ ಈ ಪುಸ್ತಕವೀಗ ಇಸ್ಲಾಮಿನ ಬೋಧನೆಗಳ ಒಂದು ಅವಲಂಬನೀಯ ಸಂಗ್ರಹವಾಗಿ ರೂಪ ತಾಳಿದೆ. ಇದು ಕೇವಲ ಅಲ್ಲಾಹನ ಅನುಗ್ರಹದ ಫಲ. ಮುಸ್ಲಿಮರು ತಮ್ಮ ಬದುಕನ್ನು ಇಸ್ಲಾಮಿಗನುಸಾರವಾಗಿ ರೂಪಿಸುವ ನಿಟ್ಟಿನಲ್ಲಿ ಈ ಪುಸ್ತಕದಿಂದ ಪ್ರಯೋಜನ ಪಡೆಯುವರೆಂದು ನಿರೀಕ್ಷಿಸುತ್ತೇವೆ. ಹಾಗೆಯೇ ಜನಸಾಮಾನ್ಯರಿಗೆ ಇಸ್ಲಾಮಿನ ಸಂದೇಶವನ್ನು ತಲುಪಿಸುವ ನಿಟ್ಟಿನಲ್ಲಿ ಈ ಪುಸ್ತಕ ಉಪಯುಕ್ತವಾದೀತೆಂದು ಆಶಿಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಇಸ್ಲಾಮ್: ಮಾನವಕುಲದ ಧರ್ಮ

## ಅಲ್ಲಾಹನ ಅಪಾರ ಅನುಗ್ರಹಗಳು

ಅಲ್ಲಾಹನು ನಮಗೆ ಬದುಕನ್ನು ಕೊಟ್ಟನು. ನಮ್ಮನ್ನು ಮನುಷ್ಯರಾಗಿ ಸೃಷ್ಟಿಸಿದನು. ಇತರ ಸೃಷ್ಟಿಗಳಿಗಿಂತ ಹೆಚ್ಚಿನ ಶ್ರೇಷ್ಠತೆಯನ್ನು ನಮಗೆ ದಯಪಾಲಿಸಿದನು. ಅತ್ಯುತ್ತಮ ಅವಯವಗಳನ್ನೂ ಶಕ್ತಿ-ಸಾಮರ್ಥ್ಯಗಳನ್ನೂ ಕರುಣಿಸಿದನು. ಭೂಮಿಯ ಇತರ ಸೃಷ್ಟಿಗಳ ಮೇಲೆ ನಮಗೆ ಅಧಿಕಾರವನ್ನು ಕೊಟ್ಟನು:

"ನಾವು ಆದಮರ ಸಂತತಿಗೆ ಶ್ರೇಷ್ಠತೆಯನ್ನು ಪ್ರದಾನ ಮಾಡಿದ್ದುದೂ ಅವರಿಗೆ ನೆಲ, ಜಲಗಳಲ್ಲಿ ಯಾನಗಳನ್ನು ದಯಪಾಲಿಸಿದ್ದುದೂ ಅವರಿಗೆ ಶುದ್ಧ ವಸ್ತುಗಳಿಂದ ಜೀವನಾಧಾರ ನೀಡಿದ್ದುದೂ ನಮ್ಮ ಅನೇಕ ಸೃಷ್ಟಿಗಳ ಮೇಲೆ ಉತ್ಕೃಷ್ಟತೆ ಕೊಡಮಾಡಿದುದೂ ನಮ್ಮ ಅನುಗ್ರಹವಾಗಿದೆ."

**(ಪವಿತ್ರ ಕುರ್‌ಆನ್, 17:70)**

ಅವನು ಭೂಮಿಯಲ್ಲಿನ ಎಲ್ಲ ವಸ್ತುಗಳನ್ನೂ ಎಲ್ಲ ಸುಪ್ತ ಖಜಾನೆಗಳನ್ನೂ ನಮಗಾಗಿಯೇ ಸೃಷ್ಟಿಸಿದನು:

"ಭೂಮಿಯಲ್ಲಿರುವುದನ್ನೆಲ್ಲ ನಿಮಗಾಗಿ ಸೃಷ್ಟಿಸಿದವನು ಆತನೇ."

**(ಪವಿತ್ರ ಕುರ್‌ಆನ್, 2:29)**

ಅವನು ಭೂಮಿಯನ್ನು ಮಾತ್ರವಲ್ಲ ವಿಶ್ವದ ಇನ್ನೂ ಅನೇಕ ವಸ್ತುಗಳನ್ನು ನಮ್ಮ ಸೇವೆಗಾಗಿ ನೇಮಿಸಿದನು:

"ಭೂಮಿ-ಆಕಾಶಗಳನ್ನು ಸೃಷ್ಟಿಸಿದವನೂ ಆಕಾಶದಿಂದ ಮಳೆ ಸುರಿಸಿದವನೂ ಅದರ ಮೂಲಕ ನಿಮಗೆ ಆಹಾರವನ್ನೊದಗಿಸಲಿಕ್ಕಾಗಿ ತರತರದ ಫಲಗಳನ್ನು ಉತ್ಪಾದಿಸಿದವನೂ ಅಲ್ಲಾಹನೇ ಆಗಿರುತ್ತಾನೆ. ಅವನು ತನ್ನ ಆಜ್ಞೆ ಪ್ರಕಾರ ಸಮುದ್ರದಲ್ಲಿ ಸಂಚರಿಸುವಂತೆ ಹಡಗನ್ನು ನಿಮ್ಮ ನಿಯಂತ್ರಣಕ್ಕೆ ಕೊಟ್ಟನು ಮತ್ತು ನಿಮಗಾಗಿ ನದಿಗಳನ್ನೂ ನಿಯಂತ್ರಿಸಿದನು. ಅವನು ನಿರಂತರವಾಗಿ ಚಲಿಸುತ್ತಿರುವ ಸೂರ್ಯ ಚಂದ್ರರನ್ನು ನಿಮಗಾಗಿ ನಿಯಂತ್ರಿಸಿದನು ಮತ್ತು ರಾತ್ರಿ ಹಗಲುಗಳನ್ನು ನಿಮಗಾಗಿ ನಿಯಂತ್ರಿಸಿದನು. ಅವನು ನೀವು ಬೇಡಿದುದನ್ನೆಲ್ಲ ನಿಮಗೆ ಕೊಟ್ಟನು. ನೀವು ಅಲ್ಲಾಹನ

'ಕೊಡುಗೆ'ಗಳನ್ನು ಎಣಿಕೆ ಮಾಡಲಿಚ್ಛಿಸಿದರೆ ಮಾಡಲಾರಿರಿ. ವಾಸ್ತವದಲ್ಲಿ ಮಾನವನು ಮಹಾ ಅನ್ಯಾಯಿಯೂ ಕೃತಘ್ನನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 14:32-34

ನಾವು ಸ್ವತಃ ನಮ್ಮ ಶರೀರದ ರಚನೆಯ ಮೇಲೆಯೇ ದೃಷ್ಟಿ ಹಾಯಿಸಿದರೆ ಅದರ ಒಂದೊಂದು ಅಂಗವೂ ಅತ್ಯಂತ ಸಂಕೀರ್ಣ, ವಿವಿಧೋದ್ದೇಶಿ (Multipurpose) ಹಾಗೂ ಅತ್ಯುಪಯುಕ್ತವಾಗಿರುವುದನ್ನು ಕಾಣುತ್ತೇವೆ. ಅವುಗಳನ್ನು ಅಸಾಮಾನ್ಯ ಜಾಣ್ಮೆಯಿಂದ ಮತ್ತು ಅದ್ಭುತ ಸಾಮರ್ಥ್ಯದಿಂದ ಸೃಷ್ಟಿಸಿ ನಮ್ಮ ಸೇವೆಗಾಗಿ ನಮ್ಮ ವಶಕ್ಕೆ ಕೊಡಲಾಗಿದೆ. ಮನುಷ್ಯನ ಒಂದೊಂದು ಅಂಗವೂ ಎಷ್ಟು ಸಂಕೀರ್ಣವಾಗಿದೆ ಮತ್ತು ಎಷ್ಟು ಸೂಕ್ಷ್ಮವಾಗಿ ಅವುಗಳನ್ನು ರಚಿಸಲಾಗಿದೆಯೆಂದರೆ, ವಿಜ್ಞಾನವು ಅಪೂರ್ವ ಪ್ರಗತಿ ಸಾಧಿಸಿರುವ ಈ ಯುಗದಲ್ಲೂ ಯಾರಿಗೂ ತಾನು ಮನುಷ್ಯನ ಯಾವುದಾದರೂ ಒಂದು ಅಂಗದ ಬಗ್ಗೆ ಸಂಪೂರ್ಣ ಮಾಹಿತಿ ಪಡೆದಿರುವೆನೆಂದು ವಾದಿಸಲು ಸಾಧ್ಯವಾಗಿಲ್ಲ. ಮನುಷ್ಯನ ಬುದ್ಧಿಯು ಇನ್ನೂ ಗ್ರಹಿಸಲಾಗದ ಅನೇಕ ಯುಕ್ತಿಗಳು ಅವುಗಳಲ್ಲಿ ಸುಪ್ತವಾಗಿವೆ. ಸ್ವತಃ ಮನುಷ್ಯನ ಮಿದುಳೇ ಒಂದು ಅದ್ಭುತ ಸೃಷ್ಟಿ! ವಿವಿಧ ಕ್ಷೇತ್ರಗಳಲ್ಲಿ ಮಾನವನು ಸಾಧಿಸಿರುವ ಪ್ರಗತಿಯಲ್ಲಿ ಈ ಸಣ್ಣ ಮಿದುಳು ಪ್ರಮುಖ ಪಾತ್ರ ವಹಿಸಿದೆ. ಇದನ್ನು ಬಳಸಿಯೇ ಮನುಷ್ಯನು ನೆಲ, ಜಲ, ವಾಯುಗಳಲ್ಲಿ ಸಂಚರಿಸುತ್ತಾ ಸಕ್ರಿಯನಾಗಿದ್ದಾನೆ. ಮಾತ್ರವಲ್ಲ ಅಂತರಿಕ್ಷವನ್ನೂ ಹಾದು ವಿವಿಧ ಗ್ರಹಗಳಿಗೆ ಪ್ರವೇಶಿಸುವ ಸನ್ನಾಹದಲ್ಲಿದ್ದಾನೆ. ಈ ನಮ್ಮ ಅದ್ಭುತ ಶರೀರದ ಸುತ್ತಮುತ್ತ ನಮ್ಮ ಸೇವೆಗಾಗಿ ಮತ್ತು ನಮ್ಮ ಚಿಂತನೆಗೆ ವಸ್ತುವಾಗಲು ಭಾರೀ ಸಂಪನ್ನವಾದ ಒಂದು ವಿಶ್ವವನ್ನೇ ಸಜ್ಜುಗೊಳಿಸಿ ಇಡಲಾಗಿದೆ. ಸ್ವತಃ ನಮ್ಮ ಶರೀರದಲ್ಲೂ ಸುತ್ತಮುತ್ತಲಿನ ಭೂಮಿ, ಆಕಾಶ, ಅಂತರಿಕ್ಷ ಮತ್ತು ಈ ವಿಶಾಲ ವಿಶ್ವದ ಕಣಕಣಗಳಲ್ಲೂ ಅಲ್ಲಾಹನ ಮಹಿಮೆ, ಸಾಮರ್ಥ್ಯ ಮತ್ತು ಅಪಾರ ಯುಕ್ತಿಯ ನಿದರ್ಶನಗಳೇ ತುಂಬಿವೆ. ಮಾನವನು ತೆರೆದ ಕಣ್ಣುಗಳಿಂದ ಇವುಗಳ ಮೇಲೆಲ್ಲಾ ದೃಷ್ಟಿ ಹಾಯಿಸಿದಾಗ ಅವನ ಮನಸ್ಸು, ಅಲ್ಲಾಹನ ಮಹಾನತೆಯ ಪ್ರಜ್ಞೆ ಮತ್ತು ಅವನ ಬಗ್ಗೆ ಕೃತಜ್ಞತೆ ಹಾಗೂ ಪ್ರೀತಿಯ ಭಾವದಿಂದ ತುಂಬುತ್ತದೆ ಮತ್ತು ಅವನು ಕೃತಾರ್ಥನಾಗಿ ಉದ್ಗರಿಸುತ್ತಾನೆ:

"ಅಲ್ಲಾಹನಿಗೇ ಸರ್ವಸ್ತುತಿ. ಅವನು ಸಕಲ ವಿಶ್ವದ ಪ್ರಭು. ಪರಮ ದಯಾಳು, ಕರುಣಾನಿಧಿ." (ಪವಿತ್ರ ಕುರ್‌ಆನ್, 1:2-3)

"ನಾವು ಎಲ್ಲೆಡೆಯೂ ರಾರಾಜಿಸುತ್ತಿರುವ ನಮ್ಮ ಸೃಷ್ಟಿಕರ್ತ ಮತ್ತು ಒಡೆಯನ ನಿದರ್ಶನಗಳಲ್ಲೇ ಅವನ ಮಹಿಮೆಯನ್ನು ಗುರುತಿಸಿ ಭಕ್ತಿಭಾವದಿಂದ ತಲೆಬಾಗಿ ಬಿಡುತ್ತೇವೆ." (ಪವಿತ್ರ ಕುರ್‌ಆನ್, 1:5)

ಯಾವ ಶಕ್ತಿಯ ಅಪಾರ ಕರುಣೆ, ಅನುಗ್ರಹಗಳನ್ನು ನಾವು ನಿತ್ಯ ಅನುಭವಿಸುತ್ತಿರುವೆವೋ ನಮ್ಮ ಇಹ-ಪರಗಳನ್ನೂ ಜೀವನ್ಮರಣಗಳನ್ನೂ ಯಾರು ನಿಯಂತ್ರಿಸುತ್ತಿರುವನೋ ನಮ್ಮ ಸೋಲು-ಗೆಲುವುಗಳೆಲ್ಲವೂ ಯಾರ ಇಚ್ಛೆಯನ್ನು ಅವಲಂಬಿಸಿವೆಯೋ ಆ ಮಹಾನ್ ಶಕ್ತಿಯನ್ನು ಮಾತ್ರ ನಾವು ದಾಸ್ಯ-ಆರಾಧನೆಗೆ ಯೋಗ್ಯನೆಂದು ಭಾವಿಸಬೇಕಾದುದು ಸತ್ಯ, ಬುದ್ಧಿ, ವಿವೇಕ, ನ್ಯಾಯ, ಸೌಜನ್ಯ ಎಲ್ಲ ದೃಷ್ಟಿಯಿಂದಲೂ ನಮ್ಮ ಕರ್ತವ್ಯವಾಗಿದೆ:

**"ಹೇ ಜನರೇ, ನಿಮ್ಮನ್ನೂ ನಿಮ್ಮ ಪೂರ್ವಿಕರನ್ನೂ ಸೃಷ್ಟಿಸಿದ ನಿಮ್ಮ ಪ್ರಭುವಿನ ಸ್ಯ-ಆರಾಧನೆ ಮಾಡಿರಿ. (ಹೀಗೆ ಮಾಡಿದರೆ) ನೀವು ರಕ್ಷಣೆ ಹೊಂದಬಹುದು. ಅವನೇ ೂಮಿಯನ್ನು ನಿಮಗೆ ಹಾಸನ್ನಾಗಿ ಹಾಸಿದನು; ಆಕಾಶದ ಮೇಲ್ಛಾವಣಿ ಮಾಡಿದನು; ೀಲ್ಭಾಗದಿಂದ ಮಳೆ ಸುರಿಸಿದನು. ಅದರ ಮೂಲಕ ತರತರದ ಬೆಳೆಗಳನ್ನು ಉತ್ಪಾದಿಸಿ ನುಗೆ ಆಹಾರ ಒದಗಿಸಿದನು. ಇದನ್ನು ನೀವು ಅರಿತಿರುತ್ತ ಇತರರನ್ನು ಅಲ್ಲಾಹನಿಗೆ ತಿಸ್ಪರ್ಧಿಗಳನ್ನಾಗಿ ಮಾಡದಿರಿ."** **(ಪವಿತ್ರ ಕುರ್‌ಆನ್, 2:21-22)**

## ಸ್ಲಾಮ್ ಧರ್ಮ ಎಂದರೇನು?

ಅಲ್ಲಾಹನ ದಾಸ್ಯ-ಆರಾಧನೆ ಮತ್ತು ಅವನ ಆಜ್ಞಾನುಸರಣೆಗೆ ಇರುವ ನ್ನೊಂದು ಹೆಸರೇ ಇಸ್ಲಾಮ್. ಇಸ್ಲಾಮ್ ಎಂದರೆ ತನ್ನನ್ನು ಸಂಪೂರ್ಣವಾಗಿ ಲ್ಲಾಹನ ವಶಕ್ಕೆ ಒಪ್ಪಿಸಿ ಬಿಡುವುದು ಹಾಗೂ ಸಂಪೂರ್ಣ ಬದುಕನ್ನು ಅವನ ಸ್ಯ-ಅನುಸರಣೆಗೆ ಅರ್ಪಿಸುವುದು ಎಂದರ್ಥ.

**"ಅಲ್ಲಾಹನಿಗೆ ಆತ್ಮಾರ್ಪಣೆಗೈಯುವ ಮತ್ತು ಸತ್ಸಂಪ್ರದಾಯದಲ್ಲಿ ನಡೆಯು ತನು ಯಾರೇ ಇರಲಿ, ಅವನಿಗೆ ಅವನ ಪ್ರಭುವಿನ ಬಳಿ ಅವನ ಪ್ರತಿಫಲವಿದೆ."**

**(ಪವಿತ್ರ ಕುರ್‌ಆನ್, 2:112)**

ತಮ್ಮನ್ನು ಸಂಪೂರ್ಣವಾಗಿ ಅಲ್ಲಾಹನ ದಾಸ್ಯ-ಆರಾಧನೆ ಮತ್ತು ಅವನ ಆಜ್ಞಾ ಾಲನೆಗೆ ಅರ್ಪಿಸಿಕೊಂಡವರೇ ನಿಜವಾಗಿ 'ಮುಸ್ಲಿಮ್' ಎಂದು ಕರೆಸಿಕೊಳ್ಳುತ್ತಾರೆ.

**"ನಾವು ಕೇವಲ ಅಲ್ಲಾಹನ ಮುಸ್ಲಿಮ(ಆಜ್ಞಾನುಸಾರಿ)ರಾಗಿದ್ದೇವೆ."**

**(ಪವಿತ್ರ ಕುರ್‌ಆನ್, 2:136)**

ಅಲ್ಲಾಹನ ದಾಸ್ಯ-ಅನುಸರಣೆ ಮಾಡಬೇಕೆಂದು ಮತ್ತು ಅವನಿಗೆ ಸಂಪೂರ್ಣ ರಣಾಗಬೇಕೆಂಬುದು ನಮ್ಮ ಪ್ರಕೃತಿಯ ಸ್ವಾಭಾವಿಕ ಬೇಡಿಕೆಯಾಗಿದೆ. ನಮಗೆ ಈ ಸ್ತಿತ್ವವನ್ನೂ ಅತ್ಯುತ್ತಮ ದೇಹ ಪ್ರಕೃತಿಯನ್ನೂ ಶ್ರೇಷ್ಠ ಶಕ್ತಿ-ಸಾಮರ್ಥ್ಯಗಳನ್ನೂ ೊಟ್ಟವನು, ನಮ್ಮನ್ನು ಅನುಕ್ಷಣವೂ ಪೋಷಿಸುತ್ತಿರುವವನು ಮತ್ತು ಸಂಪೂರ್ಣ ಶ್ವವನ್ನು ನಮ್ಮ ಸೇವೆಗೆ ನಿಯೋಜಿಸಿದವನು ಅಲ್ಲಾಹನೇ ಎಂದ ಮೇಲೆ ನಾವೇಕೆ ಅವನ ಾಸರಾಗಬಾರದು? ನಾವೇಕೆ ಅವನಿಗೆ ಕೃತಜ್ಞರಾಗಬಾರದು? ಅವನ ಪ್ರೇಮದಲ್ಲಿ ಮುಳುಗಿ, ವನ ಮೆಚ್ಚುಗೆಗಾಗಿ ನಮ್ಮನ್ನೇಕೆ ಕರಗಿಸಿಕೊಳ್ಳಬಾರದು?

**"ನೀವು ಏಕನಿಷ್ಠೆಯಿಂದ ನಿಮ್ಮ ಮುಖವನ್ನು ಈ ಧರ್ಮದ ಕಡೆಗೆ ಕೇಂದ್ರೀಕರಿಸಿರಿ. ಲ್ಲಾಹನು ಮಾನವನನ್ನು ಸೃಷ್ಟಿಸಿದ ಪ್ರಕೃತಿಯಲ್ಲೇ ಸ್ಥಿರವಾಗಿರಿ."**

**(ಪವಿತ್ರ ಕುರ್‌ಆನ್, 30:30)**

ಇಸ್ಲಾಮ್ ಪ್ರಕೃತಿ ಧರ್ಮ ಮಾತ್ರವಲ್ಲದೆ ವಿಶ್ವ ಧರ್ಮವೂ ಆಗಿದೆ. ಯಾವ ಶ್ವದೊಳಗೆ ನಾವು ಬದುಕುತ್ತಿರುವೆವೋ ಯಾವ ವಿಶ್ವದ ನಿಯಮಗಳಿಗೆ ನಾವು ಬದ್ಧ ಾಗಿರುವೆವೋ ನಮ್ಮೆಲ್ಲ ಚಟುವಟಿಕೆಗಳನ್ನು ಯಾವ ವಿಶ್ವದ ನಿಯಮಗಳನುಸಾರ

ಮಾಡಲು ನಾವು ನಿರ್ಬಂಧಿತರಾಗಿರುವೆವೋ (ವಿಜ್ಞಾನವೆಂಬುದು ಪ್ರಕೃತಿ ನಿಯಮಗ ತಿಳುವಳಿಕೆಯ ಇನ್ನೊಂದು ಹೆಸರಾಗಿರುವುದರಿಂದ) ನಮ್ಮ ಭೌತಿಕ ವಿಕಾಸಕ್ಕೆ ಯಾ ವಿಶ್ವದ ನಿಯಮಗಳ ಪರಿಜ್ಞಾನ ಮತ್ತು ಸೂಕ್ತ ಬಳಕೆ ಅನಿವಾರ್ಯವೋ ಅಂತಹ ಈ ವಿಶ್ವವೇ ತನ್ನೆಲ್ಲ ಊಹಾತೀತ ವೈಶಾಲ್ಯಗಳ ಸಹಿತ ಅಲ್ಲಾಹನ ನಿರ್ದಿಷ್ಟ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತದೆ. ಅದು ಅವನ ನಿಯಮಗಳ ಬಂದಿ. ಹೀಗಿರುತ್ತಾ ನಾವು ಅವನ ನಿಯಮಗಳ ವಿರುದ್ಧ ಬಂಡೆದ್ದರೆ, ಅದರ ಪರಿಣಾಮವಾಗಿ ಈ ವಿಶ್ವ ವ್ಯವಸ್ಥೆ ಯೊಂದಿ ಸಂಘರ್ಷಕ್ಕಿಳಿದಂತಾಗುವುದು. ಅಂತಹ ಸಂಘರ್ಷ ಯಾವಾಗಲೂ ವಿನಾಶಕಾರಿ.

**"ಇವರೇನು ಅಲ್ಲಾಹನ ಅನುಸರಣಾ ರೀತಿಯನ್ನು (ಧರ್ಮ) ತ್ಯಜಿಸಿ ಬೇ ಯಾವುದಾದರೂ ರೀತಿಯನ್ನನುಸರಿಸಲು ಇಷ್ಟಪಡುತ್ತಾರೆಯೇ? ವಸ್ತುತಃ ಆಕಾಶಗ ಮತ್ತು ಭೂಮಿಯ ಸಕಲ ವಸ್ತುಗಳೂ ಬಯಸಿಯೋ ಬಯಸದೆಯೋ ಅಲ್ಲಾಹ ಆಜ್ಞಾಪಾಲಕಗಳಾಗಿ(ಮುಸ್ಲಿಮ್‌ಗಳಾಗಿ)ಯೇ ಇವೆ ಮತ್ತು ಸರ್ವರಿಗೂ ಅವನ ಕಡೆಗೆ ಮರಳಲಿಕ್ಕಿದೆ." (ಪವಿತ್ರ ಕುರ್‌ಆನ್, 3:83**

ಈಗ ನಾವು ಇನ್ನೊಂದು ಕೋನದಿಂದ ಚಿಂತಿಸಿ ನೋಡೋಣ. ಅಲ್ಲಾಹನು ನಮ ಅಪಾರ ಶಕ್ತಿ-ಸಾಮರ್ಥ್ಯಗಳನ್ನೂ ಪ್ರತಿಭೆಗಳನ್ನೂ ಸಂಪನ್ಮೂಲಗಳನ್ನೂ ದಯಪಾಲಿ ರುವನು. ಅವುಗಳನ್ನು ಬಳಸಿ ಒಂದೆಡೆ ನಾವು ಈ ಜಗತ್ತು ಮತ್ತು ಮಾನವ ಕುಲ ಅಭಿವೃದ್ಧಿಯ ಕಾರ್ಯಗಳನ್ನು ಮಾಡಿದರೆ ಇನ್ನೊಂದೆಡೆ ಅವುಗಳನ್ನೇ ಬಳಸಿ ಮಾನ ಕುಲದ ವಿನಾಶಕ್ಕೆ ಕಾರಣವಾಗುವ ಕಾರ್ಯಗಳನ್ನೂ ಮಾಡುತ್ತೇವೆ. ತನ್ನ ಈ ಸಾಮರ್ಥ್ಯ ಮತ್ತು ತನಗೆ ಪ್ರಾಪ್ತವಿರುವ ಸೌಲಭ್ಯಗಳನ್ನು ಯಾವ ರೀತಿ ಸರಿಯಾಗಿ ಬಳಸಿಕೊಳ್ಳಬೇಕ ಮತ್ತು ಬದುಕು ಸಾಗಿಸಬೇಕಾದ ಸರಿಯಾದ ವಿಧಾನವೇನು ಎಂಬುದನ್ನು ಮಾನವನಿ ಕಲಿಸಿಕೊಡದಿದ್ದರೆ ಅವನು ಸ್ವತಃ ತನ್ನನ್ನೂ ತನ್ನ ಜೊತೆಗೆ ವಿಶ್ವವನ್ನೂ ನಾಶಗೊಳಿಸ ವುದು ಖಂಡಿತ, ಮಾರ್ಗದರ್ಶನವೆಂಬುದು ಮನುಷ್ಯನ ಅತಿ ದೊಡ್ಡ ಅಗತ್ಯ ಹಾಗೂ ಅವನ ವಿಜಯ ಮತ್ತು ಶ್ರೇಯಸ್ಸಿಗಿರುವ ಮೊದಲ ಸೋಪಾನವಾಗಿದೆ. ಆದರೆ ಈ ಅವಶ್ಯಕತೆಯನ್ನು ಮನುಷ್ಯನು ಸ್ವತಃ ಪೂರೈಸಿಕೊಳ್ಳಬಲ್ಲನೇ?

ಈ ವರೆಗಿನ ಅನುಭವದಂತೆ, ಈ ಅಗತ್ಯಗಳನ್ನು ಮನುಷ್ಯನು ಸ್ವತ ಪೂರೈಸಿಕೊಳ್ಳಲು ಸಾಧ್ಯವಿಲ್ಲ. ಮನುಷ್ಯನ ಜ್ಞಾನವು ಅಪೂರ್ಣವಾಗಿದೆ. ಅವನ ಚಿಂತನ ಸೀಮಿತವಾಗಿದೆ. ಅವನ ತೀರ್ಮಾನಗಳು ಯಾವಾಗಲೂ ಗೊಂದಲ ಮತ್ತು ಬಿಕ್ಕಟ್ಟಿನಿಂ ಕೂಡಿರುತ್ತವೆ. ಅವನ ಬುದ್ಧಿಯು ಸ್ವಾರ್ಥ ಮತ್ತು ಅಭಿಲಾಷೆಗಳ ದಾಸ್ಯಕ್ಕೊಳಗಾಗಿದ್ದು ತಾತ್ಕಾಲಿಕ ಘಟನೆಗಳಿಂದ ತೀವ್ರವಾಗಿ ಪ್ರಭಾವಿತಗೊಳ್ಳುತ್ತಿರುತ್ತದೆ.

ಹೀಗಿರುತ್ತಾ, ಎಲ್ಲ ಸ್ವಾರ್ಥ, ಅಭಿಲಾಷೆ ಮತ್ತು ಹಿತಾಸಕ್ತಿಗಳಿಂದ ಮುಕ್ತ ವಾಗಿರುವ, ಎಲ್ಲ ಮನುಷ್ಯರ ಸೃಷ್ಟಿಕರ್ತನೇ ಮನುಷ್ಯನಿಗೆ ಸೂಕ್ತ ಮಾರ್ಗದರ್ಶನ ಕೊಡಬಲ್ಲನು. ಆ ಸೃಷ್ಟಿಕರ್ತ-ದೇವನು ಯಾವುದರಿಂದಲೂ ಪ್ರಭಾವಿತನಾಗುವುದು

ಅಸಂಭವ. ಅವನ ಜ್ಞಾನ ನಿಸ್ಸೀಮ ಹಾಗೂ ಪರಿಪೂರ್ಣವಾಗಿದೆ. ಅವನ ಬುದ್ಧಿ ನಿಷ್ಕಳಂಕವಾಗಿದೆ. ಮನುಷ್ಯನನ್ನೂ ಅವನ ಪ್ರಕೃತಿಯನ್ನೂ ಸೃಷ್ಟಿಸಿದ ದೇವನೇ ಮನುಷ್ಯ ಪ್ರಕೃತಿಯ ಅಗತ್ಯಗಳನ್ನು ಅತ್ಯಂತ ಸೂಕ್ಷ್ಮವಾಗಿ ಅರಿಯಬಲ್ಲನು. ಅವನೇ ಮಾನವನ ಸೋಲು-ಗೆಲುವುಗಳ ಎಲ್ಲ ರಹಸ್ಯಗಳನ್ನು ತಿಳಿಯಬಲ್ಲನು.

ಲೋಕದಲ್ಲಿ ಮನುಷ್ಯನು ಒಬ್ಬಂಟಿಯಾಗಿ ಬದುಕುವುದಿಲ್ಲ. ಅವನ ಜೊತೆ ಅವನ ಕುಟುಂಬ, ಬಂಧುಗಳು, ನೆರೆ-ಹೊರೆಯವರು, ಊರವರು, ದೇಶ ಬಾಂಧವರು ಮತ್ತು ಒಟ್ಟು ಮಾನವಕುಲ ಇರುತ್ತದೆ. ಅವರೆಲ್ಲರ ಜೊತೆ ಅವನಿಗೆ ಮತ್ತು ಅವನ ಜೊತೆ ಅವರೆಲ್ಲರ ಸಂಬಂಧವಿರುತ್ತದೆ. ಅವರೆಲ್ಲರ ಮೇಲೆ ಇವನ ಮತ್ತು ಇವನ ಮೇಲೆ ಅವರೆಲ್ಲರ ಬಾಧ್ಯತೆಗಳಿರುತ್ತವೆ. ಕೆಲವು ಕರ್ತವ್ಯ ಮತ್ತು ಹೊಣೆಗಾರಿಕೆಗಳಿರುತ್ತವೆ. ಇವರೆಲ್ಲರ ಜೊತೆ ಅವನ ಸಂಬಂಧವು ನ್ಯಾಯಪೂರ್ಣವಾಗಿರಬೇಕಾದುದು, ಇವರೆಲ್ಲರ ಜೊತೆ ಅವನ ವರ್ತನೆ-ನಡವಳಿಕೆಯು ನ್ಯಾಯ ಸಮ್ಮತ ಹಾಗೂ ಸಂತುಲಿತವಾಗಿರಬೇಕಾದುದು ಮತ್ತು ಅವನೊಬ್ಬನ ಪಾಲಿಗೆ ಮಾತ್ರವಲ್ಲದೆ ಅವನ ಕುಟುಂಬ, ಸಮಾಜ, ದೇಶ ಮತ್ತು ಒಟ್ಟು ಮಾನವಕುಲದ ಪಾಲಿಗೆ ನ್ಯಾಯ, ಶಾಂತಿ, ಪ್ರಗತಿ, ಯಶಸ್ಸು ಹಾಗೂ ಸಾರ್ಥಕತೆಯನ್ನು ಕೊಡಬಲ್ಲ ಒಂದು ಜೀವನ ಮಾರ್ಗವನ್ನು ಅವನು ಅನುಸರಿಸಬೇಕಾದುದು ಅತ್ಯಗತ್ಯ. ಅವನು ಅನುಸರಿಸುವ ಜೀವನ-ಮಾರ್ಗವು, ಅವನ ಮಾತ್ರವಲ್ಲದೆ ಒಟ್ಟು ಮಾನವಕುಲದ ಸಮಸ್ಯೆಗಳಿಗೆ ಪರಿಹಾರ ಪೊದಗಿಸಲು ಸಮರ್ಥವಾಗಿರಬೇಕು. ಅದು ಮಾನವನ ಅಂತರಂಗ-ಬಹಿರಂಗಗಳ ನಡುವೆ, ಶರೀರ-ಆತ್ಮ, ಮನ-ಮಸ್ತಿಷ್ಕ, ವ್ಯಕ್ತಿ-ಸಮಾಜ, ಸ್ತ್ರೀ-ಪುರುಷ, ಬಡವ-ಬಲ್ಲಿದ, ಕರಿಯ-ಬಿಳಿಯ ಹೀಗೆ ಎಲ್ಲರ ಮಧ್ಯೆ ಭಾವೈಕ್ಯವನ್ನು ಸ್ಥಾಪಿಸಲು ಶಕ್ತ ವಾಗಿರಬೇಕು. ಇವೆಲ್ಲವುಗಳಿಗೆ ಮತ್ತು ಇವರೆಲ್ಲರಿಗೆ ಶಾಂತಿ, ಸಂತೃಪ್ತಿ, ಅಭಿವೃದ್ಧಿ ಹಾಗೂ ಶ್ರೇಯಸ್ಸನ್ನು ತಂದು ಕೊಡುವ ಸಾಮರ್ಥ್ಯ-ಸಂಪನ್ನತೆ ಅದರೊಳಗಿರಬೇಕು.

ಇಷ್ಟು ಮಹತ್ವದ ಈ ಅಗತ್ಯವನ್ನು ಪೂರೈಸಲು ಮನುಷ್ಯನ ಬುದ್ಧಿ ಈ ತನಕ ಯಶಸ್ವಿಯಾಗಲಿಲ್ಲ. ಮುಂದೆಯೂ ಅದು ಯಶಸ್ವಿಯಾಗಲಾರದು. ಈ ವರೆಗೆ ಮನುಷ್ಯ ಬುದ್ಧಿಗೆ, ಮನುಷ್ಯನನ್ನು ಮನುಷ್ಯನಾಗಿ ಮಾರ್ಪಡಿಸುವ ಯಾವುದೇ ಸೂತ್ರವನ್ನು ಕಂಡು ಹಿಡಿಯಲು ಸಾಧ್ಯವಾಗಿಲ್ಲ. ಮನುಷ್ಯನನ್ನು ಎಲ್ಲ ಸ್ಥಿತಿಯಲ್ಲೂ ಅಪೇಕ್ಷಿತ ಸೀಮೆ ಗಳೊಳಗೆ ಬಂಧಿಸಿಡಬಲ್ಲಂತಹ ಹೊಣೆಗಾರಿಕೆಯ ಪ್ರಜ್ಞೆಯನ್ನು ಅವನಲ್ಲಿ ಚಿಗುರಿಸಲು ಅದಕ್ಕೆ ಸಾಧ್ಯವಾಗಿಲ್ಲ. ಮನುಷ್ಯ ಬುದ್ಧಿಗೆ, ಮಾನವನನ್ನು ಚಾರಿತ್ರ್ಯವಂತನಾಗಿ, ಮಾನವ ಪ್ರೇಮಿಯಾಗಿ ಬೆಳೆಸಲು ಬೇಕಾದ ತರಬೇತಿ ವ್ಯವಸ್ಥೆಯನ್ನು ಕೊಡಲು ಸಾಧ್ಯವಾಗಿಲ್ಲ. ಜಾತಿ-ಮತ, ದೇಶ-ವರ್ಣಗಳ ಭೇದವಿಲ್ಲದೆ ಎಲ್ಲರನ್ನು ಪ್ರೀತಿಸುವುದನ್ನು, ನಿಸ್ವಾರ್ಥವಾಗಿ ಎಲ್ಲರಿಗೆ ಸೇವೆ ಸಲ್ಲಿಸುವುದನ್ನು ಮನುಷ್ಯನಿಗೆ ಕಲಿಸಲು ಬುದ್ಧಿಗೆ ಸಾಧ್ಯವಾಗಿಲ್ಲ. ಈ ವೈಫಲ್ಯದ ಪರಿಣಾಮವಾಗಿಯೇ ಅಪಾರ ವೈಜ್ಞಾನಿಕ ಪ್ರಗತಿಯ ಹೊರತಾಗಿಯೂ, ಮಾನವ ಸಮಾಜ ವೈಫಲ್ಯ ದುಃಖ ಮತ್ತು ಸಂಕಟಗಳಿಂದ ಗೋಳಿಡುತ್ತದೆ. ಮಾನವನ ಅತ್ಯುತ್ತಮ ಪ್ರತಿಭೆ-ಸಾಮರ್ಥ್ಯಗಳು ಮತ್ತು ಅಪಾರ ಸಂಪತ್-ಸೌಕರ್ಯಗಳೆಲ್ಲಾ ಯುದ್ಧ

ಹಾಗೂ ಸಂಘರ್ಷಗಳಿಗೆ ಆಹುತಿ ಯಾಗುತ್ತಿವೆ. ನಮ್ಮ ಒಟ್ಟು ಪ್ರಪಂಚವನ್ನೇ ವಿನಾಶದ ಅಂಚಿಗೆ ತಲುಪಿಸಲಾಗಿದೆ:

"ಜನರ ಸ್ವಂತ ಕೈಗಳ ದುಡಿಮೆಯಿಂದ ನೆಲ-ಜಲಗಳಲ್ಲಿ ಕ್ಷೋಭೆಯುಂಟಾಗಿ ಬಿಟ್ಟಿದೆ." **(ಪವಿತ್ರ ಕುರ್‌ಆನ್, 30:41)**

## ಅದ್ವಿತೀಯ ಕೊಡುಗೆಗಳು

ಅಲ್ಲಾಹನ ಧರ್ಮವಾಗಿರುವ ಇಸ್ಲಾಮ್ ಬಂದಿರುವುದೇ ಮನುಷ್ಯನ ಈ ಮೂಲಭೂತ ಅಗತ್ಯಗಳನ್ನು ಪೂರೈಸಲಿಕ್ಕಾಗಿ. ಅದು ಮನುಷ್ಯನಿಗೆ ಸರಿಯಾದ, ಅವನ ಸಂಪೂರ್ಣ ಬದುಕನ್ನು ಯಶಸ್ವಿಗೊಳಿಸುವ, ಅವನೆಲ್ಲ ಸಾಮರ್ಥ್ಯಗಳನ್ನು ಅಪೇಕ್ಷಿತ ದಿಕ್ಕಿನಲ್ಲಿ ಪ್ರೋತ್ಸಾಹಿಸಿ ಬೆಳೆಸುವ ಮತ್ತು ಅವನೊಬ್ಬನ ಪಾಲಿಗೆ ಮಾತ್ರವಲ್ಲದೆ ಅವನಿಗಿರುವ ಈ ವಿಶ್ವದ ಪಾಲಿಗೂ ಅನುಗ್ರಹವಾಗಬಲ್ಲ, ಒಂದು ಸಮಗ್ರ ಜೀವನ ವಿಧಾನವನ್ನು ಕೊಡುತ್ತದೆ.

ದೇವನ ಧರ್ಮವಾಗಿರುವ ಇಸ್ಲಾಮ್ ಮನುಷ್ಯನಿಗೆ ಅವನ ಕುಟುಂಬ, ಬಂಧು-ಬಳಗ, ಸಮಾಜ, ದೇಶಬಾಂಧವರು, ವಿಶ್ವಬಾಂಧವರು ಮತ್ತಿತರ ಎಲ್ಲರ ಹಕ್ಕು- ಬಾಧ್ಯತೆಗಳನ್ನು ನ್ಯಾಯಪೂರ್ಣವಾಗಿ ನಿಶ್ಚಯಿಸುವ, ನ್ಯಾಯ ಹಾಗೂ ಸಮತೋಲನದೊಂದಿಗೆ ಎಲ್ಲ ಸಮಸ್ಯೆಗಳನ್ನು ಬಗೆಹರಿಸುವ, ಮನುಷ್ಯ ಬದುಕಿನ ವಿವಿಧ ರಂಗಗಳಲ್ಲದೆ ಮಾನವ ಕುಲದ ವಿವಿಧ ವರ್ಗಗಳಿಗೆ ಅಭಿವೃದ್ಧಿ ಮತ್ತು ವಿಕಾಸದ ದಾರಿ ತೋರುವ, ಮಾನವನ ಅಂತರಂಗ-ಬಹಿರಂಗ, ಆತ್ಮ-ಶರೀರ, ಮನ-ಮಸ್ತಿಷ್ಕ ಹೀಗೆ ಎಲ್ಲದಕ್ಕೂ ಸಂತೃಪ್ತಿ ಮತ್ತು ಕೃತಾರ್ಥತೆಯನ್ನು ತಂದು ಕೊಡಬಲ್ಲ ಮತ್ತು ಇಹ-ಪರಗಳಲ್ಲಿ ಅವನ ಪಾಲಿಗೆ ವಿಜಯದ ದಾರಿ ತೆರೆಯುವ ಒಂದು ಸಮಗ್ರ ವ್ಯವಸ್ಥೆಯನ್ನು ಕೊಡುತ್ತದೆ.

ಸೃಷ್ಟಿಕರ್ತನ ಧರ್ಮವಾಗಿರುವ ಇಸ್ಲಾಮ್ ಮಾನವನನ್ನು ಮಾನವನಾಗಿ ಮಾಡುತ್ತದೆ. ಅದು ಮಾನವ ಮನಸ್ಸಿನಲ್ಲಿ ಅಲ್ಲಾಹನ ಭಯ ಮತ್ತು ಭಕ್ತಿಯನ್ನು ನೆಲೆಗೊಳಿಸುತ್ತದೆ. ಅವನಲ್ಲಿ ದೇವದಾಸ್ಯದ, ದೇವ ಪ್ರೇಮದ, ವಿಧೇಯತೆ ಮತ್ತು ಕೃತಜ್ಞತೆಯ ಭಾವವನ್ನು ಬೆಳೆಸುತ್ತದೆ. ದೇವನು ಎಲ್ಲೆಡೆ, ಎಲ್ಲ ಸಂದರ್ಭ, ಎಲ್ಲ ಕಾಲ ಮತ್ತು ಎಲ್ಲ ಸ್ಥಳಗಳಲ್ಲಿ ನಿನ್ನ ಜೊತೆಗಿರುತ್ತಾನೆ. ನಿನ್ನ ಒಂದೊಂದು ಕೃತ್ಯ, ಚಲನವಲನ ಮತ್ತು ಆಲೋಚನೆಯನ್ನೂ ತಿಳಿದಿರುತ್ತಾನೆ ಎಂದು ಅದು ಮನುಷ್ಯನಿಗೆ ಮನವರಿಕೆ ಮಾಡಿಸುತ್ತದೆ. ಅವನ ಮಲಕ್ (ದೇವಚರ)ಗಳು ಅನುಕ್ಷಣವೂ ಎಲ್ಲೆಡೆಯೂ ಮನುಷ್ಯನ ನಿಕಟವಿದ್ದು ಅವನ ಸಂಪೂರ್ಣ ಬದುಕಿನ ದಾಖಲೆಯನ್ನು ರಚಿಸುವುದರಲ್ಲಿ ನಿರತರಾಗಿದ್ದಾರೆ. ಮರಣಾನಂತರ ಪುನರುತ್ಥಾನದ ವೇಳೆ ಪ್ರತಿಯೊಬ್ಬ ಮನುಷ್ಯನೂ ಈ ದಾಖಲೆಯೊಂದಿಗೆ ಅಲ್ಲಾಹನ ನ್ಯಾಯಾಲಯದಲ್ಲಿ ಹಾಜರುಗೊಳಿಸಲ್ಪಡುವನು. ಮನುಷ್ಯನು ತನ್ನ ಇಹದ ಬದುಕಿನಲ್ಲಿ ಸತ್ಯಧರ್ಮವನ್ನನು ಸರಿಸುತ್ತಾ ಸತ್ಕರ್ಮ ಮಾಡಿದ್ದರೆ ಅದರ ಫಲವಾಗಿ ಅಲ್ಲಿ ಆತನಿಗೆ ಸ್ವರ್ಗದ ಶಾಶ್ವತ ಸುಖ ಮತ್ತು ಅಪಾರ ಸತ್ಫಲಗಳನ್ನು ಕೊಡುವ ತೀರ್ಮಾನವಾಗುವುದು ಇನ್ನು ಇಹದ ಬದುಕಿನಲ್ಲಿ ಮಾನವನು ಸತ್ಯ ಮತ್ತು ಸಜ್ಜನಿಕೆಯನ್ನು ತಿರಸ್ಕರಿಸಿ ಬದುಕಿದ್ದರೆ, ಅಲ್ಲಿ ಅವನಿಗೆ ನರಕದ

ಶಾಶ್ವತ, ಅಪಮಾನಕಾರಿ ಹಾಗೂ ಯಾತನಾಮಯ ಶಿಕ್ಷೆಯನ್ನು ವಿಧಿಸಲಾಗುವುದು ಎಂಬ ಪ್ರಜ್ಞೆಯನ್ನು ಅದು ಮಾನವನಲ್ಲಿ ಮೂಡಿಸುತ್ತದೆ. ತನ್ನ ಪ್ರತಿಯೊಂದು ಚಟುವಟಿಕೆಯ ಬಗ್ಗೆಯೂ ಪರಲೋಕದಲ್ಲಿ ವಿಚಾರಣೆ ಎದುರಿಸಬೇಕಾಗುವುದು ಎಂಬ ಈ ಪ್ರಜ್ಞೆ ಹಾಗೂ ಸ್ವರ್ಗದ ಸುಖ ಮತ್ತು ನರಕದ ಸಂಕಟಗಳ ಕಲ್ಪನೆಯು ಮನುಷ್ಯನನ್ನು ಅತ್ಯಂತ ಹೊಣೆಗಾರ ಹಾಗೂ ಚಾರಿತ್ರ್ಯಶೀಲ ವ್ಯಕ್ತಿಯಾಗಿ ಮಾರ್ಪಡಿಸುವ ಪರಿಣಾಮಕಾರೀ ಸಾಧನವಾಗಿದೆ.

ಇಸ್ಲಾಮ್ ಮಾನವನಿಗೆ ಒಂದು ಆರಾಧನಾ ವ್ಯವಸ್ಥೆಯನ್ನು ಪರಿಚಯಿಸುತ್ತದೆ. ಈ ವ್ಯವಸ್ಥೆಯು ದೇವನ ಜೊತೆ ಮನುಷ್ಯನ ಸಂಬಂಧವನ್ನು ಬಲಪಡಿಸಿ, ವೃದ್ಧಿಸುವಲ್ಲಿ ಮತ್ತು ಮನುಷ್ಯನನ್ನು ಮಾನವೀಯತೆ ಹಾಗೂ ಚಾರಿತ್ರ್ಯದ ಸಾಕಾರ ಮೂರ್ತಿಯಾಗಿ ಬೆಳೆಸುವಲ್ಲಿ ಅತ್ಯುತ್ತಮ ಪಾತ್ರ ನಿರ್ವಹಿಸುತ್ತದೆ.

ಇಸ್ಲಾಮ್, ಮನುಷ್ಯನಿಗೆ ಅತ್ಯುನ್ನತ ನೈತಿಕ ಮೌಲ್ಯಗಳನ್ನು ಕೊಡುತ್ತದೆ. ಪ್ರತಿಯೊಂದು ಸದ್ಗುಣವನ್ನು ಭಾರೀ ಫಲಪ್ರದವೆಂದು ವರ್ಣಿಸಿ ಪ್ರೋತ್ಸಾಹಿಸುತ್ತದೆ. ಪ್ರತಿಯೊಂದು ದುರ್ಗುಣದ ಇಹ-ಪರ ದುಷ್ಪರಿಣಾಮಗಳ ಬಗ್ಗೆ ಎಚ್ಚರಿಸಿ ಅವುಗಳನ್ನು ನಿರುತ್ತೇಜಿಸುತ್ತದೆ. ಅದು ರಾಜಕೀಯ ಮತ್ತು ಆರ್ಥಿಕತೆಯ ಸಹಿತ ಜೀವನದ ಎಲ್ಲ ರಂಗಗಳಲ್ಲಿ ನೈತಿಕ ಮೌಲ್ಯಗಳು ರಾರಾಜಿಸುತ್ತಿರುವುದನ್ನು ನೋಡಬಯಸುತ್ತದೆ. ನೈತಿಕ ಮೌಲ್ಯಗಳನ್ನು ಜಾತಿ, ಕುಲ, ದೇಶ, ಭಾಷೆ, ವರ್ಣ ಮುಂತಾದ ಎಲ್ಲ ತಾರತಮ್ಯಗಳಿಂದ ಮುಕ್ತವಾಗಿ ಎಲ್ಲಕ್ಕಿಂತ ಉನ್ನತವೆಂದು ಪರಿಗಣಿಸುವ ಇಸ್ಲಾಮ್ ಧರ್ಮ, ಒಳಿತುಗಳನ್ನು ಉತ್ತೇಜಿಸುವುದು ಮತ್ತು ಕೆಡುಕುಗಳನ್ನು ತಡೆಯುವುದೇ ಒಂದು ಇಸ್ಲಾಮೀ ಸರಕಾರದ ಅಸ್ತಿತ್ವದ ಪ್ರಮುಖ ಉದ್ದೇಶವೆಂದು ಘೋಷಿಸುತ್ತದೆ.

**"ಇವರು ಎಂಥವರೆಂದರೆ, ನಾವು ಇವರಿಗೆ ಭೂಮಿಯಲ್ಲಿ ಅಧಿಕಾರ ಪ್ರದಾನ ಮಾಡಿದರೆ ಇವರು ನಮಾಝ್ ಸಂಸ್ಥಾಪಿಸುವರು, ಝಕಾತ್ ಕೊಡುವರು, ಒಳಿತಿನ ಆಜ್ಞೆ ಕೊಡುವರು ಮತ್ತು ಕೆಡುಕಿನಿಂದ ತಡೆಯುವರು. ಸಕಲ ವ್ಯವಹಾರಗಳ ಅಂತಿಮ ಪರಿಣಾಮವು ಅಲ್ಲಾಹನ ಕೈಯಲ್ಲಿದೆ." (ಪವಿತ್ರ ಕುರ್‌ಆನ್, 22:41)**

ಇಸ್ಲಾಮ್, ಸಂಪೂರ್ಣ ಮಾನವಕುಲವನ್ನು ಒಬ್ಬ ದೇವನ ಸೃಷ್ಟಿ, ಒಂದೇ ದಂಪತಿಯ ಮಕ್ಕಳು ಮತ್ತು ಒಂದೇ ಕುಟುಂಬವೆಂದು ಪರಿಗಣಿಸುತ್ತದೆ. ಎಲ್ಲರ ಪ್ರಾಣ, ಸೊತ್ತು ಮತ್ತು ಮಾನವು ಗೌರವಾರ್ಹವೆಂದೂ ಎಲ್ಲರೂ ಸಮಾನ ನ್ಯಾಯಕ್ಕೆ ಅರ್ಹರೆಂದೂ ಅದು ಘೋಷಿಸುತ್ತದೆ. ಎಲ್ಲರ ಸೇವೆ ಮಾಡಲು ಮತ್ತು ಎಲ್ಲರ ಜೊತೆ ಸೌಜನ್ಯದಿಂದ ವರ್ತಿಸಲು ಅದು ಆದೇಶಿಸುತ್ತದೆ.

ಇಸ್ಲಾಮ್, ಮನುಷ್ಯರ ಹಕ್ಕುಗಳಿಗೆ ಮತ್ತು ಒಬ್ಬನಿಗೆ ಇನ್ನೊಬ್ಬನ ಬಗ್ಗೆ ಇರುವ ಬಾಧ್ಯತೆಗಳಿಗೆ ಅಸಾಮಾನ್ಯ ಮಹತ್ವ ಕೊಟ್ಟಿದೆ. ಅದು ತಂದೆ, ತಾಯಿ, ಸಂಬಂಧಿಕರು, ನೆರೆಯವರು, ಬಡವರು, ಅನಾಥರು, ನಿರಾಶ್ರಿತರು, ವಿಧವೆಯರು, ಪ್ರಯಾಣಿಕರು, ಗುಲಾಮರು, ಮುಸ್ಲಿಮರು, ಮುಸ್ಲಿಮೇತರರು ಹೀಗೆ ಜಾತಿ-ಭೇದ ತೋರದೆ ಪ್ರತಿಯೊಬ್ಬರ ಬಗ್ಗೆಯೂ ಒಬ್ಬ ಮನುಷ್ಯನಿಗಿರುವ ಬಾಧ್ಯತೆಗಳೇನೆಂಬುದನ್ನು ವ್ಯಕ್ತವಾಗಿ ತಿಳಿಸುತ್ತದೆ ಮತ್ತು

ಈ ಬಾಧ್ಯತೆಗಳ ಈಡೇರಿಕೆಯನ್ನು ಕಡ್ಡಾಯಗೊಳಿಸಿದೆ. ಮನುಷ್ಯರಿಗೆ ಸಂಬಂಧಿಸಿದ ಈ ಬಾಧ್ಯತೆಗಳನ್ನು ಒಬ್ಬ ವ್ಯಕ್ತಿಯು ಪೂರ್ತಿಗೊಳಿಸದೆ ಬಿಟ್ಟರೆ, ಅವನು ದೇವನಿಗೆ ಸಂಬಂಧಿಸಿದಂತೆ ಮಾಡಿರುವ ಎಲ್ಲ ಆರಾಧನಾ ಕರ್ಮಗಳೂ ನಿರರ್ಥಕವಾಗುವುವು ಎಂದು ಅದು ಎಚ್ಚರಿಸುತ್ತದೆ. ಒಬ್ಬ ವ್ಯಕ್ತಿಯು ಇತರ ಮನುಷ್ಯರ ಹಕ್ಕುಗಳಿಗೆ ಚ್ಯುತಿಯುಂಟು ಮಾಡಿದರೆ, ಸ್ವತಃ ಆ ಜನರು ಅವನನ್ನು ಕ್ಷಮಿಸುವ ತನಕ ಅಲ್ಲಾಹನು ಕೂಡಾ ಅವನನ್ನು ಕ್ಷಮಿಸುವುದಿಲ್ಲ.

ಇದುವೇ ಇಸ್ಲಾಮ್. ನಿಜವಾಗಿ ಇದು ಮನುಷ್ಯನ ಅತಿ ದೊಡ್ಡ ಅಗತ್ಯವಾಗಿರುವ ಜೊತೆಗೇ ಇದು ಮಾನವನ ಪಾಲಿಗೆ ಅಲ್ಲಾಹನ ಅತಿ ದೊಡ್ಡ ಅನುಗ್ರಹವೂ ಹೌದು. ಸ್ವತಃ ಅಲ್ಲಾಹನೇ ಇದನ್ನು ತನ್ನ ಅನುಗ್ರಹಗಳ ಸಂಪೂರ್ಣತೆ ಎಂದು ವರ್ಣಿಸಿರುವನು. ಏಕೆಂದರೆ ಈ ಧರ್ಮವು ಅಲ್ಲಾಹನ ಇತರೆಲ್ಲಾ ಅನುಗ್ರಹಗಳ ಸೂಕ್ತ ಬಳಕೆಯನ್ನು ಕಲಿಸುತ್ತದೆ. ಮನುಷ್ಯನು ಅಲ್ಲಾಹನ ಅನುಗ್ರಹಗಳನ್ನು ಅಪೇಕ್ಷಿತ ರೀತಿಯಲ್ಲಿ ಬಳಸಿದಾಗ ಮಾತ್ರವೇ ಅವು ಅವನ ಪಾಲಿಗೆ ನಿಜವಾದ ಅನುಗ್ರಹಗಳಾಗಿ, ಅವನ ಇಹ-ಪರ ಯಶಸ್ಸಿನ ಸಾಧನಗಳಾಗುತ್ತವೆ. ಇದಕ್ಕೆ ತದ್ವಿರುದ್ಧವಾಗಿ, ಅಲ್ಲಾಹನ ಅನುಗ್ರಹಗಳನ್ನು ಯದ್ವಾತದ್ವಾ ಬಳಸಿಕೊಂಡರೆ ಈ ಅನುಗ್ರಹಗಳೇ ಶಾಪವಾಗಿ ಮಾರ್ಪಡುತ್ತವೆ.

**"ಇಂದು ಸತ್ಯನಿಷೇಧಿಗಳಿಗೆ ನಿಮ್ಮ ಧರ್ಮದ ಬಗ್ಗೆ ಸಂಪೂರ್ಣ ನಿರಾಶೆಯುಂಟಾಗಿರುತ್ತದೆ. ಆದುದರಿಂದ ನೀವು ಅವರನ್ನು ಭಯ ಪಡಬೇಡಿರಿ; ನನ್ನನ್ನು ಭಯಪಡಿರಿ. ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ. ನನ್ನ ಕೊಡುಗೆಯನ್ನು ನಿಮ್ಮ ಮೇಲೆ ಪರಿಪೂರ್ಣಗೊಳಿಸಿದ್ದೇನೆ ಮತ್ತು ಇಸ್ಲಾಮನ್ನು ನಿಮ್ಮ ಧರ್ಮವೆಂಬ ನೆಲೆಯಲ್ಲಿ ಅಂಗೀಕರಿಸಿದ್ದೇನೆ." (ಪವಿತ್ರ ಕುರ್‌ಆನ್, 5:3)**

**"ನೀವು ಕೃತಜ್ಞರಾಗಿದ್ದರೆ ನಾನು ನಿಮಗೆ ಇನ್ನೂ ಹೆಚ್ಚು ಪ್ರದಾನ ಮಾಡುವೆನೆಂದೂ ನೀವು ಕೃತಘ್ನತೆ ತೋರಿದರೆ ನನ್ನ ಶಿಕ್ಷೆಯು ಅತ್ಯಂತ ಕಠಿಣವಾಗಿದೆಯೆಂದೂ ನಿಮ್ಮ ಪ್ರಭು ಎಚ್ಚರಿಕೆ ಕೊಟ್ಟಿದ್ದುದನ್ನೂ ಸ್ಮರಿಸಿರಿ." (ಪವಿತ್ರ ಕುರ್‌ಆನ್, 14:7)**

ಅಲ್ಲಾಹನು ಮನುಷ್ಯನ ಪಾಲಿಗೆ ಇಸ್ಲಾಮಿನ ಹೊರತು ಬೇರಾವುದೇ ಧರ್ಮವನ್ನು ಮೆಚ್ಚಿಲ್ಲ -ಅಂಗೀಕರಿಸಿಲ್ಲ. ಆದ್ದರಿಂದ ಇಸ್ಲಾಮಿನ ಹೊರತು ಬೇರಾವುದೇ ಜೀವನ ವಿಧಾನವನ್ನು ಅನುಸರಿಸುವವನು ಅಲ್ಲಾಹನ ಕ್ರೋಧಕ್ಕೆ ಪಾತ್ರನಾಗುವನಲ್ಲದೆ, ತನ್ನ ಇಹ-ಪರಗಳನ್ನು ನಾಶಪಡಿಸಿಕೊಳ್ಳುವನು. ಅವನ ಎಲ್ಲ ಕರ್ಮಗಳೂ ಅಲ್ಲಾಹನ ಬಳಿ ತಿರಸ್ಕರಿಸಲ್ಪಡುವವು.

**"ಯಾರಾದರೂ ಈ ವಿಧೇಯತೆಯ (ಇಸ್ಲಾಮ್) ಹೊರತು ಯಾವುದಾದರೂ ಇತರ ಪದ್ಧತಿಯನ್ನು ಸ್ವೀಕರಿಸಲಿಚ್ಛಿಸಿದರೆ, ಅವನ ಆ ಪದ್ಧತಿಯನ್ನು ಎಷ್ಟು ಮಾತ್ರಕ್ಕೂ ಮಾನ್ಯ ಮಾಡಲಾಗದು ಮತ್ತು ಪರಲೋಕದಲ್ಲಿ ಅವನು ವಿಫಲನೂ ಹತಾಶನೂ ಆಗಿ ತೀರುವನು."**

**(ಪವಿತ್ರ ಕುರ್‌ಆನ್, 3:85)**

ಇಸ್ಲಾಮ್, ಮನುಷ್ಯನಿಗೆ ಪರಲೋಕದಲ್ಲಿ ಮಾತ್ರವಲ್ಲದೆ ಇಹಲೋಕದಲ್ಲಿ ವಿಜಯ ಮತ್ತು ಶ್ರೇಯಸ್ಸನ್ನು ತಂದುಕೊಡುತ್ತದೆ.

"ನೀವು ಧೈರ್ಯಗುಂದಬೇಡಿರಿ, ವ್ಯಥೆಪಡಲೂಬೇಡಿರಿ, ನೀವು ವಿಶ್ವಾಸಿಗಳಾಗಿದ್ದರೆ ನೀವೇ ವಿಜಯಿಗಳಾಗುವಿರಿ." (ಪವಿತ್ರ ಕುರ್‌ಆನ್, 3:139)

ಸ್ವತಃ ಚರಿತ್ರೆ ಕೂಡಾ ಈ ಸತ್ಯಕ್ಕೆ ಸಾಕ್ಷಿಯಾಗಿದೆ. ಪ್ರವಾದಿವರ್ಯರ(ಸ) ಮೇಲೆ ವಿಶ್ವಾಸವಿಟ್ಟ ಸಹಾಬಿಗಳು ಇಸ್ಲಾಮಿನ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದಾಗ, ಜಗತ್ತಿನಲ್ಲಿ ಅಪರಿಚಿತರಾಗಿದ್ದ ಆ ಜನರು ಅತಿ ಶೀಘ್ರದಲ್ಲಿ ನಾಗರಿಕ ಜಗತ್ತಿನ ಒಂದು ದೊಡ್ಡ ಭಾಗದ ನಿಯಂತ್ರಕರಾಗಿ ಬೆಳೆದರು. ಈ ಲೋಕದಲ್ಲಿ ಯಾರಿಗಾದರೂ ಸಿಗಬಹುದಾದ ಅತಿ ಹೆಚ್ಚಿನ ವಿಜಯ, ಪ್ರಸಿದ್ಧಿ ಮತ್ತು ಜನಪ್ರಿಯತೆ ಅವರಿಗೆ ಪ್ರಾಪ್ತವಾಯಿತು. ಅವರ ಬಗ್ಗೆ ಅಲ್ಲಾಹನು ಮಾಡಿದ್ದ ಈ ವಾಗ್ದಾನವು ಬಹುಶೀಘ್ರ ಪೂರ್ತಿಗೊಂಡಿತು:

"ನಿಮ್ಮ ಪೈಕಿ ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗಿದವರೊಡನೆ, ಅಲ್ಲಾಹನು ಅವರಿಗಿಂತ ಮುಂಚಿನವರನ್ನು ಭೂಮಿಯಲ್ಲಿ ಪ್ರತಿನಿಧಿಗಳಾಗಿ ಮಾಡಿದಂತೆಯೇ ಅವರನ್ನೂ ಮಾಡುವನೆಂದು ವಾಗ್ದಾನ ಮಾಡಿರುವನು. ತಾನು ಅವರಿಗಾಗಿ ಮೆಚ್ಚಿರುವ ಅವರ ಧರ್ಮವನ್ನು ಸುಭದ್ರ ಬುನಾದಿಗಳಲ್ಲಿ ಸ್ಥಾಪಿಸುವನು ಮತ್ತು ಅವರ (ಪ್ರಚಲಿತ) ಭಯಾವಸ್ಥೆಯನ್ನು ಶಾಂತಿಯಾಗಿ ಮಾರ್ಪಡಿಸಿ ಬಿಡುವನು. ಅವರು ನನ್ನ ದಾಸ್ಯ-ಆರಾಧನೆ ಮಾತ್ರ ಮಾಡಲಿ ಮತ್ತು ನನ್ನೊಂದಿಗೆ ಯಾರನ್ನೂ ಸಹಭಾಗಿಗಳಾಗಿ ಮಾಡದಿರಲಿ, ಇದಾದ ಬಳಿಕ ಯಾರು 'ದೇವಸಹಭಾಗಿತ್ವ' ಮಾಡುವರೋ ಅವರೇ ಕರ್ಮಭ್ರಷ್ಟರು."

(ಪವಿತ್ರ ಕುರ್‌ಆನ್, 24:55)

ತನ್ನ ಮೆಚ್ಚುಗೆ ಮತ್ತು ಪರಲೋಕದ ವಿಜಯದ ಬಗ್ಗೆ ಅಲ್ಲಾಹನು ಮುಂಗಡ ವಾಗಿಯೇ ಮಾತು ಕೊಟ್ಟಿರುವನು:

"ಸತ್ಯವಿಶ್ವಾಸ ಸ್ವೀಕರಿಸಿದವರೂ ಸತ್ಕರ್ಮ ಮಾಡಿದವರೂ ಅತ್ಯುತ್ತಮ ಸೃಷ್ಟಿಗಳು. ಅವರ ಪ್ರತಿಫಲ ಅವರ ಪ್ರಭುವಿನ ಬಳಿ ಶಾಶ್ವತ ನಿವಾಸದ ಸ್ವರ್ಗೋದ್ಯಾನಗಳಾಗಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅವರು ಅವುಗಳಲ್ಲಿ ಸದಾಕಾಲ ವಾಸಿಸುವರು. ಅಲ್ಲಾಹ್ ಅವರಿಂದ ಸಂಪ್ರೀತನಾದನು ಮತ್ತು ಅವರು ಅಲ್ಲಾಹನಿಂದ ಸಂಪ್ರೀತರಾದರು. ತನ್ನ ಪ್ರಭುವನ್ನು ಭಯಪಟ್ಟವನಿಗೆ ಇದೆಲ್ಲವೂ ಇದೆ."

(ಪವಿತ್ರ ಕುರ್‌ಆನ್, 98:7-8)

ಎಂತಹ ಮಹಾ ಸೌಭಾಗ್ಯ! "ಅಲ್ಲಾಹನು ಅವರಿಂದ ಮತ್ತು ಅವರು ಅಲ್ಲಾಹನಿಂದ ಸಂತೃಪ್ತರಾದರು"!

ಮೇಲಿನ ವಾಕ್ಯಗಳಿಂದ ಸ್ಪಷ್ಟವಾಗುವಂತೆ, ಇಹ-ಪರಗಳ ವಿಜಯವು ಕೇವಲ ಸಹಾಬಿವರ್ಯರಿಗೆ(ರ) ಮಾತ್ರ ಸೀಮಿತವಲ್ಲ. ಅಚಲ ವಿಶ್ವಾಸ ಮತ್ತು ಉನ್ನತ ಸತ್ಕರ್ಮಗಳನ್ನು ತಮ್ಮೊಳಗೆ ಬೆಳೆಸಿಕೊಂಡು, ಎಲ್ಲ ಬಗೆಯ ಕೆಡುಕು ಮತ್ತು ಆಜ್ಞೋಲ್ಲಂಘನೆಗಳಿಂದ ದೂರವಿದ್ದು, ದೇವದತ್ತ ಇಸ್ಲಾಮ್ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸುವ ಎಲ್ಲರೂ ಈ ವಿಜಯಕ್ಕೆ ಅರ್ಹರಾಗಿರುವರು.

❀❀❀

# ದೇವ-ಮಾನವ ಸಂಬಂಧ

ಇಸ್ಲಾಮ್ ಎಂದರೆ ಅಲ್ಲಾಹನ ದಾಸ್ಯ-ಅನುಸರಣೆ ಮತ್ತು ತನ್ನನ್ನು ಸಂಪೂರ್ಣವಾಗಿ ಅವನಿಗೆ ಅರ್ಪಿಸಿಕೊಳ್ಳುವುದು ಎಂದರ್ಥ. ಈ ದೃಷ್ಟಿಯಿಂದ ನೋಡಿದರೆ ಅಲ್ಲಾಹನ ಜೊತೆ ಸರಿಯಾದ ಮತ್ತು ಜೀವಂತ ಸಂಬಂಧವನ್ನು ಸ್ಥಾಪಿಸಿಕೊಳ್ಳುವುದು ಇಸ್ಲಾಮಿನ ಒಂದು ಮೂಲಭೂತ ಆಧಾರ ಸ್ಥಂಭವೆಂದು ಮಾತ್ರ ಅಲ್ಲ, ಅದುವೇ ಇಸ್ಲಾಮಿನ ಒಂದು ಜೀವಾಳ ಎಂದೂ ಹೇಳಬಹುದು. ಸ್ವತಃ ಪ್ರವಾದಿ ಮುಹಮ್ಮದ್‌ರವರು(ಸ) ಕೂಡಾ ಅಲ್ಲಾಹನ ಮೇಲಿನ ವಿಶ್ವಾಸ ಮತ್ತು ಆ ವಿಶ್ವಾಸದಲ್ಲಿ ಸ್ಥಿರವಾಗಿ ನಿಲ್ಲುವುದನ್ನೇ ಸಾಕ್ಷಾತ್ ಇಸ್ಲಾಮ್ ಎಂದು ಕರೆದಿರುವರು.

ಹಝ್ರತ್ ಸುಫ್ಯಾನ್ ಬಿನ್ ಅಬ್ದುಲ್ಲಾ ಸಖಫೀ(ರ) ವರದಿ ಮಾಡಿರುವರು: "ಅಲ್ಲಾಹನ ಸಂದೇಶವಾಹಕರೇ! ಇಸ್ಲಾಮಿನ ಬಗ್ಗೆ, ನಿಮ್ಮ ಬಳಿಕ ನಾನು ಬೇರೆ ಯಾರೊಡನೆಯೂ ಏನನ್ನೂ ಕೇಳುವ ಅಗತ್ಯವೇ ಬರದಂತಹ ಒಂದು ಮಾತನ್ನು ನನಗೆ ತಿಳಿಸಿರಿ" ಎಂದು ನಾನು ಒಮ್ಮೆ ಬಿನ್ನವಿಸಿದೆ. ಆಗ ಪ್ರವಾದಿ(ಸ), "ಅಲ್ಲಾಹನ ಮೇಲೆ ನಾನು ವಿಶ್ವಾಸವಿಟ್ಟೆನೆಂದು ನೀನು ಘೋಷಿಸು. ಆ ಬಳಿಕ (ಆ ವಿಶ್ವಾಸದಲ್ಲಿ) ಸ್ಥಿರವಾಗಿ ನಿಲ್ಲು" ಎಂದು ಹೇಳಿದರು. (ಬುಖಾರಿ - ಮುಸ್ಲಿಮ್)

ಮನುಷ್ಯನು ಅಲ್ಲಾಹನ ಮೇಲೆ ವಿಶ್ವಾಸವಿಟ್ಟು ಅವನೊಂದಿಗೆ ಸಂಬಂಧ ಸ್ಥಾಪಿಸಿಕೊಂಡು, ಕೊನೆ ತನಕ ಅದನ್ನು ಉಳಿಸಿಕೊಂಡರೆ ಅದು ಅವನ ಇಹ-ಪರ ವಿಜಯಕ್ಕೆ ಹೇತುವಾಗುತ್ತದೆ. ಪವಿತ್ರ ಕುರ್‌ಆನ್ ಈ ಕುರಿತು ಹೀಗೆ ಹೇಳಿದೆ;

**"ನಮ್ಮ ಪ್ರಭು ಅಲ್ಲಾಹನು ಎಂದು ಹೇಳಿ ಆ ಬಳಿಕ ಅದರಲ್ಲೇ ಸ್ಥಿರವಾಗಿ ನಿಂತು ಬಿಟ್ಟವರ ಮೇಲೆ ಖಂಡಿತವಾಗಿಯೂ ದೇವಚರರು ಇಳಿಯುತ್ತಾರೆ ಮತ್ತು ಹೇಳುತ್ತಾರೆ; ಹೆದರಬೇಡಿರಿ, ಖೇದಿಸಬೇಡಿರಿ ನಿಮಗೆ ವಾಗ್ದಾನ ಮಾಡಲಾಗಿರುವ ಸ್ವರ್ಗದ ಸುವಾರ್ತೆಯಿಂದ ಸಂತಸಗೊಳ್ಳಿರಿ. ನಾವು ಈ ಲೋಕದ ಜೀವನದಲ್ಲೂ ಪರಲೋಕದಲ್ಲೂ ನಿಮ್ಮ ಸಂಗಾತಿಗಳಾಗಿದ್ದೇವೆ. ಅಲ್ಲಿ ನೀವು ಬಯಸಿದ್ದೆಲ್ಲವೂ ನಿಮಗೆ ಸಿಗುವುದು. ನೀವು ಆಶಿಸಿದ ಪ್ರತಿಯೊಂದು ವಸ್ತುವೂ ನಿಮ್ಮದಾಗುವುದು. ಮಹಾ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುವವನ ಕಡೆಯಿಂದ ನಿಮಗಿರುವ ಆತಿಥ್ಯವಿದು."**

**(ಪವಿತ್ರ ಕುರ್‌ಆನ್, 41:30-32)**

ಈಗ ನಾವು ಅಲ್ಲಾಹನೊಂದಿಗೆ ಮನುಷ್ಯನು ಇಟ್ಟುಕೊಳ್ಳಬೇಕಾದ ಸಂಬಂಧದ ಕೆಲವು ಮುಖ್ಯ ಮುಖಗಳನ್ನು ನೋಡೋಣ.

## ಅಲ್ಲಾಹ್ ಮಾತ್ರ ಆರಾಧನಾರ್ಹ

"ಲಾ ಇಲಾಹ ಇಲ್ಲಲ್ಲಾಹ್" ಎಂಬುದು ಇಸ್ಲಾಮಿನ ಮೂಲಭೂತ ತತ್ವ. ಅಂದರೆ, ಅಲ್ಲಾಹನ ಹೊರತು ಬೇರಾವ ಆರಾಧ್ಯರಿಲ್ಲ. ಅಲ್ಲಾಹನು ಮಾತ್ರ ಆರಾಧನೆಗೆ ಅರ್ಹನು. ಮನುಷ್ಯನ ಮತ್ತು ಈ ಒಟ್ಟು ವಿಶ್ವದ ಸೃಷ್ಟಿಕರ್ತ, ಪಾಲಕ, ಮಾಲಕ, ಆಡಳಿತಗಾರ ಎಲ್ಲಾ ಆ ದೇವನೊಬ್ಬನೇ. ಅವನ ಹೊರತು ಬೇರೆ ಯಾರೂ ದೇವರಾಗಲೀ ಸೃಷ್ಟಿಕರ್ತರಾಗಲೀ ಪಾಲಕ-ಮಾಲಕರಾಗಲೀ ಅಧಿಪತಿಗಳಾಗಲೀ ಇಲ್ಲ. ದೇವತ್ವದಲ್ಲಿ ಯಾರೂ ಅವನ ಸಹಭಾಗಿಗಳಲ್ಲ. ವಿಶ್ವದಲ್ಲಿ ಅವನ ಹೊರತು ಯಾರ ಅಧಿಕಾರವೂ ನಡೆಯುವುದಿಲ್ಲ. ಎಲ್ಲವೂ ಅವನ ಕೈಯಲ್ಲಿದೆ. ಅವನ ಹೊರತು ಇತರ ಯಾರ ಕೈಯಲ್ಲೂ ಏನೂ ಇಲ್ಲ. ರಕ್ಷಕ, ದಾತ, ಕಷ್ಟ ಪರಿಹರಿಸುವವನು, ಆಪದ್ಬಾಂಧವ, ಅಗತ್ಯಗಳನ್ನು ಪೂರೈಸುವವನು, ವಿಮೋಚಿಸುವವನು ಎಲ್ಲಾ ಅವನೇ. ಮನುಷ್ಯನ ಪೂಜೆ ಮತ್ತು ಆರಾಧನೆಗೆ ಯಾರಾದರೂ ಅರ್ಹರಿದ್ದರೆ ಅದು ಆ ಏಕದೇವನು ಮಾತ್ರ. ಅವನು ಮಾತ್ರವೇ ಮನುಷ್ಯನ ವಂದನೆ ಮತ್ತು ಪ್ರಾರ್ಥನೆಗಳನ್ನು ಸ್ವೀಕರಿಸಲು ಅರ್ಹನು. ಅವನ ಹೊರತು ಬೇರೆ ಯಾರೂ ಯಾವುದೇ ಬಗೆಯ ಪ್ರಾರ್ಥನೆ, ಪೂಜೆ-ಆರಾಧನೆಗೆ ಯೋಗ್ಯರಲ್ಲ.

ಜಗತ್ತಿಗೆ ಬಂದ ಎಲ್ಲ ಪ್ರವಾದಿಗಳೂ ದೇವ ಸಂದೇಶವಾಹಕರೂ ಇದನ್ನೇ ಬೋಧಿಸಿದರು. ಇದುವೇ ಅವರೆಲ್ಲರ ಸಮಾನ ಸಂದೇಶವಾಗಿತ್ತು.

**"ನಾವು ನಿಮಗಿಂತ ಮುಂಚೆ ಕಳುಹಿಸಿದ ಪ್ರತಿಯೊಬ್ಬ ಸಂದೇಶವಾಹಕರಿಗೂ, "ನನ್ನ ಹೊರತು ಅನ್ಯ ದೇವರಿಲ್ಲ. ಆದ್ದರಿಂದ ನೀವು ನನ್ನ ಮಾತ್ರ ದಾಸ್ಯ-ಆರಾಧನೆಯನ್ನು ಮಾಡಿರಿ" ಎಂದು 'ದಿವ್ಯವಾಣಿ' ಮಾಡಿದ್ದೆವು." (ಪವಿತ್ರ ಕುರ್‌ಆನ್, 21:25)**

ಅಲ್ಲಾಹನ ಹೊರತು ಇನ್ನಾರನ್ನೇ ಆಗಲಿ ಆರಾಧ್ಯರೆಂದು ಪರಿಗಣಿಸುವುದು, ಆರಾಧಿಸುವುದು, ಪ್ರಾರ್ಥಿಸುವುದು ಅಥವಾ ಅವರಿಂದ ಸಹಾಯ ಯಾಚಿಸುವುದು 'ಶಿರ್ಕ್' ಅಥವಾ ಬಹುದೇವಾರಾಧನೆ ಎನಿಸಿಕೊಳ್ಳುತ್ತದೆ. ಶಿರ್ಕ್ ಅದೆಷ್ಟು ದೊಡ್ಡ ಅಪರಾಧ ವೆಂದರೆ ಅಲ್ಲಾಹನು ಈ ಅಪರಾಧವನ್ನು ಎಂದೂ ಕ್ಷಮಿಸುವುದಿಲ್ಲ.

**"ಅಲ್ಲಾಹನು ತನ್ನೊಂದಿಗೆ ಇತರರನ್ನು ಸಹಭಾಗಿಗಳನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸುವುದಿಲ್ಲ. ಅದರ ಹೊರತು ಅವನು ಕ್ಷಮಿಸಲಿಚ್ಛಿಸುವ ಇತರ ಎಲ್ಲವನ್ನೂ ಕ್ಷಮಿಸುವನು. ಅಲ್ಲಾಹನೊಂದಿಗೆ ಇತರ ಯಾರನ್ನಾದರೂ ಸಹಭಾಗಿಯನ್ನಾಗಿ ಮಾಡಿದವನು ಅತಿ ದೊಡ್ಡ ಸುಳ್ಳನ್ನು ಸೃಷ್ಟಿಸಿದನು ಮತ್ತು ಅತ್ಯಂತ ಘೋರ ಪಾಪವೆಸಗಿದನು." (ಪವಿತ್ರ ಕುರ್‌ಆನ್, 4:48)**

## ಅಲ್ಲಾಹನನ್ನು ಆರಾಧಿಸಿರಿ

ಅಲ್ಲಾಹನೇ ನಮ್ಮನ್ನು ಸೃಷ್ಟಿಸಿದವನು. ಅವನೇ ನಮ್ಮನ್ನು ಪೋಷಿಸುತ್ತಿರುವವನು. ಅವನೇ ನಮ್ಮ ಎಲ್ಲ ಅಗತ್ಯಗಳನ್ನು ಪೂರೈಸುವವನು. ನಾವು ಅಡಿಯಿಂದ ಮುಡಿ ತನಕ ಅವನ ಋಣಗಳಲ್ಲಿ ಮುಳುಗಿದ್ದೇವೆ. ಈ ಋಣ ಮತ್ತು ಉಪಕಾರಗಳ ಪ್ರಜ್ಞೆಯು ನಮ್ಮನ್ನು ಕೃತಜ್ಞತೆ, ದೈನ್ಯತೆ ಮತ್ತು ವಿನಯದ ಸಾಕಾರ ಮೂರ್ತಿಗಳಾಗಿ ಅವನೆದುರು ಬಾಗಿ ಬಿಡುವಂತೆ, ಭಕ್ತಿ ಮತ್ತು ಶ್ರದ್ಧೆಯಿಂದ ಅವನ ಗುಣಗಾನ ಮಾಡುವಂತೆ ಮತ್ತು ಅವನ ವಿಧೇಯತೆ, ದಾಸ್ಯ ಹಾಗೂ ಅನುಸರಣೆಯ ಪಣತೊಟ್ಟು, ನಮ್ಮ ಸರ್ವಸ್ವವನ್ನೂ ಅವನಿಗೆ ಅರ್ಪಿಸಿ ಬಿಡುವಂತೆ ನಿರಂತರ ಪ್ರೇರೇಪಿಸುತ್ತಿರುತ್ತದೆ. ದೇವನನ್ನು ಆರಾಧಿಸುವುದೆಂದರೆ ಇದುವೇ!

ಆರೋಗ್ಯವಂತ ಪ್ರಕೃತಿಯಿರುವ ಹಾಗೂ ದೇವನನ್ನು ಗುರುತಿಸುವ ಪ್ರತಿಯೊಬ್ಬ ಮನುಷ್ಯನೂ ಅವನನ್ನೇ ಆರಾಧಿಸುತ್ತಿರಲು ನಿರ್ಬಂಧಿತನಾಗಿದ್ದಾನೆ. ಮನುಷ್ಯನ ಮೇಲೆ ಅಲ್ಲಾಹನ ಒಂದು ದೊಡ್ಡ ಅನುಗ್ರಹವೇನೆಂದರೆ ತನ್ನನ್ನು ಹೇಗೆ ಆರಾಧಿಸಬೇಕು ಮತ್ತು ನಮ್ಮ ದಾಸ್ಯದ, ದೈನ್ಯದ ಭಾವನೆಗಳನ್ನು ಹೇಗೆ ಪ್ರಕಟಿಸಬೇಕು ಎಂಬುದನ್ನೂ ಸಾಕ್ಷಾತ್ ಅವನೇ ಕಲಿಸಿಕೊಟ್ಟಿರುವನು.

ಇಸ್ಲಾಮ್ ನಮಗೆ ಕಲಿಸಿಕೊಡುವ ಆರಾಧನೆಗಳಲ್ಲಿ ನಮ್ಮ ದಾಸ್ಯ ಮತ್ತು ದೈನ್ಯದ ಭಾವನೆಗಳ ಪ್ರಕಟನೆಯೂ ಸೇರಿದೆ. ಅಲ್ಲಾಹನ ದಾಸ್ಯ-ಆರಾಧನೆ ಹಾಗೂ ದಾಸ್ಯ-ಅನುಸರಣೆ ಮಾಡುತ್ತೇವೆಂಬ ಪ್ರತಿಜ್ಞೆಯೂ ಇದೆ. ಅವುಗಳಲ್ಲಿ, ಅಲ್ಲಾಹನ ಸಾಮೀಪ್ಯ ಮತ್ತು ಅವನ ಮೆಚ್ಚುಗೆಯನ್ನು ಸಂಪಾದಿಸುವ ಭರವಸೆ ಮಾತ್ರವಲ್ಲ, ಮನುಷ್ಯನನ್ನು ಅತ್ಯುತ್ತಮ ಮನುಷ್ಯನಾಗಿಯೂ ಅಲ್ಲಾಹನ ನಿಷ್ಠಾವಂತ ದಾಸನಾಗಿಯೂ ಮಾರ್ಪಡಿಸುವ ಸಾಧನಗಳೂ ಅಡಕವಾಗಿವೆ. ಇಸ್ಲಾಮೀ ಜೀವನದಲ್ಲಿ ಈ ಆರಾಧನೆಗಳಿಗೆ ಮೂಲಭೂತ ಸ್ಥಾನಮಾನವಿದೆ. ಸತ್ಯವಿಶ್ವಾಸದ ಬಳಿಕ ಈ ಆರಾಧನೆಗಳನ್ನೇ ಎಲ್ಲ ಒಳಿತು ಮತ್ತು ಸತ್ಕರ್ಮಗಳ ಉಗಮ ಬಿಂದುವೆಂದು ಪರಿಗಣಿಸ ಲಾಗುತ್ತದೆ. ಆದ್ದರಿಂದಲೇ ಸತ್ಯವಿಶ್ವಾಸದ ಬಳಿಕ ಈ ಆರಾಧನೆಗಳಿಗೇ ಅತ್ಯುನ್ನತ ಸ್ಥಾನ ಕಲ್ಪಿಸಿ ಕೊಡಲಾಗಿದೆ. ಅವುಗಳು ಅಲ್ಲಾಹನಿಗೆ ಅತ್ಯಂತ ಪ್ರಿಯ ಹಾಗೂ ಇಸ್ಲಾಮಿನ ದೃಷ್ಟಿಯಲ್ಲಿ ಅತ್ಯಂತ ಅಪೇಕ್ಷಿತವಾಗಿವೆ.

ಪ್ರವಾದಿ ಮುಹಮ್ಮದ್(ಸ) ಹೇಳುತ್ತಾರೆ:

"ಇಸ್ಲಾಮಿನ ತಳಹದಿ ಐದು ವಸ್ತುಗಳಲ್ಲಿದೆ; ಅಲ್ಲಾಹನ ಹೊರತು ಇನ್ನಾರೂ ಆರಾಧ್ಯರಿಲ್ಲ ಮತ್ತು ಮುಹಮ್ಮದ್(ಸ) ಅಲ್ಲಾಹನ ದಾಸರೂ ಸಂದೇಶವಾಹಕರೂ ಆಗಿರುವರು ಎಂದು ಘೋಷಿಸುವುದು, ನಮಾಝನ್ನು ಸಂಸ್ಥಾಪಿಸುವುದು, ಝಕಾತ್ ಕೊಡುವುದು, ಹಜ್ಜ್ ಮಾಡುವುದು ಮತ್ತು ರಮಝಾನ್ ತಿಂಗಳ ಉಪವಾಸಗಳನ್ನಾಚರಿಸುವುದು."

ಇವು ಇಸ್ಲಾಮಿನ ಐದು ಆಧಾರ ಸ್ತಂಭಗಳು. ಇಸ್ಲಾಮಿನ ಸಂಪೂರ್ಣ ಕಟ್ಟಡವನ್ನು ಇವುಗಳ ಮೇಲೆಯೇ ಕಟ್ಟಲಾಗಿದೆ. ಇಸ್ಲಾಮಿನ ಮಾರ್ಗದಲ್ಲಿ ನಡೆಯಬೇಕಿದ್ದರೆ ಈ ಐದು ಕರ್ತವ್ಯಗಳ ಪಾಲನೆ ಅನಿವಾರ್ಯ. ಇವುಗಳನ್ನು ಪಾಲಿಸದವನು ಇಸ್ಲಾಮ್ ಧರ್ಮವನ್ನು

ಪಾಲಿಸಲಾರ. ಆದ್ದರಿಂದ ಪವಿತ್ರ ಕುರ್‌ಆನಿನಲ್ಲೂ ಪ್ರವಾದಿ ವಚನಗಳಲ್ಲೂ ಈ ಕರ್ತವ್ಯಗಳ ಪಾಲನೆ ಮಾಡಬೇಕೆಂದು ಬಹಳ ಒತ್ತು ಕೊಟ್ಟು ಆದೇಶಿಸಲಾಗಿದೆ. ಇವುಗಳನ್ನು ನಿರ್ಲಕ್ಷಿಸುವವರಿಗೆ ಉಗ್ರಶಿಕ್ಷೆಯ ಎಚ್ಚರಿಕೆ ಕೊಡಲಾಗಿದೆ. ಈ ಆರಾಧನೆಗಳಿಗೆ ಇಷ್ಟು ಅಸಾಮಾನ್ಯ ಪ್ರಾಮುಖ್ಯತೆ ಇರುವುದರಿಂದಲೇ ಪ್ರಸಿದ್ಧ 'ಹದೀಸ್ ಜಿಬ್ರಈಲ್'ನಲ್ಲಿ ಪ್ರವಾದಿ ವರ್ಯರು(ಸ) ಒಂದು ಪ್ರಶ್ನೆಗೆ ಉತ್ತರವಾಗಿ, ಇವುಗಳನ್ನೇ ಸಾಕ್ಷಾತ್ ಇಸ್ಲಾಮ್ ಎಂದು ಬಣ್ಣಿಸಿರುವರು:

"ಓ ಮುಹಮ್ಮದ್(ಸ)! ಇಸ್ಲಾಮ್ ಏನೆಂದು ನನಗೆ ತಿಳಿಸಿರಿ" ಎಂದು ಕೇಳಿದಾಗ, ಅವರು ಹೇಳಿದರು: "ಅಲ್ಲಾಹನ ಹೊರತು ಇನ್ನಾರೂ ಆರಾಧನೆ ಅರ್ಹರಿಲ್ಲ ಮತ್ತು ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರು ಎಂದು ಸಾಕ್ಷ್ಯವಹಿಸುವುದು, ನಮಾಝನ್ನು ಸಂಸ್ಥಾಪಿಸುವುದು, ಝಕಾತ್ ಕೊಡುವುದು, ರಮಝಾನ್ ತಿಂಗಳ ಉಪವಾಸಗಳನ್ನು ಆಚರಿಸುವುದು, ಅಲ್ಲಾಹನ ಭವನಕ್ಕೆ ತಲುಪಲು ನಿನಗೆ ಸಾಧ್ಯವಿದ್ದರೆ ಅಲ್ಲಿಯ ಹಜ್ಜ್ ಮಾಡುವುದು. ಇದುವೇ ಇಸ್ಲಾಮ್." **(ಬುಖಾರಿ, ಮುಸ್ಲಿಮ್)**

ಪ್ರಸ್ತುತ ಕರ್ಮಗಳಿಗೆ ಧರ್ಮದಲ್ಲಿ ಎಂಥ ಸ್ಥಾನಮಾನವಿದೆ ಎಂಬುದನ್ನು ಈ ವಚನವು ಸ್ಪಷ್ಟಪಡಿಸುತ್ತದೆ.

## ಅಲ್ಲಾಹನನ್ನು ಸ್ಮರಿಸಿರಿ

ಅಲ್ಲಾಹನ ಅಪಾರ ಅನುಗ್ರಹಗಳಿಗೆ ಪ್ರತಿಯಾಗಿ ಮತ್ತು ಅವನ ಮೇಲಿನ ಪ್ರೀತಿಯ ದ್ಯೋತಕವಾಗಿ ನಾವು ಅವನನ್ನು ಹೆಚ್ಚುಹೆಚ್ಚು ಸ್ಮರಿಸುತ್ತಿರಬೇಕು. ದೇವಸ್ಮರಣೆಯು ದೇವ ಪ್ರೇಮವನ್ನು ಇನ್ನಷ್ಟು ಹೆಚ್ಚಿಸುತ್ತದೆ. ಅಲ್ಲಾಹನ ಸ್ಮರಣೆಯಿಂದ ನಮ್ಮಲ್ಲಿನ ಕಲ್ಪನೆ ಮತ್ತಷ್ಟು ಸ್ಪಷ್ಟವಾಗುತ್ತದೆ. ನಮ್ಮ ಭಕ್ತಿ, ಶ್ರದ್ಧೆ, ಅರ್ಪಣಾಭಾವ, ವಿನಯ ಮತ್ತು ನಮ್ರತೆಯು ವೃದ್ಧಿಗೊಳ್ಳುತ್ತದೆ. ಇದು ನಮಗೆ ಅವನ ಮೆಚ್ಚುಗೆಯ ದಿಕ್ಕಿನಲ್ಲಿ, ಅವನ ಧರ್ಮದ ಮಾರ್ಗದಲ್ಲಿ ಹೆಚ್ಚೆಚ್ಚು ಮುಂದೆ ಸಾಗುವ ಸಾಮರ್ಥ್ಯವನ್ನು ಕೊಡುತ್ತದೆ. ಇವೆಲ್ಲದರ ಅಂತಿಮ ಪರಿಣಾಮವಾಗಿ ನಾವು ಅವನ ಪ್ರೀತಿಗೆ ಪಾತ್ರರಾಗುತ್ತೇವೆ. ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಹೀಗೆ ಹೇಳಿರುವನು.:

**"ಇದರಿಂದಲೇ ನಿಮಗೆ ಸನ್ಮಾರ್ಗ ಪ್ರಾಪ್ತಿಯಾಯಿತು. ಆದುದರಿಂದ ನೀವು ನನ್ನನ್ನು ಸ್ಮರಿಸುತ್ತಲಿರಿ, ನಾನು ನಿಮ್ಮನ್ನು ಸ್ಮರಿಸುವೆನು ಮತ್ತು ನನಗೆ ಕೃತಜ್ಞರಾಗಿರಿ, ಕೃತಘ್ನರಾಗಬೇಡಿರಿ." (2:152)**

ಅಲ್ಲಾಹನು ಒಬ್ಬ ಮನುಷ್ಯನನ್ನು ಸ್ಮರಿಸುತ್ತಾನೆಂದ ಮೇಲೆ ಆ ಮನುಷ್ಯನಿಗೆ ಇನ್ನೇನು ಬೇಕು? ಇಹ-ಪರಗಳಲ್ಲಿ ಅವನಿಗೆ ಇನ್ನಾವುದರ ಕೊರತೆ!

ಸತ್ಯದ ಮಾರ್ಗದಲ್ಲಿ ನಡೆಯುವಾಗ ಅನೇಕ ಕಂಟಕಗಳು ಎದುರಾಗುವುದು ಸಹಜ. ಅಲ್ಲಾಹನೊಂದಿಗೆ ನಮ್ಮ ಸಂಬಂಧವು ಅತ್ಯಂತ ಸುದೃಢವೂ ಜೀವಂತವೂ ಅಭೇದ್ಯವೂ ಆಗಿದ್ದರೆ ಮಾತ್ರ ಎಂತಹ ಕಠಿಣ ಹಾಗೂ ಪ್ರತಿಕೂಲ ಪರಿಸ್ಥಿತಿಯಲ್ಲೂ

ಸನ್ಮಾರ್ಗದಲ್ಲಿ ಸ್ಥಿರಚಿತ್ತರಾಗಿ ನಿಲ್ಲಲು ನಮಗೆ ಸಾಧ್ಯವಾಗುತ್ತದೆ. ಇನ್ನು ಈ ಸ್ಥಿರಚಿತ್ತ ಪ್ರಾಪ್ತವಾಗುವುದು ಅಲ್ಲಾಹನನ್ನು ಹೆಚ್ಚು ಹೆಚ್ಚು ಸ್ಮರಿಸುತ್ತಿರುವುದರಿಂದ ಮಾತ್ರ.

**"ಓ ಸತ್ಯವಿಶ್ವಾಸಿಗಳೇ, ಯಾವುದಾದರೊಂದು ತಂಡದೊಂದಿಗೆ ನಿಮ್ಮ ಹೋರಾ ನಡೆದರೆ ನೀವು ಸುಸ್ಥಿರರಾಗಿರಿ ಮತ್ತು ಅಲ್ಲಾಹನನ್ನು ಅತಿ ಹೆಚ್ಚಾಗಿ ಸ್ಮರಿಸಿರಿ. ನಿಮ ವಿಜಯ ಪ್ರಾಪ್ತಿಯಾದೀತೆಂದು ನಿರೀಕ್ಷಿಸಬಹುದು." (ಪವಿತ್ರ ಕುರ್‌ಆನ್, 8:4**

ಅಲ್ಲಾಹನನ್ನು ಮನಃಪೂರ್ವಕ ಪ್ರೀತಿಸುವ ಮತ್ತು ಯಾವ ಸ್ಥಿತಿಯಲ್ಲೂ ಅವ ಮಾರ್ಗದಲ್ಲೇ ನಡೆಯುತ್ತೇವೆಂದು ಸಂಕಲ್ಪ ಮಾಡಿರುವ ನೈಜ ಸತ್ಯವಿಶ್ವಾಸಿಗಳು ತಾ ನಿಂತಲ್ಲಿ, ಕುಳಿತಲ್ಲಿ, ಮಲಗಿರುವಲ್ಲಿ ಹೀಗೆ ಎಲ್ಲೆಡೆಯೂ ಅಲ್ಲಾಹನನ್ನು ಸ್ಮರಿಸುತ್ತ ಇರುತ್ತಾರೆ. ಪವಿತ್ರ ಕುರ್‌ಆನಿನ ವರ್ಣನೆಯನ್ನು ಗಮನಿಸಿರಿ:

**"ಅವರು ಎದ್ದಾಗಲೂ ಕುಳಿತಾಗಲೂ ಮಲಗಿದಾಗಲೂ ಎಲ್ಲ ಸ್ಥಿತಿಗಳಲ್ಲ ಅಲ್ಲಾಹನನ್ನು ಸ್ಮರಿಸುತ್ತಾರೆ" (3:19**

ಅಲ್ಲಾಹನನ್ನು ಸ್ಮರಿಸುವುದರ ಅತ್ಯುಚ್ಚ ಹಾಗೂ ಅತಿ ಸುಂದರ ರೂಪವೆಂದ ನಮಾಝ್. ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಹೀಗೆ ಹೇಳಿರುವನು:

**"ನನ್ನ ಸ್ಮರಣೆಗಾಗಿ ನಮಾಝನ್ನು ಸಂಸ್ಥಾಪಿಸಿರಿ." (20:1**

ಅಲ್ಲಾಹನನ್ನು ಸ್ಮರಿಸುವುದರ ಇನ್ನೊಂದು ರೂಪ, ಶ್ರದ್ಧೆ ಮತ್ತು ತನ್ಮಯತೆಯೊಂದಿ ಪವಿತ್ರ ಕುರ್‌ಆನಿನಲ್ಲಿ ಪಠಿಸುವುದಾಗಿದೆ.

**"ನಿಮ್ಮ ಕಡೆಗೆ ದಿವ್ಯವಾಣಿಯ ಮೂಲಕ ಕಳುಹಿಸಲ್ಪಟ್ಟಿರುವ ಈ ಗ್ರಂಥವನ್ನು ಪಠಿಸ ಮತ್ತು ನಮಾಝನ್ನು ಸಂಸ್ಥಾಪಿಸಿರಿ. ನಿಶ್ಚಯವಾಗಿಯೂ ನಮಾಝ್ ಅಶ್ಲೀಲ ಹಾಗ ದುಷ್ಕೃತ್ಯಗಳಿಂದ ತಡೆಯುತ್ತದೆ ಮತ್ತು ಅಲ್ಲಾಹನ ಧ್ಯಾನ ಇದಕ್ಕಿಂತಲೂ ದೊಡ್ಡದು. ನೀ ಮಾಡುವುದೆಲ್ಲವನ್ನೂ ಅಲ್ಲಾಹನು ಅರಿಯುತ್ತಾನೆ." (29:4**

ಈ ಕುರಿತು ಪ್ರವಾದಿ ಮುಹಮ್ಮದ್‌ರ(ಸ) ಒಂದು ವಚನ ಬಹ ಗಮನಾರ್ಹವಾಗಿದೆ:

"ಅಸೂಯೆಗೆ ಅರ್ಹರು ಇಬ್ಬರು ಮಾತ್ರ: ಅಲ್ಲಾಹನು ಪವಿತ್ರ ಕುರ್‌ಆನಿ ಜ್ಞಾನವನ್ನು ಕೊಟ್ಟಿದ್ದು, ಹಗಲಿರುಳೂ ಅದನ್ನು ಪಠಿಸಬೇಕಾದ ರೀತಿಯಲ್ಲಿ ಪಠಿಸು ವ್ಯಕ್ತಿ ಮತ್ತು ಅಲ್ಲಾಹನು ಸಂಪತ್ತನ್ನು ದಯಪಾಲಿಸಿದ್ದು ಅದನ್ನು ಹಗಲಿರು (ಅಲ್ಲಾಹನ ಮಾರ್ಗದಲ್ಲಿ) ಖರ್ಚು ಮಾಡುತ್ತಲಿರುವ ವ್ಯಕ್ತಿ."

(ಬುಖಾರಿ, ಮುಸ್ಲಿಮ

ಅಲ್ಲಾಹನನ್ನು ಸ್ಮರಿಸುವ ಮತ್ತೊಂದು ಪರಿಣಾಮಕಾರಿ ರೂಪ-ದೈನ್ಯ ಮ ಅಪಾರ ವಿನಯದೊಂದಿಗೆ ಅಲ್ಲಾಹನನ್ನು ಪ್ರಾರ್ಥಿಸುವುದು (ದುಆ).

**"ನಿಮ್ಮ ಪ್ರಭುವನ್ನು ಭಯ ವಿನಯದೊಂದಿಗೆ ಮತ್ತು ರಹಸ್ಯವಾಗಿ ಪ್ರಾರ್ಥಿಸಿ ನಿಶ್ಚಯವಾಗಿಯೂ ಅವನು ಸೀಮೋಲ್ಲಂಘಕರನ್ನು ಮೆಚ್ಚುವುದಿಲ್ಲ."**

**(ಪವಿತ್ರ ಕುರ್‌ಆನ್, 7:5**

ಪವಿತ್ರ ಕುರ್‌ಆನಿನ ಈ ವಾಕ್ಯದಿಂದ ತಿಳಿಯುವಂತೆ, ಅಲ್ಲಾಹನನ್ನು ಪ್ರಾರ್ಥಿಸದೆ ರುವುದು ಅಥವಾ ಅಲ್ಲಾಹನ ಹೊರತು ಇನ್ನಾರನ್ನಾದರೂ ಪ್ರಾರ್ಥಿಸುವುದು ತಿರೇಕವಾಗಿದೆ. ನಿಜವಾಗಿ ಪ್ರಾರ್ಥನೆಯು ದಾಸ್ಯ ಮತ್ತು ದೈನ್ಯದ ದ್ಯೋತಕವಾಗಿದೆ. ುಂದಿನ ವಾಕ್ಯದಲ್ಲಿ ಅಲ್ಲಾಹನು ಮತ್ತೆ ಹೀಗೆ ಹೇಳಿರುವನು:

**"ಭೂಮಿಯಲ್ಲಿ ಸುಧಾರಣೆಯಾಗಿರುವಾಗ ಕ್ಷೋಭೆಯನ್ನುಂಟು ಮಾಡಬೇಡಿರಿ. ಯದೊಂದಿಗೂ ಆಶೆಯೊಂದಿಗೂ ಅಲ್ಲಾಹನನ್ನೇ ಕೂಗಿ ಪ್ರಾರ್ಥಿಸಿರಿ. ನಿಶ್ಚಯವಾಗಿಯೂ ಲ್ಲಾಹನ ಕೃಪೆಯು ಸಜ್ಜನರ ಸಮೀಪದಲ್ಲಿದೆ." (ಪವಿತ್ರ ಕುರ್‌ಆನ್, 7:56)**

ಇದರಿಂದ ತಿಳಿಯುವಂತೆ, ಭಯ ಮತ್ತು ನಿರೀಕ್ಷೆಗಳಿಂದ ಮಿಶ್ರಿತವಾಗಿ ಾಡಲಾಗುವ ಪ್ರಾರ್ಥನೆ ಅಪೇಕ್ಷಣೀಯ ಮಾತ್ರವಲ್ಲದೆ, ಅದು ಅಲ್ಲಾಹನ ನುಗ್ರಹವನ್ನು ಆಕರ್ಷಿಸುವ ಸಾಧನವೂ ಹೌದು.

ಈ ಬಗ್ಗೆಯೇ ಒಂದು ಹದೀಸ್ ಈ ರೀತಿ ಇದೆ:

ಹಝ್ರತ್ ನುಅ್‌ಮಾನ್ ಬಿನ್ ಬಶೀರ್(ರ) ಉಲ್ಲೇಖಿಸಿರುವರು: ಒಮ್ಮೆ ್ರವಾದಿ(ಸ) "ಪ್ರಾರ್ಥನೆ ಸಾಕ್ಷಾತ್ ಆರಾಧನೆಯಾಗಿದೆ" ಎಂದು ಹೇಳಿದರು. ಆ ಬಳಿಕ ವಿತ್ರ ಕುರ್‌ಆನಿನ "ನಿಮ್ಮ ಒಡೆಯನು ಹೇಳುತ್ತಾನೆ, ನನ್ನಿಂದ(ಅಲ್ಲಾಹನಿಂದ ಮಾತ್ರ) ೇಡಿರಿ. ನಾನು ನಿಮ್ಮ ಬೇಡಿಕೆಗಳನ್ನು ಪೂರ್ತಿಗೊಳಿಸುವೆನು. ನನ್ನ(ಅಲ್ಲಾಹನ)ದಾಸ್ಯ- ರಾಧನೆಯಿಂದ ವಿಮುಖರಾಗಿ ಅಹಂಕರಿಸುವವರು ಅತ್ಯಂತ ಅಪಮಾನಿತರಾಗಿ ನರಕಕ್ಕೆ ಳ್ಳಲ್ಪಡುವರು" ಎಂಬ ವಾಕ್ಯವನ್ನು ಓದಿದರು.

**(ತಿರ್ಮಿದಿ, ಅಬೂದಾವೂದ್, ನಸಾಈ, ಇಬ್ನುಮಾಜಃ, ಅಹ್ಮದ್)**

ಬೇರೆ ಬೇರೆ ಸಂದರ್ಭಗಳಲ್ಲಿ ನಿರ್ದಿಷ್ಟ ರೀತಿಯಲ್ಲಿ ಅಲ್ಲಾಹನನ್ನು ಸ್ಮರಿಸುವುದು ೂಡಾ ದೇವಸ್ಮರಣೆಯ ಒಂದು ಉತ್ತಮ ಪ್ರಕಾರವಾಗಿದೆ. ಅಲ್ಲಾಹನ ನಿಷ್ಠಾವಂತ ಾಸರು ಕುಳಿತಲ್ಲಿ, ನಿಂತಲ್ಲಿ, ಮಲಗಿರುವಲ್ಲಿ ಹೀಗೆ ಎಲ್ಲ ಸ್ಥಿತಿಗಳಲ್ಲೂ ಅಲ್ಲಾಹನನ್ನು ್ಮರಿಸುತ್ತಾರೆಂದು ಈಗಾಗಲೇ ಹೇಳಿದ್ದಾಯಿತು. ಇದಕ್ಕೆ ಪ್ರವಾದಿ ಮುಹಮ್ಮದ್‌ರ(ಸ) ದುಕೇ ಉಜ್ವಲ ಉದಾಹರಣೆಯಾಗಿದೆ. ಪ್ರವಾದಿ ಮುಹಮ್ಮದ್(ಸ) ಬೇರೆಬೇರೆ ಂದರ್ಭಗಳಲ್ಲಿ(ಮಲಗಲು ಹೋಗುವಾಗ, ನಿದ್ದೆಯಿಂದೇಳುವಾಗ, ಕನ್ನಡಿ ನೋಡುವಾಗ, ಹಾರ ಸೇವಿಸುವಾಗ, ಆಹಾರ ಸೇವಿಸಿದ ಬಳಿಕ, ಮನೆಯಿಂದ ಹೊರಡುವಾಗ, ುನೆಯನ್ನು ಪ್ರವೇಶಿಸುವಾಗ, ವಸ್ತ್ರ ಧರಿಸುವಾಗ, ಶೌಚಾಲಯ ಪ್ರವೇಶಿಸುವಾಗ, ೌಚಾಲಯದಿಂದ ಹೊರ ಬರುವಾಗ, ಮಸೀದಿಯೊಳಗೆ ಹೋಗುವಾಗ, ಮಸೀದಿಯಿಂದ ೊರ ಬರುವಾಗ, ಯಾವುದಾದರೂ ಸಭೆ- ಸಮಾರಂಭ ಮುಗಿಯುವಾಗ, ಭಾಷಣ ರಂಭಿಸುವಾಗ, ಮುಗಿಸುವಾಗ... ಇತ್ಯಾದಿ) ಅಲ್ಲಾಹನನ್ನು ಯಾವ ರೀತಿ, ಯಾವ ದಗಳನ್ನು ಬಳಸಿ ಸ್ಮರಿಸುತ್ತಿದ್ದರು ಎಂಬ ಬಗ್ಗೆ ಹದೀಸ್‌ಗಳ ಒಂದು ಮಹಾ ಂಡಾರವೇ ಇದೆ. ಈ ಅಮೂಲ್ಯ ಮುತ್ತು-ರತ್ನಗಳಿಂದ ನಾವೂ ನಮ್ಮ ಬದುಕನ್ನು ಲಂಕರಿಸಿಕೊಂಡರೆ ಈ ಬದುಕು ಎಷ್ಟು ಸುಂದರವಾದೀತು!

ಒಂದು ಕುದ್ಸೀ ಹದೀಸ್‌ನಲ್ಲಿ ಹೀಗೆನ್ನಲಾಗಿದೆ.

ಅಲ್ಲಾಹನು ಹೇಳುತ್ತಾನೆ, "ನಾನು ನನ್ನ ದಾಸನ ಪಾಲಿಗೆ, ಅವನು ನನ್ನ ಬಗ್ಗೆ ಎಂಥ ವಿಶ್ವಾಸವಿಟ್ಟಿರುವನೋ ಅಂಥವನೇ ಆಗಿರುತ್ತೇನೆ. ಅವನು ನನ್ನನ್ನು ಸ್ಮರಿಸುವಾಗ ನಾನವನ ಜೊತೆಗಿರುತ್ತೇನೆ. ಅವನು ನನ್ನನ್ನು ಮನಸ್ಸಿನೊಳಗೆ ಸ್ಮರಿಸಿದರೆ ನಾನೂ ಅವನನ್ನು ಮನದೊಳಗೆ ಸ್ಮರಿಸುತ್ತೇನೆ. ಅವನು ನನ್ನನ್ನು ಸಭೆಯಲ್ಲಿ ಸ್ಮರಿಸಿದರೆ ನಾನು ಅವನನ್ನು ಅದಕ್ಕಿಂತ ಉತ್ತಮ ಸಭೆಯಲ್ಲಿ ಸ್ಮರಿಸುತ್ತೇನೆ." **(ಬುಖಾರಿ, ಮುಸ್ಲಿಮ್)**

ಈ ಹದೀಸ್ ಎಷ್ಟೊಂದು ಪ್ರೋತ್ಸಾಹಕರ ಹಾಗೂ ವಿಶ್ವಾಸ ವರ್ಧಕವಾಗಿದೆ! ಅಲ್ಲಾಹನನ್ನು ಸ್ಮರಿಸುವವರನ್ನು ಅಲ್ಲಾಹನೂ ಸ್ಮರಿಸುತ್ತಾನೆ ಮತ್ತು ಅವನು ಅವರ ಜೊತೆಗಿರುತ್ತಾನೆ.

## ಪಶ್ಚಾತ್ತಾಪ ಮತ್ತು ಕ್ಷಮಾಯಾಚನೆ

ಅಲ್ಲಾಹನನ್ನು ಸ್ಮರಿಸುವ ಮತ್ತೊಂದು ಪರಿಣಾಮಕಾರೀ ವಿಧಾನ, ಅವನಿಂದ ಕ್ಷಮೆಯನ್ನು ಯಾಚಿಸುವುದು ಮತ್ತು ತಪ್ಪುಗಳ ಬಗ್ಗೆ ಪಶ್ಚಾತ್ತಾಪಪಟ್ಟು ಅವನಿಂದ ಕ್ಷಮೆ ಬೇಡುವುದಾಗಿದೆ.

ತಪ್ಪುಗಳು ಯಾರಿಂದಲೂ ಸಂಭವಿಸಬಲ್ಲವು. ನಮ್ಮಿಂದ ಏನಾದರೂ ತಪ್ಪು ಸಂಭವಿಸಿದಾಗ, ನಾವು ಆ ತಪ್ಪಿನ ಬಗ್ಗೆ ಪಶ್ಚಾತ್ತಾಪಪಡಬೇಕು. ಮನಃಪೂರ್ವಕವಾಗಿ ಅಳುತ್ತಾ ರೋದಿಸುತ್ತಾ ಆ ಪಾಪದ ಕ್ಷಮೆಗಾಗಿ ಅಲ್ಲಾಹನೊಡನೆ ಬೇಡಬೇಕು. ಮುಂದೆ ಇಂತಹ ತಪ್ಪನ್ನು ಮಾಡುವುದಿಲ್ಲವೆಂದೂ ವಿಧೇಯ ದಾಸನಂತೆ ನಿನ್ನ ಆದೇಶಗಳನ್ನು ಪಾಲಿಸುವೆನೆಂದೂ ಪಣತೊಡಬೇಕು.

ಪವಿತ್ರ ಕುರ್‌ಆನಿನ ಆದೇಶವನ್ನು ಗಮನಿಸಿರಿ:

**"ಸತ್ಯವಿಶ್ವಾಸಿಗಳೇ, ಅಲ್ಲಾಹನೊಡನೆ ಪಶ್ಚಾತ್ತಾಪಪಡಿರಿ. ನಿಷ್ಕಳಂಕವಾದ ಪಶ್ಚಾತ್ತಾಪ. ನಿಮ್ಮ ಪ್ರಭು ನಿಮ್ಮ ದೋಷಗಳನ್ನು ಅಳಿಸಬಹುದು ಮತ್ತು ನಿಮ್ಮನ್ನು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸಲೂ ಬಹುದು." (66:8)**

ತೌಬಾ ಅರ್ಥಾತ್, ಪಾಪಗಳ ಬಗ್ಗೆ ಪಶ್ಚಾತ್ತಾಪಪಟ್ಟು ಕ್ಷಮೆ ಯಾಚಿಸುವ ಗುಣವು ಕೇವಲ ಪಾಪಿಗಳಲ್ಲಿ ಮಾತ್ರ ಇರಬೇಕಾದುದಲ್ಲ. ಅದು ಸಜ್ಜನರಲ್ಲೂ ಇರಬೇಕಾದ ಗುಣ. ಪವಿತ್ರ ಕುರ್‌ಆನಿನಲ್ಲಿ ಒಂದೆಡೆ ಉತ್ತಮ ದಾಸರನ್ನು ವರ್ಣಿಸುತ್ತಾ ಹೀಗೆನ್ನಲಾಗಿದೆ.

**"ಇವರು ಸಹನೆಯುಳ್ಳವರೂ ಸತ್ಯಸಂಧರೂ ವಿಧೇಯರೂ ಉದಾರಿಗಳೂ ಆಗಿರುತ್ತಾರೆ ಮತ್ತು ರಾತ್ರಿಯ ಕೊನೆಯ ಘಳಿಗೆಗಳಲ್ಲಿ ಅಲ್ಲಾಹನೊಡನೆ ಪಾಪ ವಿಮೋಚನೆಗಾಗಿ ಪ್ರಾರ್ಥಿಸುತ್ತಿರುತ್ತಾರೆ." (3:17)**

ಅಲ್ಲಾಹನ ಅತ್ಯಂತ ನೆಚ್ಚಿನ ದಾಸರಾದ ಪ್ರವಾದಿ ಮುಹಮ್ಮದ್(ಸ) ಹೇಳುತ್ತಾರೆ: "ಮನುಷ್ಯರೇ! ಅಲ್ಲಾಹನೆದುರು ತೌಬಾ (ಪಶ್ಚಾತ್ತಾಪ) ಮಾಡಿರಿ. ಸ್ವತಃ ನಾನು ನಿತ್ಯ ನೂರಾರು ಬಾರಿ ತೌಬಾ ಮಾಡುತ್ತೇನೆ." **(ಮುಸ್ಲಿಮ್)**

ತೌಬಾ ಅಲ್ಲಾಹನಿಗೆ ಎಷ್ಟು ಪ್ರಿಯವಾಗಿದೆ ಎಂಬುದನ್ನು ಪ್ರವಾದಿ ುಹಮ್ಮದ್‌ರ(ಸ) ಈ ವಚನದಿಂದ ಊಹಿಸಬಹುದು.

"ಅಲ್ಲಾಹನು ನಿತ್ಯವೂ - ಹಗಲಲ್ಲಿ ಪಾಪ ಮಾಡಿದವನು ತೌಬಾ ಮಾಡಲೆಂದು ತ್ರಿಯ ವೇಳೆ ಕೈ ಚಾಚುತ್ತಾನೆ ಮತ್ತು ರಾತ್ರಿಯಲ್ಲಿ ಪಾಪ ಮಾಡಿದವನು ತೌಬಾ ಾಡಲೆಂದು ಹಗಲಲ್ಲಿ ಕೈ ಚಾಚುತ್ತಾನೆ. ಸೂರ್ಯನು ಪಶ್ಚಿಮದಿಂದ ಉದಯಿಸುವ ಕವೂ (ಅಂದರೆ ಅಂತ್ಯ ಕಾಲದವರೆಗೂ) ಹೀಗೆಯೇ ನಡೆಯುತ್ತಿರುತ್ತದೆ." **(ಮುಸ್ಲಿಮ್)**

ವಾಸ್ತವದಲ್ಲಿ ಆತ್ಮವಿಮರ್ಶೆ ಮತ್ತು ಮೋಕ್ಷ ಯಾಚನೆಯು ಮನುಷ್ಯನ ಸಂಸ್ಕರಣೆ ತ್ತು ತರಬೇತಿಗೆ ಸಿದ್ಧೌಷಧವಾಗಿದೆ. ಸಂಸ್ಕರಣೆ ಅಲ್ಲಾಹನಿಗೆ ಅತ್ಯಂತ ಪ್ರಿಯವಾದ ಷ್ಟು. ಆದ್ದರಿಂದಲೇ, ಪಶ್ಚಾತ್ತಾಪದಿಂದ ಮನುಷ್ಯನ ಪಾಪಗಳು ಕ್ಷಮಿಸಲ್ಪಡುವುದು ಾತ್ರವಲ್ಲ ದಾಸನು ಅಲ್ಲಾಹನ ಪ್ರೀತಿ, ಅನುಗ್ರಹ ಮತ್ತು ಸಾಮೀಪ್ಯಕ್ಕೆ ಪಾತ್ರನಾಗುತ್ತಾನೆ.

## ೇವಸ್ಮರಣೆಯ ಇತರ ರೂಪಗಳು

ಸತ್ಯವಿಶ್ವಾಸಿಯೊಬ್ಬನು ಅಲ್ಲಾಹನ ಧರ್ಮ ಮತ್ತು ಅವನ ಗ್ರಂಥವನ್ನು, ಅದರ ೋಧನೆಗಳನ್ನು ಕಲಿಯಲು ಮತ್ತು ಇತರರಿಗೆ ಕಲಿಸಲು ಪ್ರಯತ್ನಿಸುವುದು ಕೂಡಾ ಲ್ಲಾಹನ ಸ್ಮರಣೆಯ ದ್ಯೋತಕ ಹಾಗೂ ಸ್ಮರಿಸುವ ಒಂದು ಶ್ರೇಷ್ಠ ವಿಧಾನವಾಗಿದೆ.

ಪ್ರವಾದಿ(ಸ) ಹೇಳುತ್ತಾರೆ

"ನಿಮ್ಮ ಪೈಕಿ ಪವಿತ್ರ ಕುರ್‌ಆನನ್ನು ಕಲಿಯುತ್ತಿರುವ ಮತ್ತು ಕಲಿಸುತ್ತಿರುವ ನರೇ ಶ್ರೇಷ್ಠರು." **(ಬುಖಾರಿ, ಮುಸ್ಲಿಮ್)**

ಪವಿತ್ರ ಕುರ್‌ಆನಿನ ಸಾಮೂಹಿಕ ಅಧ್ಯಯನ ನಡೆಸುವ ಮತ್ತು ಅದರ ಬೋಧನೆ ಳನ್ನು ಇತರರಿಗೆ ಕಲಿಸುವುದರ ಮಹತ್ವದ ಕುರಿತು ಒಂದು ಹದೀಸ್ ಹೀಗಿದೆ:

"ಅಲ್ಲಾಹನ ಭವನಗಳ ಪೈಕಿ ಯಾವುದಾದರೊಂದರಲ್ಲಿ(ಮಸೀದಿಯಲ್ಲಿ) ಒಟ್ಟು ೇರಿ, ಪವಿತ್ರ ಕುರ್‌ಆನನ್ನು ಪಠಿಸುವ ಮತ್ತು ಪರಸ್ಪರರಿಗೆ ಅದನ್ನು ಬೋಧಿಸುವ ನರ ಮೇಲೆ ಅಲ್ಲಾಹನು ಶಾಂತಿ ಮತ್ತು ಸಮಾಧಾನವನ್ನು ವರ್ಷಿಸುವನು. ಅಲ್ಲಾಹನ ನುಗ್ರಹವು ಅವರನ್ನು ಆವರಿಸುವುದು, ದೇವಚರರು ಅವರ ಮೇಲೆ ನೆರಳನ್ನು ಾಯಿಸುವರು ಮತ್ತು ಅಲ್ಲಾಹನು ತನ್ನ ಸಾನ್ನಿಧ್ಯದಲ್ಲಿರುವವರ ಜೊತೆ ಅಂಥವರ ುರಿತು ಪ್ರಸ್ತಾಪಿಸುವನು." **(ಮುಸ್ಲಿಮ್)**

ಎಂತಹ ಸೌಭಾಗ್ಯವಂತ ಜನರ ಗುಂಪದು. ನಾವೂ ಅದೇ ಗುಂಪಿಗೆ ಸೇರಿದ್ದರೆ...!

## ಅಲ್ಲಾಹನಿಗೆ ಅಂಜುತ್ತಲಿರಿ ಮತ್ತು ಅವನ ಮೇಲೆಯೇ ಭರವಸೆ ಇಡಿರಿ.

ಅಲ್ಲಾಹ್ ಈ ವಿಶ್ವದ ಮಾಲಕ ಮತ್ತು ಆಡಳಿತಗಾರ. ಇಲ್ಲಿ ಸಂಭವಿಸುವು ೆಲ್ಲವೂ ಅವನ ಇಚ್ಛೆ ಮತ್ತು ಆಜ್ಞೆಯಿಂದಲೇ ಸಂಭವಿಸುತ್ತದೆ. ಪ್ರತಿಯೊಂದಕ್ಕೂ ೀವ ಮತ್ತು ಅಸ್ತಿತ್ವಗಳನ್ನು ಕೊಡುವವನು ಅವನೇ. ಎಲ್ಲವನ್ನೂ ಪೋಷಿಸುವವನು,

ಎಲ್ಲರ ಅಗತ್ಯಗಳನ್ನು ಈಡೇರಿಸುವವನು ಅವನೇ. ಜೀವನ, ಮರಣ, ಲಾಭ, ನಷ್ಟ, ರೋಗ, ಉಪಶಮನ, ಗೌರವ, ಅಪಮಾನ, ಸಂಪತ್ತು, ಅಧಿಕಾರ, ಸಂತಾನ, ಆಹಾರ, ಜೀವನೋಪಾಯ, ಭಾಗ್ಯ... ಹೀಗೆ ಲೋಕದಲ್ಲಿರುವ ಎಲ್ಲವೂ ಕೇವಲ ಅವನೊಬ್ಬನ ಕೈಯಲ್ಲೇ ಇದೆ. ನಮ್ಮ ಶರಣಾಗತಿಗೆ ಅವನೊಬ್ಬನೇ ಅರ್ಹ. ನಮ್ಮ ಭರವಸೆ, ವಿಶ್ವಾಸ ಮತ್ತು ನಂಬಿಕೆಗೂ ಅವನೊಬ್ಬನೇ ಅರ್ಹ. ನಮ್ಮ ಭಯ, ವಿಧೇಯತೆಗಳೆಲ್ಲ ಅವನೊಬ್ಬನಿಗೇ ಸಲ್ಲಬೇಕು. ನಾವು ಅವನ ಕೋಪ, ತಾಪಗಳಿಗೆ ಮಾತ್ರ ಅಂಜಬೇಕು. ಅವನ ಹೊರತು ಯಾರನ್ನೂ ಅಂಜಬಾರದು. ನಮಗೆ ಶುಭವನ್ನಾಗಲೀ ಅಪಾಯವನ್ನಾಗಲೀ ಉಂಟು ಮಾಡುವ ಸಾಮರ್ಥ್ಯ ಅವನೊಬ್ಬನ ಹೊರತು ಇನ್ನಾರಲ್ಲೂ ಇಲ್ಲ. ಆದ್ದರಿಂದ ನಮ್ಮ ಭಯ, ಭರವಸೆ ಎರಡೂ ಅವನ ಶಕ್ತಿಯ ಮೇಲೆಯೇ ಕೇಂದ್ರೀಕೃತವಾಗಿರಬೇಕು.

ಪವಿತ್ರ ಕುರ್‌ಆನ್ ಹೇಳುತ್ತದೆ.

"ನೀನು ನಿನ್ನ ತೋಟದೊಳಗೆ ಪ್ರವೇಶಿಸುತ್ತಿರುವಾಗ ನಿನ್ನ ಬಾಯಿಯಿಂದ 'ಮಾಶಾ ಅಲ್ಲಾಹು ಲಾಕುವ್ವತ ಇಲ್ಲಾ ಬಿಲ್ಲಾಹ್' (ಎಲ್ಲವೂ ಅಲ್ಲಾಹನಿಚ್ಛಿಸಿದಂತೆಯೇ ಆಗುತ್ತದೆ ಅಲ್ಲಾಹನ ಹೊರತು ಇನ್ನಾವ ಶಕ್ತಿಯೂ ಇಲ್ಲ) ಎಂದೇಕೆ ಹೊರಡಲಿಲ್ಲ? ನಿನಗೆ ನಾನು ಸೊತ್ತು ಮತ್ತು ಸಂತತಿಗಳಲ್ಲಿ ನಿನಗಿಂತ ಕೀಳಾಗಿ ಕಾಣಿಸುತ್ತಿದ್ದರೆ." (18:39)

"ಅವನೇ ಜೀವ ನೀಡುತ್ತಾನೆ ಮತ್ತು ಅವನೇ ಮರಣ ಕೊಡುತ್ತಾನೆ." (23:80)

"ಹೇಳಿರಿ- ಓ ಅಲ್ಲಾಹ್, ಸಕಲ ವಿಶ್ವಾಧಿಪತ್ಯದ ಒಡೆಯನೇ, ನೀನು ನಿನಗಿಷ್ಟ ಬಂದವರಿಗೆ ರಾಜ್ಯಾಧಿಕಾರ ನೀಡುವೆ ಮತ್ತು ನಿನಗಿಷ್ಟ ಬಂದವರಿಂದ ಕಸಿದುಕೊಳ್ಳುವೆ. ನಿನಗಿಷ್ಟ ಬಂದವರಿಗೆ ಪ್ರತಿಷ್ಠೆ ಪ್ರದಾನ ಮಾಡುವೆ. ನಿನಗಿಷ್ಟ ಬಂದವರನ್ನು ಅವಮಾನಪಡಿಸುವೆ. ಒಳಿತುಗಳು ನಿನ್ನ ಅಧಿಕಾರ ಹಸ್ತದಲ್ಲಿವೆ. ನಿಶ್ಚಯವಾಗಿಯೂ ನೀನು ಸರ್ವಶಕ್ತನಾಗಿರುವೆ." (3:26)

ಒಬ್ಬ ಮನುಷ್ಯನಿಗೆ ಅಲ್ಲಾಹನ ಮೇಲೆ ವಿಶ್ವಾಸವಿದ್ದರೆ ಅವನು ಅಲ್ಲಾಹನಿಗೆ ಭಯಪಡಬೇಕಾದುದು ಮತ್ತು ಅಲ್ಲಾಹನ ಹೊರತು ಬೇರೆ ಯಾರಿಗೂ ಭಯ ಪಡದಿರುವುದು ಅವನ ಪ್ರಥಮ ಕರ್ತವ್ಯ.

"ಇನ್ನು ಮುಂದೆ ನೀವು ಮಾನವರನ್ನು ಭಯಪಡಬಾರದು. ನೀವು ವಾಸ್ತವದಲ್ಲಿ ಸತ್ಯವಿಶ್ವಾಸಿಗಳಾಗಿದ್ದರೆ ನನ್ನನ್ನೇ ಭಯಪಡಬೇಕು." (ಪವಿತ್ರ ಕುರ್‌ಆನ್, 3:175)

"ಸತ್ಯವಿಶ್ವಾಸಿಗಳು ಅಲ್ಲಾಹನ ಮೇಲೆಯೇ ಭರವಸೆಯನ್ನಿಡಬೇಕು."

(ಪವಿತ್ರ ಕುರ್‌ಆನ್, 3:122)

ಪವಿತ್ರ ಕುರ್‌ಆನ್, ನಿಜವಾದ ಸತ್ಯವಿಶ್ವಾಸಿಗಳ ಬದುಕನ್ನು ಈ ರೀತಿ ವರ್ಣಿಸಿದೆ:

"ನಿಮ್ಮ ವಿರುದ್ಧ ದೊಡ್ಡ ಸೈನ್ಯವೊಂದು ಜಮೆಯಾಗಿದೆ, ಅದನ್ನು ಭಯಪಡಿರಿ ಎಂದು ಜನರು ಅವರೊಡನೆ ಹೇಳಿದರು. ಇದನ್ನು ಕೇಳಿದಾಗ ಅವರ ಸತ್ಯವಿಶ್ವಾಸ ಇನ್ನಷ್ಟು ವರ್ಧಿಸಿತು. 'ನಮಗೆ ಅಲ್ಲಾಹ್ ಸಾಕು ಮತ್ತು ಅವನೇ ಅತ್ಯುತ್ತಮ ಕಾರ್ಯಸಾಧಕನು' ಎಂದು ಅವರು ಉತ್ತರವಿತ್ತರು." (3:173)

ಇದು ನೈಜ ಸತ್ಯವಿಶ್ವಾಸಿಯ ಲಕ್ಷಣ. ಅವನು ಅಲ್ಲಾಹನ ಹೊರತು ಬೇರೆ ಯಾರಿಗೂ ಎಂದೂ ಅಂಜುವುದಿಲ್ಲ. ಆದರೆ ಅಲ್ಲಾಹನಿಗೆ ಮಾತ್ರ ಯಾವಾಗಲೂ ಅಂಜುತ್ತಲಿರುತ್ತಾನೆ. ಅವನು ಅಲ್ಲಾಹನ ಮೇಲೆಯೇ ಭರವಸೆಯನ್ನಿಟ್ಟು ಅವನು ತೋರಿದ ಅವನ ಭಕ್ತಿಯ ಮಾರ್ಗದಲ್ಲೇ ಎಚ್ಚರಿಕೆಯಿಂದ ಬಾಳುತ್ತಿರುತ್ತಾನೆ. ಕೊನೆಗೆ ಅವನು ಇದೇ ಸ್ಥಿತಿಯಲ್ಲಿ ಮರಣವನ್ನಪ್ಪುತ್ತಾನೆ.

**"ಓ ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಬೇಕಾದ ರೀತಿಯಲ್ಲೇ ಭಯ ಪಡಿರಿ. ನೀವು ಮುಸ್ಲಿಮರಾಗಿರುವ ಸ್ಥಿತಿಯಲ್ಲಿಯೇ ವಿನಾ ನಿಮಗೆ ಮರಣ ಬಾರದಿರಲಿ." (ಪವಿತ್ರ ಕುರ್‌ಆನ್, 3:102)**

ಅಲ್ಲಾಹನಿಗೆ ಅಂಜುತ್ತಾ, ಅವನ ಅವಿಧೇಯತೆ ಮತ್ತು ಆಜ್ಞೋಲ್ಲಂಘನೆಗಳಿಂದ ದೂರವಿರುತ್ತಾ ಅವನ ಮೇಲೆಯೇ ಭರವಸೆಯಿಟ್ಟು ಅವನ ಮಾರ್ಗದಲ್ಲಿ ನಡೆಯುವವರಿಗೆ ಅಲ್ಲಾಹನೇ ಸಹಾಯ ಮಾಡುತ್ತಾನೆ. ಅವನು ಅಂಥವರಿಗೆ, ಅವರು ಊಹಿಸಿಯೂ ಇಲ್ಲದಿದ್ದಂತಹ ಮಾರ್ಗಗಳಿಂದ ಸಹಾಯ ಮಾಡುತ್ತಾನೆ. ಅವರ ಸಮಸ್ಯೆ-ಸಂಕಷ್ಟಗಳನ್ನು ನಿವಾರಿಸುತ್ತಾನೆ. ಅವರಿಗೆ ಹೊಸ ದಾರಿ, ಅವಕಾಶಗಳನ್ನು ತೋರಿಸುತ್ತಾನೆ.

**"ಅಲ್ಲಾಹನನ್ನು ಭಯಪಡುತ್ತ ಕಾರ್ಯವೆಸಗುವವನಿಗೆ ಅಲ್ಲಾಹನು ಸಂಕಷ್ಟಗಳಿಂದ ಪಾರಾಗುವ ಯಾವುದಾದರೂ ದಾರಿಯನ್ನು ತೆರೆಯುವನು ಮತ್ತು ಅವನು ಊಹಿಸಿಯೂ ಇರದಂತಹ ಕಡೆಗಳಿಂದ ಅವನಿಗೆ ಜೀವನಾಧಾರ ನೀಡುವನು. ಅಲ್ಲಾಹನ ಮೇಲೆ ಭರವಸೆ ಇಡುವವನ ಪಾಲಿಗೆ ಅವನೇ ಸಾಕು. ಅಲ್ಲಾಹನು ತನ್ನ ಕಾರ್ಯವನ್ನು ಪೂರ್ತಿಗೊಳಿಸಿಯೇ ತೀರುತ್ತಾನೆ. ಅಲ್ಲಾಹನು ಪ್ರತಿಯೊಂದು ವಸ್ತುವಿಗೂ ಒಂದು ವಿಧಿಯನ್ನು ನಿಶ್ಚಯಿಸಿಟ್ಟಿರುತ್ತಾನೆ." (ಪವಿತ್ರ ಕುರ್‌ಆನ್, 65:2,3)**

ಹಝ್ರತ್ ಅಬೂಹುರೈರಾ(ರ) ಉಲ್ಲೇಖಿಸಿರುವಂತೆ, ಒಮ್ಮೆ ಪ್ರವಾದಿ ಮುಹಮ್ಮದ್(ಸ) ಅವರು, "ಪವಿತ್ರ ಕುರ್‌ಆನಿನಲ್ಲಿ ಇರುವ ಒಂದು ಸೂಕ್ತ ಬಗ್ಗೆ- ಕೇವಲ ಆ ಒಂದು ವಾಕ್ಯವನ್ನೇ ಜನರು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡರೆ ಅವರ ಪಾಲಿಗೆ ಸಾಕಾಗುತ್ತದೆ- ನನಗೆ ತಿಳಿದಿದೆ" ಎಂದು ಹೇಳಿ ಆ ಬಳಿಕ ಪ್ರಸ್ತುತ ಸೂಕ್ತವನ್ನು ಪಠಿಸಿದರು. (ಅಹ್ಮದ್, ಇಬ್ನುಮಾಜಃ, ದಾರಿಮಿ)

## ಅಲ್ಲಾಹನ ಮೆಚ್ಚುಗೆ - ಸಂಪೂರ್ಣ ವಿಧೇಯತೆಯಲ್ಲಿ

ಅಲ್ಲಾಹನೇ ಸೃಷ್ಟಿಕರ್ತ. ನಾವೆಲ್ಲ ಅವನ ಸೃಷ್ಟಿಗಳು. ಅಲ್ಲಾಹನೇ ಒಡೆಯ. ನಾವೆಲ್ಲ ಅವನ ದಾಸರು. ಅಲ್ಲಾಹನೇ ಸಾಮ್ರಾಟ. ನಾವೆಲ್ಲಾ ಅವನ ಪ್ರಜೆಗಳು. ಅಲ್ಲಾಹನೇ ನಮ್ಮ ಆರಾಧ್ಯ. ನಾವೆಲ್ಲಾ ಅವನ ಭಕ್ತರು - ಇದುವೇ ನಮ್ಮ ಮತ್ತು ಅಲ್ಲಾಹನ ನಡುವೆ ಇರುವ ಸಂಬಂಧದ ಸ್ವರೂಪ. ಅವನ ಮತ್ತು ನಮ್ಮ ನಡುವಣ ಸಂಬಂಧವು ಈ ಸ್ವರೂಪದ್ದಾಗಿರುವುದರಿಂದಲೇ, ಸದಾ ಅವನಿಗೆ ಕೃತಜ್ಞರಾಗಿರಬೇಕಾದುದು, ಅವನೆದುರು ಬಾಗುತ್ತಾ ಬದುಕಬೇಕಾದುದು, ಅವನ ಮೆಚ್ಚುಗೆ ಪ್ರಾಪ್ತಿ

ಮಾಡುವುದಕ್ಕಾಗಿಯೇ ನಮ್ಮ ಜೀವನ-ಮರಣವನ್ನು ಮುಡಿಪಾಗಿಡಬೇಕಾದುದು, ಅ ದಾಸರಾಗಿ, ಅವನಿಗೆ ಮಾತ್ರ ವಿಧೇಯರಾಗಿ ಬದುಕು ಸಾಗಿಸಬೇಕಾದುದು ನ ಕರ್ತವ್ಯವಾಗಿದೆ.

ಪವಿತ್ರ ಕುರ್‌ಆನಿನ ಅತ್ಯಂತ ಆರಂಭದಲ್ಲಿರುವ ಸೂಕ್ತಗಳು ಹೀಗಿವೆ.

**"ಅಲ್ಲಾಹನಿಗೇ ಸರ್ವಸ್ತುತಿ ಅವನು ಸಕಲ ವಿಶ್ವದ ಪ್ರಭು. ಪರಮ ದಯಾ ಕರುಣಾನಿಧಿ- ನಿರ್ಣಾಯಕ ದಿನದ ಅಧಿಪತಿ (ಆದ ಪ್ರಭುವೇ)- ನಾವು ನಿನಗೆ ಮಾ ಇಬಾದತ್ ಮಾಡುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯ ಬೇಡುತ್ತೇವೆ." (1:2-**

ಇದು ಮನುಷ್ಯ ಪ್ರಕೃತಿಯ ಕರೆ ಪ್ರಕೃತಿಯ ಸೃಷ್ಟಿಕರ್ತನು ಮನುಷ್ಯನ ಅಂತರಾ ಈ ಕೂಗಿಗೆ ಹೀಗೆ ಧ್ವನಿ ಕೊಟ್ಟಿರುವನು. ನಾವು ನಿತ್ಯವೂ ಪ್ರತಿಯೊಂದು ನಮಾಜು ನಲ್ಲೂ ಈ ಧ್ವನಿಯನ್ನು ಕೇಳುತ್ತೇವೆ, ಅದಕ್ಕೆ ಓಗೊಡುತ್ತೇವೆ, ಅಲ್ಲಾಹನಿಗೆ ಕೃತಜ್ಞ ಸಲ್ಲಿಸುತ್ತೇವೆ, ಅವನ ನಿಷ್ಠೆ ಮತ್ತು ಆಜ್ಞಾಪಾಲನೆಯ ಕರಾರು ಮಾಡುತ್ತೇವೆ. ಕರಾರನ್ನು ಪೂರ್ತಿಗೊಳಿಸಲು ಅವನಿಂದಲೇ ನೆರವನ್ನು ಕೇಳುತ್ತೇವೆ.

ಪವಿತ್ರ ಕುರ್‌ಆನಿನ 'ಅಲ್ ಬಕರಃ' ಅಧ್ಯಾಯದಲ್ಲಿ ಇದೇ ವಾಸ್ತವಿಕತೆಯ ಹೀಗೆ ಹೇಳಲಾಗಿದೆ.

**"ಇನ್ನೊಂದೆಡೆ ಅಲ್ಲಾಹನ ಸಂಪ್ರೀತಿಯ ಆಕಾಂಕ್ಷೆಯಲ್ಲಿ ತನ್ನ ದೇಹವ ಸವೆಸುವವನೂ ಇದ್ದಾನೆ. ಅಂತಹ ದಾಸನ ಮೇಲೆ ಅಲ್ಲಾಹನು ಅತ್ಯಂತ ಕೃಪಾಳುವಾ ರುತ್ತಾನೆ. ಓ ಸತ್ಯವಿಶ್ವಾಸಿಗಳೇ, ನೀವು ಸರ್ವಸಂಪೂರ್ಣವಾಗಿ ಇಸ್ಲಾಮಿನೊಳಗೆ ಸ ಕೊಳ್ಳಿರಿ ಮತ್ತು ಶೈತಾನನನ್ನು ಅನುಸರಿಸಬೇಡಿರಿ. ನಿಶ್ಚಯವಾಗಿಯೂ ಅವನು ನಿವ ಪ್ರತ್ಯಕ್ಷ ಶತ್ರುವಾಗಿದ್ದಾನೆ." (2:207-20**

ಈ ವಾಕ್ಯಗಳಿಂದ ಸ್ಪಷ್ಟವಾಗುವಂತೆ, ಅಲ್ಲಾಹನ ಮೆಚ್ಚುಗೆ ಸಂಪಾದಿಸುವುದ ತಮ್ಮ ಬದುಕಿನ ಪರಮ ಧ್ಯೇಯವಾಗಿ ಪರಿಗಣಿಸಿ, ಈ ಮಹಾನ್ ಧ್ಯೇಯವ ಸಾಧಿಸಲಿಕ್ಕಾಗಿ ತಮ್ಮ ಸರ್ವ ಶಕ್ತಿ ಸಾಮರ್ಥ್ಯಗಳನ್ನೂ ಸರ್ವಸ್ವವನ್ನೂ ಅಲ್ಲಾಹ ಅರ್ಪಿಸಿ ಬಿಡುವ ಅಥವಾ ಅವನಿಗೆ ಮಾರಿಬಿಡುವ ಮತ್ತು ತಮ್ಮ ಬಳಿಯಿರು ಯಾವುದನ್ನೂ ತಮ್ಮಿಚ್ಛೆಯಂತೆ ಬಳಸಿಕೊಳ್ಳದೆ ಎಲ್ಲವನ್ನೂ ಅಲ್ಲಾಹನ ಅಪೇಕ್ಷೆಯ ಬಳಸುವ ದಾಸರನ್ನು ಅಲ್ಲಾಹನು ತನ್ನ ನೆಚ್ಚಿನ ದಾಸರೆಂದು ಪರಿಗಣಿಸುತ್ತಾನೆ. ಅ ಮೇಲೆ ವಿಶೇಷ ಅನುಗ್ರಹ ತೋರುತ್ತಾನೆ.

ಪವಿತ್ರ ಕುರ್‌ಆನಿನ 'ತೌಬಾ' ಅಧ್ಯಾಯದಲ್ಲಿ ಹೀಗೆಂದಿದೆ:

**"ವಾಸ್ತವದಲ್ಲಿ ಅಲ್ಲಾಹನು ಸತ್ಯವಿಶ್ವಾಸಿಗಳಿಂದ ಅವರ ತನು-ಧನಗಳನ್ನು ಸ್ವರ್ಗ ಬದಲಿಗೆ ಖರೀದಿ ಮಾಡಿರುತ್ತಾನೆ." (9:11**

ಅಲ್ಲಾಹನ ಮೆಚ್ಚುಗೆ ಮತ್ತು ಸ್ವರ್ಗ ಇವೆರಡೂ ಒಂದೇ ವಾಸ್ತವಿಕತೆಯ ಎರ ರೂಪಗಳು. ಸ್ವರ್ಗವೆಂಬುದು ಅಲ್ಲಾಹನು ತನ್ನ ದಾಸರ ಬಗ್ಗೆ ಸದಾ ಸಂತುಷ್ಟ ಹಾಗ

ಸಂತೃಪ್ತನಾಗಿರುವ ಮತ್ತು ಅದರ ದ್ಯೋತಕವಾಗಿ ಅವರಿಗೆ ಅಪಾರ, ಅನಂತ, ಅನೂಹ್ಯ ಅನುಗ್ರಹಗಳನ್ನೂ ತನ್ನ ಸಾಮಿಪ್ಯ ಮತ್ತು ದರ್ಶನವನ್ನೂ ದಯಪಾಲಿಸುವ ಒಂದು ಉನ್ನತ ಸ್ಥಾನ ಮತ್ತು ಒಂದು ಅತಿಶ್ರೇಷ್ಠ ಅವಸ್ಥೆಯ ಹೆಸರು.

ಅಲ್ ಬಕರಃ ಮತ್ತು ಅತ್ತೌಬಃ ಅಧ್ಯಾಯಗಳ ಪ್ರಸ್ತುತ ವಾಕ್ಯಗಳಿಂದ ವ್ಯಕ್ತವಾಗುವಂತೆ, ದೇವನ ಮತ್ತು ಅವನ ವಿಶ್ವಾಸಿದಾಸರ ಮಧ್ಯೆ ಒಂದು ವ್ಯವಹಾರ ಮತ್ತು ಒಪ್ಪಂದ ಏರ್ಪಟ್ಟಿರುತ್ತದೆ. ದಾಸನು 'ಅಲ್ಲಾಹನ ಹೊರತು ಬೇರಾವ ಆರಾಧ್ಯರಿಲ್ಲ' ಎಂಬ ಸತ್ಯ ವಚನವನ್ನು ಘೋಷಿಸಿ, ತನ್ನನ್ನು ಅಲ್ಲಾಹನ ದಾಸ್ಯಕ್ಕೆ ಒಪ್ಪಿಸುವ ಮೂಲಕ ತನ್ನ ಜೀವನ, ತನ್ನ ಸಾಮರ್ಥ್ಯಗಳು ಮತ್ತು ತನ್ನೆಲ್ಲವನ್ನೂ ಅಲ್ಲಾಹನ ಕೈಗೆ ಮಾರಿಬಿಟ್ಟಂತಾಗುತ್ತದೆ. ಮುಂದೆ ಅವನು ಈ ಕರಾರನ್ನು ಮುರಿಯದೆ ಇದನ್ನು ರಕ್ಷಿಸಿಕೊಂಡು, ನಿಜಕ್ಕೂ ತನ್ನನ್ನು ಅಲ್ಲಾಹನ ಇಚ್ಛೆಯಲ್ಲಿ ವಿಲೀನಗೊಳಿಸಿ, ಅವನ ಆದೇಶಗಳ ಪ್ರಕಾರವೇ ಬದುಕು ಸಾಗಿಸಿದರೆ ಅವನು ತನ್ನ ದಾಸರ ಈ ಅರ್ಪಣೆಯನ್ನು ಸ್ವೀಕರಿಸಿಕೊಳ್ಳುತ್ತಾನೆ. ಅಲ್ಲದೆ ಈ ಅರ್ಪಣೆಯ ಬೆಲೆಯ ರೂಪದಲ್ಲಿ ಸ್ವರ್ಗದ ಅನಂತ ಸಂಪತ್ತನ್ನು ಅವನಿಗೆ ದಯಪಾಲಿಸುತ್ತಾನೆ ಮತ್ತು ಅವನ ಬಗ್ಗೆ ಶಾಶ್ವತವಾಗಿ ಸಂತೃಪ್ತನಾಗಿರುತ್ತಾನೆ.

ಮೇಲೆ ಉದ್ಧರಿಸಲಾಗಿರುವ 'ಅಲ್ ಬಕರಃ' ಅಧ್ಯಾಯದ ಎರಡು ವಾಕ್ಯಗಳ ಪೈಕಿ ಕೊನೆಯ ವಾಕ್ಯ(208)ವು ಈ ಅಂಶವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತದೆ. ಇದರಲ್ಲಿ ತಿಳಿಸಲಾಗಿರುವಂತೆ, ಅಲ್ಲಾಹನ ಮೇಲೆ ವಿಶ್ವಾಸವಿಡುವುದು ಮತ್ತು ಅವನಿಗೆ ತಮ್ಮನ್ನು ಮಾರಿಕೊಳ್ಳುವುದೆಂದರೆ, ಸತ್ಯವಿಶ್ವಾಸಿಯು ಅವನ ಸಂಪೂರ್ಣ ಅನುಸರಣೆಗೆ ಬದ್ಧನಾಗು ವುದೆಂದರ್ಥ. "ಅಲ್ಲಾಹನ ವಿಧೇಯತೆ ಮತ್ತು ಶರಣಾಗತಿಯಲ್ಲಿ ಸಂಪೂರ್ಣ ಪ್ರವೇಶಿಸಿರಿ." ಅಂದರೆ ಸತ್ಯವಿಶ್ವಾಸಿ ತನ್ನ ಬದುಕಿನ ಎಲ್ಲ ಕ್ಷೇತ್ರಗಳಲ್ಲೂ ಎಲ್ಲ ಹಂತಗಳಲ್ಲೂ ಅಲ್ಲಾಹನ ಮೆಚ್ಚುಗೆಯ ಮಾರ್ಗದಲ್ಲೇ ನಡೆಯಬೇಕು. ಅವನ ಆದೇಶ-ಮಾರ್ಗದರ್ಶನ ಗಳನ್ನು ಪರಿಪೂರ್ಣವಾಗಿ ಪಾಲಿಸಬೇಕು. ಇದು ವೈಯಕ್ತಿಕವಾಗಿ ಪ್ರತಿಯೊಬ್ಬ ಸತ್ಯ ವಿಶ್ವಾಸಿಯ ಧೋರಣೆಯಾಗಿರಬೇಕು. ಸಾಮೂಹಿಕವಾಗಿಯೂ ಎಲ್ಲ ಸತ್ಯವಿಶ್ವಾಸಿಗಳೂ ಇದೇ ಧೋರಣೆಯನ್ನು ಅನುಸರಿಸಬೇಕು. ಒಟ್ಟು ಬದುಕಿನಲ್ಲಾಗಲೀ ಬದುಕಿನ ಯಾವುದಾದ ರೊಂದು ಕ್ಷೇತ್ರ ಅಥವಾ ಹಂತದಲ್ಲಾಗಲೀ ಅಲ್ಲಾಹನ ಆದೇಶಗಳನ್ನು ಉಲ್ಲಂಘಿಸುವುದು ಅಥವಾ ನಿರ್ಲಕ್ಷಿಸುವುದು ಸತ್ಯವಿಶ್ವಾಸಕ್ಕೆ ವಿರುದ್ಧವಾಗಿದ್ದು ಅದನ್ನು ಅಲ್ಲಾಹನ ಅನುಸರಣೆಗೆ ವಿರುದ್ಧವಾಗಿ ಶೈತಾನನ ಅನುಸರಣೆ ಎಂದು ಪರಿಗಣಿಸಲಾಗುವುದು. ಶೈತಾನನ ಅನುಸರಣೆಯು ಇಹದಲ್ಲೂ ಪರದಲ್ಲೂ ಮನುಷ್ಯನ ಪಾಲಿಗೆ ವಿನಾಶಕಾರಿ.

ಇದೇ ವಾಸ್ತವಿಕತೆಯನ್ನು 'ಅಲ್ ಅನ್‌ಆಮ್' ಅಧ್ಯಾಯದಲ್ಲಿ ಅಲ್ಲಾಹನು ಈ ರೀತಿ ಹೇಳಿರುವನು:

"ಹೇಳಿರಿ- ನನ್ನ ನಮಾಝ್, ನನ್ನ ಸರ್ವ ಉಪಾಸನಾವಿಧಿಗಳು, ನನ್ನ ಜೀವನ ಮತ್ತು ನನ್ನ ಮರಣ ಎಲ್ಲವೂ ಯಾವ ಸಹಭಾಗಿಯೂ ಇಲ್ಲದ ಸರ್ವಲೋಕಪಾಲಕನಿಗಾಗಿದೆ-

**ಇದನ್ನೇ ನನಗೆ ಆದೇಶಿಸಲಾಗಿದೆ. ನಾನು ಆಜ್ಞಾನುಸರಣೆಯೊಂದಿಗೆ ಶಿರಬಾಗುವವರಲ್ಲಿ ಸರ್ವಪ್ರಥಮನಾಗಿರುತ್ತೇನೆ." (6:162-163)**

ಅಂದರೆ ನಮಾಝ್, ಬಲಿದಾನ ಮುಂತಾದ ಆರಾಧನಾ ಕರ್ಮಗಳನ್ನು ಕೇವಲ ಅಲ್ಲಾಹನ ಸಂಪ್ರೀತಿಗಾಗಿ ಅವನೊಬ್ಬನಿಗೇ ಮೀಸಲಾಗಿಟ್ಟು ನಿರ್ವಹಿಸುವಂತೆಯೇ ಸಂಪೂರ್ಣ ಜೀವನವನ್ನೂ ಅವನಿಗಾಗಿ ಮೀಸಲಿಟ್ಟು ಅವನ ಅಪೇಕ್ಷೆಗಳಿಗೆ ಬದ್ಧವಾಗಿ ಜೀವಿಸಬೇಕು. ಮನುಷ್ಯನು ಜೀವಿಸುವುದು, ಸಾಯುವುದು ಎಲ್ಲವೂ ಅಲ್ಲಾಹನಿಗಾಗಿರಬೇಕು. ನಿಜವಾಗಿ ಇಂತಹ ಪರಿಪೂರ್ಣ ದಾಸ್ಯ ಮತ್ತು ಅನುಸರಣೆಯೇ ಇಸ್ಲಾಮ್ ಧರ್ಮದ ತಿರುಳಾಗಿದೆ. ಅಲ್ಲಾಹನು ತನ್ನ ದಾಸರಿಂದ ಇಂತಹ ಇಸ್ಲಾಮನ್ನೇ ಬಯಸುತ್ತಾನೆ.

**"(ಸಂದೇಶವಾಹಕರೇ, ನನ್ನ ಪರವಾಗಿ) ಹೇಳಿರಿ; ತಮ್ಮ ಮೇಲೆಯೇ ಅತಿರೇಕವೆಸಗಿ ಕೊಂಡಿರುವ ನನ್ನ ದಾಸರೇ! ಅಲ್ಲಾಹನ ಕರುಣೆಯ ಬಗ್ಗೆ ನಿರಾಶರಾಗಬೇಡಿರಿ. ನಿಶ್ಚಯ ವಾಗಿಯೂ ಅಲ್ಲಾಹನ ಸಕಲ ಪಾಪಗಳನ್ನು ಕ್ಷಮಿಸಿ ಬಿಡುತ್ತಾನೆ. ಅವನಂತು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ. ನಿಮ್ಮ ಪ್ರಭುವಿನೆಡೆಗೆ ಮರಳಿ ಬನ್ನಿರಿ ಮತ್ತು ಅವನ ಶರಣಾಗತ ದಾಸರಾಗಿ ಬಿಡಿರಿ -ನಿಮ್ಮ ಮೇಲೆ ಯಾತನೆ ಎರಗಿ ಬಿಡುವ ಹಾಗೂ ಮತ್ತೆಲ್ಲಿಂದಲೂ ನಿಮಗೆ ಸಹಾಯ ಸಿಗಲಾರದ ಸ್ಥಿತಿ ಬರುವುದಕ್ಕೆ ಮುಂಚೆ. ಮತ್ತು ನಿಮ್ಮ ಕಡೆಗೆ ನಿಮ್ಮ ಪ್ರಭುವಿನ ಕಡೆಯಿಂದ ಕಳುಹಿಸಲಾಗಿರುವ ಗ್ರಂಥದ ಅತ್ಯುತ್ತಮ ತಾತ್ಪರ್ಯವನ್ನು ಅನುಸರಿಸಿರಿ- ನಿಮಗೆ ಅರಿವೇ ಇಲ್ಲದಂತೆ ನಿಮ್ಮ ಮೇಲೆ ಹಠಾತ್ತನೆ ಯಾತನೆಯು ಬಂದೆರಗು ವುದಕ್ಕೆ ಮುಂಚೆ!" (ಪವಿತ್ರ ಕುರ್‌ಆನ್, 39:53-55)**

ಇಲ್ಲಿ ಅಲ್ಲಾಹನು ತನ್ನ ಅವಿಧೇಯ, ಬಹುದೇವಾರಾಧಕ ಮತ್ತು ಸತ್ಯಧಿಕ್ಕಾರಿ ದಾಸರನ್ನು ಕೂಡಾ ಕರೆದು, ಅವರಿಗೆ ಬುದ್ಧಿ ಹೇಳಿರುವ ಶೈಲಿ ಎಷ್ಟೊಂದು ವಾತ್ಸಲ್ಯ ಭರಿತವಾಗಿದೆ! ದಾಸರೇ! ನೀವು ಮಾಡಿರುವ ಅನ್ಯಾಯ ಮತ್ತು ಪಾಪಗಳು ನಿಜವಾಗಿಯೂ ಬಹಳ ಗಂಭೀರ ಸ್ವರೂಪದವುಗಳು. ಈ ಮೂಲಕ ನೀವು ನಿಜಕ್ಕೂ ಇಹ-ಪರಗಳ ಘೋರ ಶಿಕ್ಷೆಗೆ ಅರ್ಹರಾಗಿ ಬಿಟ್ಟಿರುವಿರಿ. ಆದರೆ ಈಗಲೂ ನಿಮಗೆ ಅವಕಾಶವಿದೆ. ಆ ಘೋರ ಶಿಕ್ಷೆಯಿಂದ ನೀವು ಪಾರಾಗಬಹುದು. ನಿಮ್ಮ ಒಡೆಯನು ಅತ್ಯಂತ ಕ್ಷಮಾಶೀಲ ಹಾಗೂ ಕರುಣಾಮಯಿಯಾಗಿದ್ದಾನೆ. ಅವನು ನಿಮ್ಮೆಲ್ಲ ಪಾಪಗಳನ್ನು ಕ್ಷಮಿಸಬಲ್ಲನು. ನೀವು ಅವನಿಗೆ ಶರಣಾಗತರಾಗಿರಿ. ಅವನೆದುರು ವಿಧೇಯವಾಗಿ ಬಾಗಿರಿ. ನಿಮ್ಮ ಬಹುದೇವಾರಾಧನೆ, ದೇವಧಿಕ್ಕಾರ ಮತ್ತಿತರ ದುಷ್ಟತೆಗಳನ್ನು ತೊರೆದು ಪಶ್ಚಾತ್ತಾಪ ಪಡಿರಿ. ಅವನು ನಿಮಗಾಗಿಯೇ ಕಳುಹಿಸಿರುವ ಅತ್ಯುತ್ತಮ ಧರ್ಮವನ್ನು ಅನುಸರಿಸಿ. ನೀವು ನಿಮ್ಮ ಒಡೆಯನನ್ನು ಗುರುತಿಸಿ, ಆ ಕರುಣಾಸಾಗರನು ನಿಮ್ಮ ಸರ್ವತೋಮುಖ ಅಭ್ಯುದಯಕ್ಕಾಗಿ ಕಳುಹಿಸಿರುವ ಜೀವನ ಕ್ರಮವನ್ನು ಅಂಗೀಕರಿಸಿಕೊಂಡರೆ ಅವನು ನಿಮ್ಮೆಲ್ಲ ಗತ ಪಾಪಗಳನ್ನು ಕ್ಷಮಿಸುವನು. ನಿಮ್ಮನ್ನು ಅಪಾರ ಅನುಗ್ರಹಗಳಿಗೆ ಮತ್ತು ಅನಂತ ಸ್ವರ್ಗಕ್ಕೆ ಪಾತ್ರಗೊಳಿಸುವನು. ಇನ್ನು ನೀವು ನಿಮ್ಮ ಇಂದಿನ ವಿದ್ರೋಹದಲ್ಲೇ ಮುಂದುವರಿಯುವ ಹಠಮಾರಿತನ ತೋರಿದರೆ ಇಹ-ಪರಗಳಲ್ಲಿ ಅವನ ಶಾಪಕ್ಕೆ

ಂತ್ತಾಗುವಿರಿ. ಅವನ ಶಾಪದಿಂದ ಮತ್ತು ಅವನು ಎರಗಿಸುವ ಯಾತನೆಯಿಂದ ನಿಮ್ಮನ್ನು ಕ್ಷಿಸಿಕೊಳ್ಳಲು ನಿಮ್ಮ ಬಳಿ ಯಾವ ಮಾರ್ಗವೂ ಉಳಿಯಲಾರದು.

ಜನರು ಅಲ್ಲಾಹನ ದಾಸ್ಯ ಮತ್ತು ಅನುಸರಣೆ ಸ್ವೀಕರಿಸಬೇಕೆಂಬುದು ಅಲ್ಲಾಹನ ಅಗತ್ಯವಲ್ಲ. ಅದು ಮನುಷ್ಯನ ಅಗತ್ಯ. ಮನುಷ್ಯನ ವಿಜಯವು ಅವನು ಅಲ್ಲಾಹನ ದಾಸ್ಯ ಸ್ವೀಕರಿಸಿ ಅವನಿಗೆ ಶರಣಾಗಿ ಬದುಕುವುದನ್ನು ಅವಲಂಬಿಸಿಕೊಂಡಿದೆ. ಇದೇ ರೀತಿ ಮನುಷ್ಯನು ಅಲ್ಲಾಹನ ಆಜ್ಞೆಗಳನ್ನು ಉಲ್ಲಂಘಿಸಿದರೆ ಅದರಿಂದ ಅಲ್ಲಾಹನಿಗೇನೂ ನಷ್ಟವಿಲ್ಲ. ಮನುಷ್ಯನೇ ಈ ವಿದ್ರೋಹದ ಮೂಲಕ ತನ್ನ ಇಹ-ಪರಗಳನ್ನು ಹಾಳು ಗೆಡವಿಕೊಂಡಂತಾಗುತ್ತದೆ.

ಅಲ್ಲಾಹನ ಆರಾಧನೆ, ಉಪಾಸನೆ ಮಾಡುವಂತೆಯೇ ಸಂಪೂರ್ಣ ಬದುಕಿನಲ್ಲಿ ಅವನ ಆಜ್ಞಾಪಾಲನೆ ಮತ್ತು ಅವನ ಕಾನೂನಿನ ಅನುಸರಣೆ ಮಾಡಬೇಕಾದುದು ಕೂಡಾ ಅವಶ್ಯಕ. ಇದು ನಮ್ಮ ಈಮಾನ್ ಮತ್ತು ಏಕದೇವ ವಿಶ್ವಾಸದ ಬೇಡಿಕೆಯೂ ಹೌದು. ನಾವು ಅಲ್ಲಾಹನ ಆಜ್ಞಾನುಸರಣೆಯಿಂದ ವಿಮುಖರಾಗಿ ಬಿಟ್ಟರೆ ಮತ್ತೆ ನಾವು ನಮ್ಮನ್ನು ಸತ್ಯವಿಶ್ವಾಸಿಗಳೆಂದೂ ಏಕದೇವ ವಿಶ್ವಾಸಿಗಳೆಂದೂ ಹೇಳಿಕೊಳ್ಳುವ ಹಾಗಿಲ್ಲ. ಏಕೆಂದರೆ ಅಲ್ಲಾಹ್, ವಿಶ್ವದ ಸೃಷ್ಟಿಕರ್ತ, ಮಾಲಕ ಮತ್ತು ಪಾಲಕ ಮಾತ್ರವಲ್ಲ ಅವನು ಲೋಕದ ಆಡಳಿತಗಾರ ಹಾಗೂ ಪರಮಾಧಿಕಾರಿಯೂ ಆಗಿರುವನು.

**"ಅವನದೇ ಸೃಷ್ಟಿ. ಅವನದೇ ಅಪ್ಪಣೆ. ಸರ್ವಲೋಕಗಳ ಒಡೆಯನೂ ಪ್ರಭುವೂ ಆಗಿರುವ ಅಲ್ಲಾಹನು ಮಹಾ ಸಮೃದ್ಧನು." (ಪವಿತ್ರ ಕುರ್‌ಆನ್, 7:54)**

ವಿಶ್ವದ ಏಕಮೇವಾದ್ವಿತೀಯ ಆಡಳಿತಗಾರನಾಗಿರುವ ಆ ಅಲ್ಲಾಹನೇ ಮನುಷ್ಯನ ಆಡಳಿತಗಾರನೂ ಆಗಿರುವನು.

**"ಹೇಳಿರಿ- ನಾನು ಅಭಯ ಯಾಚಿಸುತ್ತೇನೆ- ಮಾನವರ ಪ್ರಭುವಿನ, ಮಾನವರ ಸಾಮ್ರಾಟನ, ಮಾನವರ ನೈಜ ಆರಾಧ್ಯನ." (ಪವಿತ್ರ ಕುರ್‌ಆನ್, 114:1-3)**

ಮನುಷ್ಯರ ಸಾರ್ವಭೌಮ ಆಡಳಿತಗಾರನಾಗಿರುವ ಆ ಪ್ರಭು ಮಾತ್ರ ಮನುಷ್ಯನಿಗೆ ಆದೇಶಗಳನ್ನೂ ಕಾನೂನುಗಳನ್ನೂ ಕೊಡುವ ಅಧಿಕಾರ ಹೊಂದಿರುತ್ತಾನೆ.

**"ಆಜ್ಞಾಧಿಕಾರವು ಅವನ ಹೊರತು ಇನ್ನಾರಿಗೂ ಇಲ್ಲ."**

**(ಪವಿತ್ರ ಕುರ್‌ಆನ್, 12:67)**

ಅಲ್ಲಾಹನ ಹೊರತು ಬೇರೆ ಯಾರನ್ನೇ ಆಗಲಿ ಪ್ರಶ್ನಾತೀತವಾಗಿ ಕಾನೂನು ನಿರ್ಮಾಪಕ ನೆಂದು ಅಂಗೀಕರಿಸಿದರೆ ಅದನ್ನು 'ಶಿರ್ಕ್'(ದೇವಸಹಭಾಗಿತ್ವ)ಎಂದು ಪರಿಗಣಿಸಲಾಗುತ್ತದೆ.

**"ಇವರ ಬಳಿ, ಇವರಿಗಾಗಿ ಧರ್ಮದ ಸ್ವರೂಪದಲ್ಲಿರುವ ಮತ್ತು ಅಲ್ಲಾಹನು ಅನುಮತಿಸಿಲ್ಲದ ಜೀವನ ವಿಧಾನವೊಂದನ್ನು ನಿಶ್ಚಯಿಸಿಕೊಟ್ಟಂತಹ ದೇವಸಹಭಾಗಿಗಳು ಇದ್ದಾರೆಯೇ?" (ಪವಿತ್ರ ಕುರ್‌ಆನ್, 42:21)**

ಮನುಷ್ಯನ ಪಾಲಿಗೆ ಅಲ್ಲಾಹನ ಕಾನೂನು ಮಾತ್ರವೇ ಸಮರ್ಪಕ, ಧರ್ಮಸಮ್ಮತ ಮತ್ತು ಕಡ್ಡಾಯವಾಗಿ ಅನುಸರಣಾರ್ಹವಾಗಿದೆ. ಅದರ ಹೊರತು ಬೇರಾವುದೇ ಕಾನೂನನ್ನು

ಧರ್ಮಸಮ್ಮತ ಮತ್ತು ಸಮರ್ಪಕವೆಂದು ಭಾವಿಸಿ ಅನುಸರಿಸುವುದು ಬಹುದೇವಾರಾ ಎಂದು ಪರಿಗಣಿಸಲ್ಪಡುತ್ತದೆ.

**"ಹೇ ಜನರೇ, ನಿಮ್ಮ ಪ್ರಭುವಿನ ಕಡೆಯಿಂದ ಅವತೀರ್ಣ ಗೊಳಿಸಲ್ಪಟ್ಟಿರುವುದನ್ನೆ ಅನುಸರಿಸಿರಿ ಮತ್ತು ನಿಮ್ಮ ಪಾಲಕ ಪ್ರಭುವನ್ನು ಬಿಟ್ಟು ಇತರ ಸಂರಕ್ಷಕರ ಅನುಸರಿಸಬೇಡಿರಿ. ಆದರೆ ನೀವು ಉಪದೇಶವನ್ನು ಅಲ್ಪವೇ ಸ್ವೀಕರಿಸುತ್ತೀರಿ."**

**(ಪವಿತ್ರ ಕುರ್‌ಆನ್, 7:**

ಅಂದರೆ ಅಲ್ಲಾಹನ ಕಾನೂನನ್ನು ಸಮರ್ಪಕವೆಂದೂ ಕಡ್ಡಾಯವಾಗಿ ಅನುಸರಣಾಯ ವೆಂದೂ ಅಂಗೀಕರಿಸಿ ಪ್ರಾಯೋಗಿಕವಾಗಿ ಅದನ್ನು ಅನುಸರಿಸಬೇಕಾದುದು ಅಲ್ಲಾಹನ ರಬ್ಬ್(ಪ್ರಭು, ಪಾಲಕ, ಅಧಿಕಾರಿ) ಎಂದು ವಿಶ್ವಾಸವಿಡುವುದರ ಸ್ವಾಭಾವಿಕ ಬೇ ಯಾಗಿದೆ. ಇದೇ ಸ್ಥಾನವನ್ನು ಇತರರಿಗೆ ಕೊಟ್ಟುಬಿಟ್ಟರೆ, ಅವರನ್ನು ರಬ್ಬ್‌ನ ಅಥ ಪ್ರಭುತ್ವದ ಸ್ಥಾನದಲ್ಲಿ ಕುಳ್ಳಿರಿಸಿದಂತಾಗುವುದು.

ಅಲ್ಲಾಹನ ಕಾನೂನಿನ ಅನುಸರಣೆ ಕಡ್ಡಾಯವಾಗಿರುವುದು, ಅದು ವಿಶ್ವದ ಮ ಮನುಷ್ಯರ ನೈಜ ಹಾಗೂ ಕಾನೂನುಬದ್ಧ ಪಾಲಕ ಪ್ರಭುವಿನ ಕಾನೂನು ಎಂಬ ಕಾ ದಿಂದ ಮಾತ್ರ ಅಲ್ಲ. ಅದು ನ್ಯಾಯಬದ್ಧ ಕಾನೂನು ಮತ್ತು ಅನ್ಯಾಯದ ಲವಲೇಶವನ ಒಳಗೊಂಡಿಲ್ಲದ ಹಾಗೂ ತನ್ನ ದಾಸರ ಮೇಲೆ ಕಿಂಚಿತ್ತೂ ಅನ್ಯಾಯ ಮಾಡಬಯಸ ದೇವನಿಂದ ನಿರ್ಮಿತವಾದ ಕಾನೂನು ಎಂಬ ನೆಲೆಯಲ್ಲೂ ಆ ಕಾನೂನಿನ ಅನುಸ ಅತ್ಯವಶ್ಯಕವಾಗಿದೆ.

**"ನಾವು ನಿಮಗೆ ನಿಖರವಾಗಿ ತಿಳಿಸುತ್ತಿರುವ ಅಲ್ಲಾಹನ ಸುಸ್ಪಷ್ಟ ಆದೇಶಗಳ ಏಕೆಂದರೆ ಅಲ್ಲಾಹನು ಲೋಕವಾಸಿಗಳ ಮೇಲೆ ಅಕ್ರಮವೆಸಗುವ ಇರಾದೆಯನ್ನೇ ಇಟ್ಟಿರುವುದಿಲ್ಲ."** **(ಪವಿತ್ರ ಕುರ್‌ಆನ್, 3:10**

ಅಲ್ಲಾಹನೇ ಎಲ್ಲ ಮನುಷ್ಯರ ಸೃಷ್ಟಿಕರ್ತ. ಅವನು ಎಲ್ಲರನ್ನೂ ಪೋಷಿಸುತ್ತಿ ವವನು, ಅವನ ಅನುಗ್ರಹ ಎಲ್ಲರಿಗೂ ಅನ್ವಯಿಸುತ್ತದೆ. ಅವನ ದೃಷ್ಟಿಯಲ್ಲಿ ಎಲ್ಲ ಸರಿಸಮಾನರು, ಎಲ್ಲರಿಗೂ ನ್ಯಾಯವನ್ನೇ ಮಾಡುವವನು ಮತ್ತು ಯಾರ ಮೇ ಅನ್ಯಾಯ ಮಾಡದವನು ಎಂಬುದನ್ನು ಅವನ ಬಗ್ಗೆ ಮಾತ್ರ ನಂಬಲು ಸಾಧ್ಯ. ಇದ ಅವನಿಂದ ಮಾತ್ರ ನಿರೀಕ್ಷಿಸಲು ಸಾಧ್ಯ. ಅವನು ತನ್ನ ಧರ್ಮವನ್ನು ಈ ಭೂಮಿ ಕಳುಹಿಸಿರುವುದೇ ಮನುಷ್ಯನನ್ನು ಮಾನವ ನಿರ್ಮಿತ, ಅಜ್ಞಾನಜನ್ಯ, ಅನ್ಯಾಯ ಶ ಮತ್ತು ಅಸಂತುಲಿತ ಕಾನೂನುಗಳಿಂದ ರಕ್ಷಿಸಲಿಕ್ಕಾಗಿ ಮತ್ತು ದಿವ್ಯ ಯುಕ್ತಿಯಿ ಕೂಡಿದ, ಸಂತುಲಿತ ಮತ್ತು ನ್ಯಾಯ ಪೂರ್ಣ ಕಾನೂನಿನ ಮೂಲಕ ಮಾನವಕು ಎಲ್ಲ ವರ್ಗ, ಸಮೂಹ, ಜನಾಂಗ ಮತ್ತು ರಾಷ್ಟ್ರಗಳಿಗೆ ನ್ಯಾಯ ಸಿಗುವಂತಾಗಲಿಕ್ಕಾ

**"ನಾವು ನಮ್ಮ ಸಂದೇಶವಾಹಕರನ್ನು ಸುವ್ಯಕ್ತ ನಿದರ್ಶನಗಳು ಮತ್ತು ಸನ್ಮಾ ದರ್ಶನದೊಂದಿಗೆ ಕಳುಹಿಸಿದೆವು. ಜನರು ನ್ಯಾಯದಲ್ಲಿ ಸ್ಥಿರವಾಗಿ ನಿಲ್ಲಲೆಂದು ಅ ಜೊತೆ ಗ್ರಂಥ ಮತ್ತು ತಕ್ಕಡಿಯನ್ನು ಅವತೀರ್ಣಗೊಳಿಸಿದೆವು."**

**(ಪವಿತ್ರ ಕುರ್‌ಆನ್, 57:2**

ಅಲ್ಲಾಹನ ಕಾನೂನು ಮತ್ತು ಅವನು ಕೊಟ್ಟಿರುವ ಜೀವನ ಸಂಹಿತೆ ಮಾತ್ರ ನ್ಯಾಯಪೂರ್ಣ ಮತ್ತು ಸಂತುಲಿತವಾಗಿರುವುದು ಮಾತ್ರವಲ್ಲ ಅದುವೇ ಇಹ-ಪರಗಳಲ್ಲಿ ಮನುಷ್ಯನಿಗೆ ಸಾರ್ಥಕತೆ ಮತ್ತು ಸಾಫಲ್ಯ ಗಳಿಸಿಕೊಡುವ ಸಾಧನವಾಗಿದೆ. ಇಂತಹ ಜೀವನ ಸಂಹಿತೆಯೊಂದನ್ನು ಕೊಡಲು ದೇವನಿಗೆ ಮಾತ್ರ ಸಾಧ್ಯ ಮತ್ತು ನಿಜಕ್ಕೂ ಅವನು ನಿಮಗೆ ಅಂತಹುದೇ ಧರ್ಮವನ್ನು ಕೊಟ್ಟಿರುವನು.

"ಅಂತಹವರು ತಮ್ಮ ಪ್ರಭುವಿನ ಸನ್ಮಾರ್ಗದಲ್ಲಿದ್ದಾರೆ ಮತ್ತು ಅವರೇ ಯಶಸ್ವಿಯಾಗುವವರು." (ಪವಿತ್ರ ಕುರ್‌ಆನ್, 2:5)

ಅಲ್ಲಾಹನು ಮನುಷ್ಯರನ್ನು ಭೂಮಿಯಲ್ಲಿ ನೆಲೆಗೊಳಿಸುವಾಗಲೇ ಅವರಿಗೆ ಅವರ ಇಹ-ಪರ ವಿಮೋಚನೆಯು ಅಲ್ಲಾಹನ ಆಜ್ಞಾಪಾಲನೆ ಮತ್ತು ಅವನ ಪ್ರವಾದಿಗಳ ಮೂಲಕ ಸಿಗುವ ಅವನ ಧರ್ಮದ ಅನುಸರಣೆಯನ್ನೇ ಅವಲಂಬಿಸಿದೆಯೆಂಬುದನ್ನು ಮತ್ತು ಅದಕ್ಕೆ ತಪ್ಪಿ ನಡೆದರೆ ದೇವನ ಶಾಶ್ವತ ಶಿಕ್ಷೆಗೆ ಗುರಿಯಾಗಬೇಕಾದೀತೆಂಬುದನ್ನು ತಿಳಿಸಲಾಗಿತ್ತು.

"ಅವನು ತನ್ನ ಅನುಗ್ರಹದಿಂದ ನಮ್ಮನ್ನು ಶಾಶ್ವತ ನಿವಾಸದಲ್ಲಿ ತಂದಿರಿಸಿದನು. ಇನ್ನು ಇಲ್ಲಿ ನಮಗೆ ಯಾವುದೇ ಸಂಕಷ್ಟವೂ ಇಲ್ಲ, ಆಯಾಸವೂ ಉಂಟಾಗುವುದಿಲ್ಲ ಎನ್ನುವರು. ಸತ್ಯನಿಷೇಧಿಗಳಿಗಾಗಿ ನರಕಾಗ್ನಿ ಇದೆ. ಅವರಿಗೆ ಮರಣ ಕೊಟ್ಟು ಅವರನ್ನು ಮುಗಿಸಿ ಬಿಡಲಾಗುವುದೂ ಇಲ್ಲ ಮತ್ತು ಅವರ ನರಕ ಯಾತನೆಯಲ್ಲಿ ಕಡಿತ ಮಾಡಲಾಗುವುದೂ ಇಲ್ಲ. ನಾವು ಪ್ರತಿಯೊಬ್ಬ ಸತ್ಯನಿಷೇಧಿಗೂ ಇದೇ ರೀತಿ ಪ್ರತಿಫಲ ಕೊಡುತ್ತೇವೆ." (ಪವಿತ್ರ ಕುರ್‌ಆನ್, 35:35-36)

ವಿವಿಧ ಕಾಲ ಮತ್ತು ಪ್ರದೇಶಗಳಲ್ಲಿ ಅಲ್ಲಾಹನ ಸಂದೇಶವಾಹಕರು ಜನರಿಗೆ ಅಲ್ಲಾಹನ ಧರ್ಮ ಮತ್ತು ಅದರ ಕಾನೂನನ್ನು ಪರಿಚಯಿಸಿರುವರು:

"ನಾವು ನಿಮ್ಮನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರಾಗಿ ಸತ್ಯಸಹಿತ ಕಳುಹಿಸಿ ರುತ್ತೇವೆ. ಎಚ್ಚರಿಕೆ ಕೊಡುವವರಾರೂ ಬಂದಿರದಂತಹ ಸಮುದಾಯವೊಂದೂ ಗತಿಸಿಲ್ಲ." (ಪವಿತ್ರ ಕುರ್‌ಆನ್, 35:24)

ಕೊನೆಯದಾಗಿ ಪ್ರವಾದಿ ಮುಹಮ್ಮದ್(ಸ) ಸಕಲ ಮಾನವಕುಲಕ್ಕೆ ನಾಯಕ ಮತ್ತು ಮಾರ್ಗದರ್ಶಕರಾಗಿ ಆಗಮಿಸಿದರು:

"(ಪೈಗಂಬರರೇ,) ನಾವು ನಿಮ್ಮನ್ನು ಸಕಲ ಮಾನವರಿಗೆ ಸುವಾರ್ತೆ ಕೊಡುವವರಾಗಿಯೂ ಎಚ್ಚರಿಕೆ ನೀಡುವವರಾಗಿಯೂ ಮಾಡಿ ಕಳುಹಿಸಿರುತ್ತೇವೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ." (ಪವಿತ್ರ ಕುರ್‌ಆನ್, 34:28)

ಪ್ರವಾದಿ ಮುಹಮ್ಮದ್(ಸ) ಅಲ್ಲಾಹನ ಅಂತಿಮ ಸಂದೇಶವಾಹಕರೂ ಅಂತ್ಯ ಪ್ರವಾದಿಯೂ ಆಗಿರುವರು. ಅವರ ಬಳಿಕ ಪ್ರವಾದಿಗಳು ಬರಲಿಕ್ಕಿಲ್ಲ.

"(ಜನರೇ) ಮುಹಮ್ಮದ್‌ರು ನಿಮ್ಮ ಪುರುಷರ ಪೈಕಿ ಯಾರದೇ ತಂದೆಯಲ್ಲ. ವಾಸ್ತವದಲ್ಲಿ ಅವರು ಅಲ್ಲಾಹನ ಸಂದೇಶವಾಹಕರು ಮತ್ತು ಪ್ರವಾದಿಗಳಲ್ಲಿ ಕೊನೆಯವರಾಗಿರುತ್ತಾರೆ. ಅಲ್ಲಾಹನು ಸಕಲ ವಸ್ತುಗಳ ಪರಿಜ್ಞಾನವುಳ್ಳವನು."

(ಪವಿತ್ರ ಕುರ್‌ಆನ್, 33:40)

ಪ್ರವಾದಿ ಮುಹಮ್ಮದ್‌ರ(ಸ) ಆಗಮನಾನಂತರ ಅಲ್ಲಾಹನ ಅನುಸರಣೆ ಮತ್ತು ಅವನ ಮೆಚ್ಚುಗೆ ಸಂಪಾದಿಸಲು ಒಂದು ಮಾರ್ಗ ಮಾತ್ರ ಉಳಿಯುತ್ತದೆ. ಜೀವನದ ಎಲ್ಲ ಕ್ಷೇತ್ರಗಳಲ್ಲಿ, ಎಲ್ಲ ವಿಷಯಗಳಲ್ಲಿ ಅಂತಹ ಪ್ರವಾದಿಯನ್ನು(ಸ) ಪರಿಪೂರ್ಣವಾಗಿ ಅನುಸರಿಸುವುದೇ ಆ ಮಾರ್ಗ.

"ಓ ಪೈಗಂಬರರೇ, ನೀವು ಜನರೊಡನೆ ಹೀಗೆ ಹೇಳಿಬಿಡಿರಿ,- ನೀವು ನಿಜವಾಗಿಯೂ ಅಲ್ಲಾಹನನ್ನು ಪ್ರೀತಿಸುತ್ತೀರೆಂದಾದರೆ ನನ್ನ ಅನುಕರಣೆ ಮಾಡಿರಿ. ಅಲ್ಲಾಹನು ನಿಮ್ಮನ್ನು ಪ್ರೀತಿಸುವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವನು. ಅವನು ಮಹಾ ಕ್ಷಮಾ ಶೀಲನೂ ಕರುಣಾಮಯಿಯೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 3:31)

ಅಲ್ಲಾಹ್ ಮತ್ತು ಅವನ ಪ್ರವಾದಿಯ ಆಜ್ಞಾಪಾಲನೆ ಮತ್ತು ಅನುಸರಣೆ ಮಾಡಲು ತಯಾರಿಲ್ಲದ ಜನರನ್ನು ಪವಿತ್ರ ಕುರ್‌ಆನ್, ಸತ್ಯವಿಶ್ವಾಸಿಯೆಂದು ಅಂಗೀಕರಿಸುವುದಿಲ್ಲ.

"ನಾವು ಅಲ್ಲಾಹ್ ಮತ್ತು ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿದೆವೆಂದೂ ನಾವು ಅನುಸರಣೆಯನ್ನು ಸ್ವೀಕರಿಸಿದ್ದೇವೆಂದೂ ಅವರು ಹೇಳುತ್ತಾರೆ. ಆದರೆ ಅನಂತರ ಅವರಲ್ಲೊಂದು ವಿಭಾಗವು (ಅನುಸರಣೆಯಿಂದ) ವಿಮುಖವಾಗಿ ಬಿಡುತ್ತದೆ. ಇಂತಹವರು ಖಂಡಿತ ಸತ್ಯವಿಶ್ವಾಸಿಗಳಲ್ಲ." (ಪವಿತ್ರ ಕುರ್‌ಆನ್, 24:47)

"ಲಾ ಇಲಾಹ ಇಲ್ಲಲ್ಲಾಹ್ ಮುಹಮ್ಮದರ್ರಸೂಲುಲ್ಲಾಹ್" (ಅಲ್ಲಾಹನ ಹೊರತು ಬೇರೆ ಆರಾಧ್ಯರಿಲ್ಲ, ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರು) ಎಂಬುದು ಇಸ್ಲಾಮಿನ ಮೂಲಭೂತ ತತ್ವ. ಅದರ ಮೊದಲ ಭಾಗವು ಅಲ್ಲಾಹನ ಹೊರತು ಬೇರಾವ ಆರಾಧ್ಯರಿಲ್ಲ ಎಂಬುದನ್ನು ಮಾತ್ರವಲ್ಲದೆ, ಮಾನವನು ಕೇವಲ ಅಲ್ಲಾಹ ನೊಬ್ಬನ ದಾಸನಾಗಿದ್ದು ಅವನು ಜೀವನದಾದ್ಯಂತ ಅಲ್ಲಾಹನ ಮಾತ್ರ ದಾಸ್ಯ ಮತ್ತು ಆರಾಧನೆಯನ್ನು ಮಾಡಬೇಕೆಂಬುದನ್ನೂ ತಿಳಿಸುತ್ತದೆ. ಎರಡನೆಯ ಭಾಗವು, ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರು ಎಂಬುದನ್ನು ಮಾತ್ರವಲ್ಲದೆ ಜೀವನದ ಎಲ್ಲ ವ್ಯವಹಾರ ಗಳನ್ನು ಅವರು ತಂದು ಕೊಟ್ಟ ಧರ್ಮಕ್ಕೆ ಬದ್ಧವಾಗಿ, ಅವರ ಮಾರ್ಗದರ್ಶನವನ್ನು ಅನುಸರಿಸುತ್ತಾ ಮಾಡುವುದೊಂದೇ ಅಲ್ಲಾಹನನ್ನು ಮೆಚ್ಚಿಸುವ ಮಾರ್ಗವಾಗಿದೆ ಎಂಬುದನ್ನು ಅದು ಸ್ಪಷ್ಟಪಡಿಸುತ್ತದೆ.

ಇದುವೇ ಇಹ-ಪರಗಳಲ್ಲಿ ವಿಜಯ ಮತ್ತು ಮೋಕ್ಷ ಗಳಿಸುವ ಮಾರ್ಗ. ಈ ಮಾರ್ಗವನ್ನು ಅನುಸರಿಸುವ ಮೂಲಕ ಮಾತ್ರ ನಾವು ಅಲ್ಲಾಹನ ಮೆಚ್ಚುಗೆ, ಅವನ ಅನುಗ್ರಹ, ಸಹಾಯ ಮತ್ತು ಸಾಮೀಪ್ಯವನ್ನು ಸಂಪಾದಿಸಬಹುದು.

❁❁❁

# ಮಾನವರ ಹಕ್ಕುಗಳು

ಸಾಮಾನ್ಯವಾಗಿ ಧರ್ಮವೆಂದರೆ ಅದು ದೇವರು ಮತ್ತು ಮಾನವರ ಮಧ್ಯೆ ಇರುವ ಖಾಸಗಿ ವ್ಯವಹಾರವೆಂದು ವ್ಯಾಖ್ಯಾನಿಸಲಾಗುತ್ತದೆ. ಈ ವ್ಯಾಖ್ಯಾನ ಒಂದು ವೇಳೆ ಇತರ ಧರ್ಮಗಳ ಮಟ್ಟಿಗೆ ಸರಿಯಾಗಿದ್ದರೂ ಇಸ್ಲಾಮಿನ ಮಟ್ಟಿಗೆ ಸರಿಯಲ್ಲ. ಇಸ್ಲಾಮ್ ಧರ್ಮವು ಮನುಷ್ಯನ ಖಾಸಗಿ ಮತ್ತು ಸಾರ್ವಜನಿಕ, ವೈಯಕ್ತಿಕ ಮತ್ತು ಸಾಮಾಜಿಕ ಹೀಗೆ ಎರಡೂ ಕ್ಷೇತ್ರಗಳೊಂದಿಗೆ ಸಮಾನ ರೀತಿಯ ಸಂಬಂಧ ಹೊಂದಿದೆ. ಯಾವ ರೀತಿ ಇಸ್ಲಾಮ್ ಧರ್ಮವೆಂಬುದು ದೇವ ಮತ್ತು ಮಾನವರ ಮಧ್ಯೆ ಸರಿಯಾದ ಸಂಬಂಧ ಸ್ಥಾಪಿಸುವುದರ ಹೆಸರೋ ಹಾಗೆಯೇ ಅದು ಮಾನವ ಮತ್ತು ಮಾನವರ ಮಧ್ಯೆ ಸರಿಯಾದ ಸಂಬಂಧ ಬೆಳೆಸುವುದರ ಹೆಸರೂ ಹೌದು. ಇಸ್ಲಾಮಿನ ಬೋಧನೆಗಳನ್ನು ಬಹಳ ಸರಳವಾಗಿ ಎರಡು ಭಾಗಗಳಲ್ಲಿ ವಿಂಗಡಿಸಬಹುದು. 1. ಇಸ್ಲಾಮಿನ ಹಕ್ಕುಗಳು 2. ಅಲ್ಲಾಹನ ದಾಸರ ಹಕ್ಕುಗಳು. ಇಸ್ಲಾಮಿನ ದೃಷ್ಟಿಯಲ್ಲಿ ಈ ಎರಡೂ ಭಾಗಗಳಿಗೆ ಸಮಾನ ಮಹತ್ವವಿದೆ. ಪವಿತ್ರ ಕುರ್‌ಆನಿನಲ್ಲಿ ಇಸ್ಲಾಮಿನ ಮೂಲಭೂತ ಲಕ್ಷಣಗಳನ್ನು ಮುಂದಿಟ್ಟಿರುವ ಕಡೆಗಳಲ್ಲೆಲ್ಲಾ ಅಲ್ಲಾಹನ ಹಕ್ಕುಗಳನ್ನು ಪ್ರಸ್ತಾಪಿಸಿದ ಬೆನ್ನಿಗೇ ಅವನ ದಾಸರ ಹಕ್ಕುಗಳನ್ನು ಪ್ರಸ್ತಾಪಿಸಲಾಗಿದೆ.

**"ನೀವೆಲ್ಲರೂ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ ಆಪ್ತರಾದ ನೆರೆಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರರೊಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ. ದುರಹಂಕಾರ ಹೊಂದಿರುವ ಗರ್ವಿಷ್ಠನನ್ನೂ ಆತ್ಮಸ್ತುತಿಗೈಯುವವನನ್ನೂ ಅಲ್ಲಾಹನು ಮೆಚ್ಚುವುದಿಲ್ಲ." (4:36)**

ನೋಡಿ, ಇಲ್ಲಿ ಅಲ್ಲಾಹನು ತನ್ನೊಬ್ಬನ ದಾಸ್ಯ-ಆರಾಧನೆಯನ್ನು ಮಾತ್ರ ಮಾಡಬೇಕೆಂದು ಆದೇಶಿಸಿದ ಬೆನ್ನಿಗೇ ತನ್ನ ದಾಸರ ಜೊತೆ ಸೌಜನ್ಯದಿಂದ, ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಆಜ್ಞಾಪಿಸಿರುವನು. ಅಷ್ಟೇ ಅಲ್ಲ, ಬಹಳ ವಿವರವಾಗಿ,

ನಮ್ಮ ಸದ್ವರ್ತನೆಗೆ ಅರ್ಹರಾದವರ ಪಟ್ಟಿಯನ್ನೂ ಕೊಟ್ಟಿರುವನು. ಈ ಪಟ್ಟಿಯಲ್ಲಿ ಹೆತ್ತವರು, ಸಂಬಂಧಿಕರು, ನೆರೆಯವರು, ಆಪ್ತರು, ಬಡವರು, ಅನಾಥರು ಪ್ರಯಾಣಿಕರು, ಗುಲಾಮರು ಎಲ್ಲರೂ ಸೇರಿರುವರು. ಹೀಗೆ ಎರಡು ವಸ್ತುಗಳ ಧರ್ಮದ ಮೂಲಭೂತ ಅಂಶಗಳೆಂಬುದು ಸ್ಪಷ್ಟವಾಯಿತು. ಅವೆಂದರೆ ಅಲ್ಲಾಹನ ದಾಸ್ಯ-ಆರಾಧನೆ ಮತ್ತು ಅವನ ದಾಸರ ಜೊತೆ ಸೌಜನ್ಯಶೀಲ ವರ್ತನೆ. ಪವಿತ್ರ ಕುರ್‌ಆನಿನಲ್ಲಿ ಇನ್ನೊಂದೆಡೆ, ಧರ್ಮದ ಪ್ರಧಾನ ಆಧಾರ ಸ್ತಂಭಗಳನ್ನು ಪ್ರಸ್ತಾಪಿಸುತ್ತಾ ಸತ್ಯವಿಶ್ವಾಸದ ಬೆನ್ನಿಗೇ ಸಹಜೀವಿಗಳ ಸೇವೆಯ ಆದೇಶ ಕೊಡಲಾಗಿದೆ.

**"ನೀವು ನಿಮ್ಮ ಮುಖಗಳನ್ನು ಪೂರ್ವದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿ ಕೊಳ್ಳುವುದು ಧರ್ಮಶೀಲತೆಯಲ್ಲ. ನಿಜವಾಗಿ ಒಬ್ಬನು ಅಲ್ಲಾಹನನ್ನೂ ನಿರ್ಣಾಯಕ ದಿನವನ್ನೂ ದೇವಚರರನ್ನೂ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವನ ಸಂದೇಶವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯವಿಮೋಚನೆಗಾಗಿಯೂ ವ್ಯಯಿಸುವುದೂ ನಮಾಝನ್ನು ಸಂಸ್ಥಾಪಿಸುವುದೂ ಝಕಾತನ್ನು (ಕಡ್ಡಾಯ ದಾನವನ್ನು) ನೀಡುವುದೂ ವಾಗ್ದಾನ ಮಾಡಿದರೆ ಪೂರೈಸುವುದೂ ಕಷ್ಟ ಕಾರ್ಪಣ್ಯಗಳಲ್ಲಿಯೂ ಸತ್ಯಾಸತ್ಯಗಳ ಸಮರವಾಗುತ್ತಿರುವಾಗಲೂ ಸಹನೆಯಿಂದಿರುವುದೂ ಧರ್ಮಶೀಲತೆಯಾಗಿರುತ್ತದೆ. ಇವರೇ ಸತ್ಯಸಂಧರು ಮತ್ತು ಇವರೇ ಧರ್ಮನಿಷ್ಠರು." (2:177**

ಇಲ್ಲಿ ನಮಾಝ್ ಮತ್ತು ಇತರೆಲ್ಲ ಸತ್ಕರ್ಮಗಳಿಗಿಂತ ಮುಂಚೆ ಅಲ್ಲಾಹನ ದಾಸರಿಗೆ ಸಂಬಂಧಿಸಿದ ಬಾಧ್ಯತೆಗಳನ್ನು ಮತ್ತು ಅವರ ಸೇವೆಯ ಅಗತ್ಯವನ್ನು ತಿಳಿಸ ಲಾಗಿದೆ. ಇದರಿಂದ, ಜನಸೇವೆಗೆ ಇರುವ ಅಸಾಮಾನ್ಯ ಪ್ರಾಮುಖ್ಯತೆ ಸ್ಪಷ್ಟವಾಗುತ್ತದೆ

ಪವಿತ್ರ ಕುರ್‌ಆನಿನಲ್ಲಿ ಇನ್ನೊಂದು ಕಡೆ ಸತ್ಯವಿಶ್ವಾಸವನ್ನು ಪ್ರಸ್ತಾವಿಸುವುದಕ್ಕೂ ಮುಂಚೆಯೇ ಜನಸೇವೆ ಮತ್ತು ಜನರೊಂದಿಗೆ ಸದ್ವರ್ತನೆಯ ಅಗತ್ಯದ ಬಗ್ಗೆ ಹೇಳಲಾಗಿದೆ.

**"ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ. ಆ ದುರ್ಗಮ ಏರು ಏನೆಂದು ನಿಮಗೇನು ಗೊತ್ತು? ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿಂದ ವಿಮೋಚಿಸುವುದು- ಅಥವಾ ಹಸಿವಿನ ದಿನ, ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೆಟ್ಟ ದರಿದ್ರನಿಗೆ ಉಣಬಡಿಸುವುದು. ತರುವಾಯ, ಸತ್ಯವಿಶ್ವಾಸವಿರಿಸಿದ ಹಾಗೂ ಪರಸ್ಪರರಿಗೆ ಸಹನೆ ಮತ್ತು (ಸೃಷ್ಟಿಗಳ ಮೇಲೆ) ಕರುಣೆಯನ್ನು ಬೋಧಿಸಿದ ಜನ ಸಾಲಿಗೆ ಸೇರುವುದು. ಇವರೇ ಬಲಗಡೆಯವರು." (ಪವಿತ್ರ ಕುರ್‌ಆನ್, 90:11-18**

ಈ ವಾಕ್ಯಗಳಿಂದ ಸ್ಪಷ್ಟವಾಗುವಂತೆ, ಜನಸೇವೆಯು ಅತ್ಯುನ್ನತ ಪುಣ್ಯ ಕಾರ್ಯವಾಗಿದೆ. ಇದು ಇತರ ಅನೇಕ ಸತ್ಕರ್ಮಗಳ ಪ್ರೇರಕವೂ ಆಗಿದೆ. ಪ್ರಸ್ತುತ ಸದ್ಗುಣ ಇರುವವರು ಸ್ವಾಭಾವಿಕವಾಗಿ ಸತ್ಯವಿಶ್ವಾಸ, ಸಹನೆ ಮತ್ತು ಕರುಣೆಯಂತಹ ಇತರ ಅಮೂಲ್ಯ

ದ್ಗುಣಗಳನ್ನೂ ಪಡೆಯುತ್ತಾರೆ. ಸಹಜೀವಿಗಳ ಹಿತಕ್ಕಾಗಿ ಸದಾ ಮಿಡಿಯುತ್ತಿರುವ ಸೌಮ್ಯವಾದ ಹೃದಯವು ಅಲ್ಲಾಹನ ಮುಂದೆ ಬಾಗುವುದಕ್ಕೂ ಸತ್ಯವನ್ನು ಸ್ವಾಗತಿಸುವುದಕ್ಕೂ ಸದಾ ನ್ನದ್ಧವಾಗಿರುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಕಠಿಣ ಹೃದಯವುಳ್ಳ ಮತ್ತು ಸಂಕಷ್ಟಗಳಲ್ಲೂ ಪತ್ತುಗಳಲ್ಲೂ ಸಿಲುಕಿರುವ ಇತರ ಸಹಜೀವಿಗಳಿಗಾಗಿ ಮರುಗದ ಮನುಷ್ಯನು ನಿಜವಾಗಿ ನುಷ್ಯನಲ್ಲ, ಅವನು ಪಶು. ಅವನ ಎದೆಯಲ್ಲಿರುವುದು ಹೃದಯವಲ್ಲ ಅದು ಕಲ್ಲಾಗಿದೆ. ಂಥ ಕಲ್ಲು ಹೃದಯದಲ್ಲಿ ಸತ್ಯವಿಶ್ವಾಸ ಒಳಗೊಂಡಿರಲು ಸಾಧ್ಯವೇ ಇಲ್ಲ. ಅವನು ೋಕದ ಆರಾಧಕ. ಲೋಕವನ್ನಾರಾಧಿಸುವವನು ದೇವಾರಾಧಕನಾಗಲು ಸಾಧ್ಯವಿಲ್ಲ.

ಮೇಲಿನ ವಾಕ್ಯಗಳಿಂದ ತಿಳಿಯುವುದೇನೆಂದರೆ, ದೇವ ಮತ್ತು ಮಾನವನಿಗೆ ಂಬಂಧಿಸಿದ ಹಕ್ಕು ಬಾಧ್ಯತೆಗಳನ್ನು ಪೂರ್ತಿಗೊಳಿಸುವವರೇ ಪರಲೋಕದಲ್ಲಿ ಅಲ್ಲಾಹನ ಸಾಮೀಪ್ಯ ಪಡೆಯುವರು. ಅವರು ಅಲ್ಲಾಹನ ಕೃತಜ್ಞ ದಾಸರು. ಅವರು ಅಲ್ಲಾಹನು ತಮಗೆ ದಯಪಾಲಿಸಿದ ಅನುಗ್ರಹಗಳಲ್ಲಿ ಅಲ್ಲಾಹನಿಗೂ ಅವನ ದಾಸರಿಗೂ ಇರುವ ಹಕ್ಕನ್ನು ಗುರುತಿಸುವ ಮತ್ತು ಅಲ್ಲಾಹನ ಮೆಚ್ಚುಗೆಗಾಗಿ ಅವನು ೊಟ್ಟ ಸಂಪತ್ತನ್ನು ಅವನ ದಾಸರ ಹಿತಕ್ಕಾಗಿ ಉದಾರವಾಗಿ ಖರ್ಚು ಮಾಡುವ ನನರು. ಅವರು ನರಕ ಯಾತನೆಯಿಂದ ರಕ್ಷಿಸಲ್ಪಡುವವರು. ಅವರ ಸೃಷ್ಟಿಕರ್ತ ಮತ್ತು ಒಡೆಯನು ಅವರ ಬಗ್ಗೆ ಸದಾ ಸಂತೃಪ್ತ ಹಾಗೂ ಸಂತುಷ್ಟನಾಗಿರುವನು.

"ಅತ್ಯಂತ ಧರ್ಮನಿಷ್ಠನು ಅದರಿಂದ ದೂರವಿರಿಸಲ್ಪಡುವನು- ಪುನೀತನಾಗಲಿಕ್ಕಾಗಿ ತನ್ನ ಸಂಪತ್ತನ್ನು ದಾನ ಮಾಡುವವನು. ಅವನು ಪ್ರತಿಫಲ ಕೊಡಬೇಕಾದಂತಹ ಯಾರ, ಯಾವ ಉಪಕಾರ ಭಾರವೂ ಅವನ ಮೇಲಿಲ್ಲ- ಅವನಂತು ಕೇವಲ ತನ್ನ ಸರ್ವೋನ್ನತ ಪ್ರಭುವಿನ ಪ್ರಸನ್ನತೆಗಾಗಿ ಈ ಕಾರ್ಯವನ್ನು ಮಾಡುತ್ತಾನೆ. ಮತ್ತು ಅವನು ಖಂಡಿತ ವಾಗಿಯೂ (ಇವನಿಂದ) ಪ್ರಸನ್ನನಾಗುವನು." (ಪವಿತ್ರ ಕುರ್‌ಆನ್, 92:17-21)

ಇದು ಅಲ್ಲಾಹನ ನಿಕಟ ದಾಸರ ಚಾರಿತ್ರ್ಯವಾಯಿತು. ಅತ್ತ ಅಲ್ಲಾಹನ ಕೋಪ-ಶಾಪಗಳಿಗೊಳಗಾದವರ ಮತ್ತು ನಾಳೆ ಪರಲೋಕದಲ್ಲಿ ಘೋರ ಯಾತನೆ ಅನುಭವಿಸಲಿರುವವರ ಚಾರಿತ್ರ್ಯವು ಇದಕ್ಕೆ ತದ್ವಿರುದ್ಧವಾಗಿದೆ. ಅವರ ಚಾರಿತ್ರ್ಯದಲ್ಲಿ ಎರಡು ಪ್ರಧಾನ ಲಕ್ಷಣಗಳಿರುತ್ತವೆ. ಮೊದಲನೆಯದಾಗಿ ಅವರಿಗೆ ಅಲ್ಲಾಹನ ಮೇಲೆ ವಿಶ್ವಾಸವಿರು ವುದಿಲ್ಲ. ಎರಡನೆಯದಾಗಿ ಅವರಿಗೆ ಅಲ್ಲಾಹನ ದಾಸರ ಮೇಲೆ ಅನುಕಂಪವಿರುವುದಿಲ್ಲ. ಅವರ ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ.

"(ಆಗ ಹೀಗೆ ಅಪ್ಪಣೆಯಾಗುವುದು) ಇವನನ್ನು ಹಿಡಿಯಿರಿ ಮತ್ತು ಇವನಿಗೆ ಕಂಠ ಕಡಗವನ್ನು ಹಾಕಿರಿ. ಅನಂತರ ಇವನನ್ನು ನರಕದೊಳಕ್ಕೆ ತಳ್ಳಿ ಬಿಡಿರಿ, ಆ ಬಳಿಕ ಇವನನ್ನು ಎಪ್ಪತ್ತು ಮೊಳ ಉದ್ದದ ಸಂಕೋಲೆಯಿಂದ ಬಿಗಿಯಿರಿ. ಇವನು ಮಹಿಮಾವಂತನಾದ ಅಲ್ಲಾಹನ ಮೇಲೆ ವಿಶ್ವಾಸವಿರಿಸುತ್ತಿರಲಿಲ್ಲ- ಮತ್ತು ದರಿದ್ರರಿಗೆ ಊಟ ಕೊಡಲು ಪ್ರೇರೇಪಿಸುತ್ತಲೂ ಇರಲಿಲ್ಲ." (69:30-34)

ಪವಿತ್ರ ಕುರ್‌ಆನಿನ ಪ್ರಕಾರ ಪರಲೋಕದಲ್ಲಿ ನರಕಕ್ಕೆ ಎಸೆಯಲ್ಪಟ್ಟವರೊಡನೆ ನಿಮ್ಮನ್ನು ಯಾಕೆ ಇಲ್ಲಿಗೆ ತರಲಾಯಿತೆಂದು ಪ್ರಶ್ನಿಸಿದಾಗ ಅವರು ಹೀಗೆ ಹೇಳುವರು:

**"ಅವರು ಹೇಳುವರು; ನಾವು ನಮಾಝ್ ಮಾಡುವವರಾಗಿರಲಿಲ್ಲ- ಮತ್ತು ದರಿದ್ರರಿಗೆ ಉಣಿಸುತ್ತಿರಲಿಲ್ಲ- ಮತ್ತು ಸತ್ಯದ ವಿರುದ್ಧ ಮಾತುಗಳನ್ನು ಸೃಷ್ಟಿಸುವವರ ಜೊತೆ ಸೇರಿ ನಾವೂ ಮಾತುಗಳನ್ನು ಸೃಷ್ಟಿಸುತ್ತಿದ್ದೆವು- ಮತ್ತು ನಾವು ಪ್ರತಿಫಲದ ದಿನವನ್ನು ಸುಳ್ಳೆಂದು ಹೇಳುತ್ತಿದ್ದೆವು-" (74:43-46**

ಸಹಜೀವಿ ಮನುಷ್ಯರ ಹಕ್ಕುಗಳನ್ನು ಗುರುತಿಸಿ ಗೌರವಿಸುವುದು ಧರ್ಮದ ಅತ್ಯಂತ ಮೂಲಭೂತ ಬೋಧನೆಗಳಲ್ಲೊಂದು. ದೇವಭಯವಾಗಲಿ, ಪರಲೋಕದಲ್ಲಿ ವಿಚಾರಣೆ ಎದುರಿಸಬೇಕಾದೀತೆಂಬ ಪ್ರಜ್ಞೆಯಾಗಲಿ ಇಲ್ಲದವರು ಮಾತ್ರ ಈ ಕರ್ತವ್ಯವನ್ನು ನಿರ್ಲಕ್ಷಿಸಬಲ್ಲರು.

**"ನೀವು ಕಂಡಿರಾ ಪರಲೋಕದ ಕರ್ಮಫಲಗಳನ್ನು ನಿರಾಕರಿಸುವವನನ್ನು? ಅವನೇ ತಾನೆ, ಅನಾಥನನ್ನು ದೂರ ದಬ್ಬುವವನು- ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನು!" (ಪವಿತ್ರ ಕುರ್‌ಆನ್, 107:1-3**

ಬೇರೊಂದು ಕೋನದಿಂದ ನೋಡಿದರೂ ಸಹಜೀವಿಗಳ ಹಕ್ಕುಗಳನ್ನು ಗೌರವಿಸುವುದಕ್ಕೆ ವಿಶೇಷ ಮಹತ್ವವಿರುವುದನ್ನು ನಾವು ಕಾಣಬಹುದು. ಅದೇನೆಂದರೆ ಅಲ್ಲಾಹನು ಶಿರ್ಕ್ ಅಥವಾ ಬಹುದೇವಾರಾಧನೆಯನ್ನು ಅತಿ ಘೋರ ಪಾಪವೆಂದು ಸಾರಿದ್ದು, ಅದನ್ನು ಕ್ಷಮೆ ಇಲ್ಲದ ಕೃತ್ಯವೆಂದು ಖಂಡಿಸಿರುವನು. ಶಿರ್ಕ್ ಒಂದನ್ನು ಬಿಟ್ಟರೆ ಅಲ್ಲಾಹನಿಗೆ ಮಾಡಲಾಗುವ ಇತರ ಹಕ್ಕುಚ್ಯುತಿಗಳನ್ನು ಅವನು ಕ್ಷಮಿಸಬಹುದು. ಉದಾ:

**"ಅಲ್ಲಾಹನು ತನ್ನೊಂದಿಗೆ ಇತರರನ್ನು ಭಾಗೀದಾರರನ್ನಾಗಿ ಮಾಡುವುದನ್ನು ಮಾತ್ರ ಎಂದೆಂದಿಗೂ ಕ್ಷಮಿಸುವುದಿಲ್ಲ. ಅದರ ಹೊರತು ಅವನು ಕ್ಷಮಿಸಲಿಚ್ಛಿಸುವ ಇತರ ಎಲ್ಲವನ್ನೂ ಕ್ಷಮಿಸುವನು. ಅಲ್ಲಾಹನೊಂದಿಗೆ ಯಾರನ್ನಾದರೂ ಭಾಗೀದಾರರನ್ನಾಗಿ ಮಾಡಿದವನು ಪಥಭ್ರಷ್ಟತೆಯಲ್ಲಿ ಬಹುದೂರ ಸಾಗಿಬಿಟ್ಟನು."**

**(ಪವಿತ್ರ ಕುರ್‌ಆನ್, 4:116**

ಆದರೆ ಇಷ್ಟಾಗಿಯೂ ಅಲ್ಲಾಹನು, ಜನರು ತಮ್ಮ ಸಹಜೀವಿಗಳಿಗೆ ಮಾಡುವ ಹಕ್ಕುಚ್ಯುತಿಗಳನ್ನು -ಸ್ವತಃ ಅದಕ್ಕೆ ತುತ್ತಾದ ಜನರೇ ಕ್ಷಮಿಸುವ ತನಕ ಅಥವಾ ಹಕ್ಕುಗಳನ್ನು ಮರಳಿ ಅವರಿಗೆ ಕೊಟ್ಟು ಬಿಡುವ ತನಕ ತಾನು ಕ್ಷಮಿಸುವುದಿಲ್ಲ. ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು.

"(ಮನುಷ್ಯನ) ಕರ್ಮ ಫಲಕದಲ್ಲಿರುವ (ಪಾಪ)ಕರ್ಮಗಳು ಮೂರು ಬಗೆಯದ್ದಾಗಿರುವುವು: ಮೊದಲನೆಯದು ಅಲ್ಲಾಹನು ಕ್ಷಮಿಸದೆ ಇರುವ ಕರ್ಮಗಳು- ಅಂದರೆ ಶಿರ್ಕ್(ಬಹುದೇವಾರಾಧನೆ ಅಥವಾ ದೇವಸಹಭಾಗಿತ್ವ). ಏಕೆಂದರೆ ತನ್ನ ಜೊತೆ ಇತರರನ್ನು ಭಾಗೀದಾರರಾಗಿ ಮಾಡುವುದನ್ನು ತಾನು ಕ್ಷಮಿಸುವುದಿಲ್ಲವೆಂದು ಅಲ್ಲಾಹನೇ ಹೇಳಿರುವನು ಎರಡನೆಯದು ಅಲ್ಲಾಹನು ವಿಚಾರಣೆ ಮಾಡದೆ ಬಿಡದಂತಹ (ಖಂಡಿತ ವಿಚಾರಣೆ

ಾಡಲಿರುವ) ಕರ್ಮಗಳು - ಅಂದರೆ ಜನರು ಪರಸ್ಪರರ ಮೇಲೆ ಮಾಡಿರುವ ಅಕ್ರಮಗಳು. ಾವರು (ಪರಲೋಕದಲ್ಲಿ) ಪರಸ್ಪರರಿಂದ ತಮ್ಮ (ವಂಚಿತ ಹಕ್ಕುಗಳ) ಲೆಕ್ಕ ತೀರಿಸಿಕೊಳ್ಳುವ ರೆಗೂ ಅಲ್ಲಾಹನು ಅವುಗಳನ್ನು ಕ್ಷಮಿಸಲಾರನು. ಮೂರನೆಯದು, ಅಲ್ಲಾಹನು ಹೆಚ್ಚೇನೂ ಳಜಿ ವಹಿಸದಂತಹ ಕರ್ಮಗಳು- ಅಂದರೆ ಮಾನವನು ಅಲ್ಲಾಹನಿಗೆ ಮಾಡಿರುವ ಹಕ್ಕುಚ್ಯುತಿಗಳು. ಅವುಗಳ ವಿಷಯ ಅಲ್ಲಾಹನಿಗೇ ಬಿಟ್ಟದ್ದು. ಅವನು ಇಚ್ಛಿಸಿದರೆ ಅವುಗಳಿಗೆ ಕ್ಷೆ ಕೊಡುವನು. ಅವನಿಚ್ಛಿಸಿದರೆ ಅವುಗಳನ್ನು ಕ್ಷಮಿಸಿ ಬಿಡುವನು."

(ಬೈಹಕೀ, ಶುಅಬುಲ್ ಈಮಾನ್)

ಪರಲೋಕದಲ್ಲಿ ಮಾನವನ ಬಳಿ, ತಾನು ಇಹಲೋಕದಲ್ಲಿ ಮಾನವರಿಗೆ ಮಾಡಿರುವ ನ್ಯಾಯ, ಹಕ್ಕುಚ್ಯುತಿ ಇತ್ಯಾದಿಗಳ ಬಗ್ಗೆ, ಸಂಬಂಧಪಟ್ಟವರಿಗೆ ದಂಡ ತೆರಲು ಧನ-ನಕಗಳಾಗಲಿ, ಆಸ್ತಿಪಾಸ್ತಿಗಳಾಗಲಿ ಯಾವುದೂ ಇರಲಾರದು. ಅವನ ಬಳಿ ಅವನು ಂಪಾದಿಸಿದ ಅಲ್ಪ ಪುಣ್ಯ ಮಾತ್ರ ಇರುವುದು. ತಾನು ಜನರಿಗೆ ಮಾಡಿದ ಅನ್ಯಾಯಗಳಿಗೆ ಂಡವಾಗಿ ಈ ಪುಣ್ಯಗಳನ್ನು ಅವನು ಅವರಿಗೆ ಕೊಟ್ಟು ಬಿಡಬೇಕಾದೀತು. ಅಲ್ಲಿ ಅಕ್ರಮಿ ುತ್ತು ಮರ್ದಕನ ಪುಣ್ಯಗಳನ್ನು ಅಕ್ರಮಿತರು ಮತ್ತು ಮರ್ದಿತರಿಗೆ ಕೊಟ್ಟುಬಿಡಲಾಗುವುದು. ನ್ನು ಅವರ ಪುಣ್ಯಗಳೆಲ್ಲಾ ಮುಗಿದು ಬಿಟ್ಟು, ಅನ್ಯಾಯದ ದಂಡವು ಇನ್ನೂ ಪಾವತಿಸಲು ಳಿದಿದ್ದರೆ ಅಕ್ರಮಕ್ಕೆ ತುತ್ತಾದವನ ಪಾಪಗಳನ್ನು ಅಕ್ರಮಿಯ ಖಾತೆಗೆ ಸೇರಿಸಲಾಗುವುದು. ನೆಗೆ ಅಕ್ರಮಿಯನ್ನು ನರಕಕ್ಕೆಸೆದು ಬಿಡಲಾಗುವುದು. ಪ್ರವಾದಿ(ಸ) ಹೇಳಿರುವರು:

"ಯಾರಾದರೂ ತನ್ನ ಸಹೋದರನ ಮೇಲೆ ಅವನ ಮಾನದ ವಿಷಯದಲ್ಲಿ ನ್ಯಾಯವೆಸಗಿದ್ದರೆ ಅಥವಾ ಅವನ ಬೇರೇನಾದರೂ ವಸ್ತು ಇವನ ವಶದಲ್ಲಿದ್ದರೆ, ಇವನು ವನಿಂದ(ಕ್ಷಮೆ ಯಾಚಿಸಿ) ಅದು ತನಗೆ ಹಲಾಲ್ ಆಗುವಂತೆ ಒಪ್ಪಿಗೆ ಪಡೆಯಬೇಕು. ೀನಾರ್‌ಗಳಾಗಲೀ ದಿರ್ಹಮ್‌ಗಳಾಗಲೀ(ಆ ಕಾಲದ ನಾಣ್ಯಗಳು) ಇಲ್ಲದಿರುವ ಮತ್ತು ಕ್ರಮಿಯ ಬಳಿ ಪುಣ್ಯಗಳಿದ್ದರೆ ತನ್ನ ಹಕ್ಕುಚ್ಯುತಿಗೆ ದಂಡವಾಗಿ ಅವನಿಂದ ಅದನ್ನು ಕಿತ್ತು ವನ ಅಕ್ರಮಕ್ಕೆ ತುತ್ತಾದ ವ್ಯಕ್ತಿಗೆ ಕೊಡಲಾಗುವ ಹಾಗೂ ಅವನ ಬಳಿ ಪುಣ್ಯಗಳಿರ ದ್ದಲ್ಲಿ, ಅಕ್ರಮಕ್ಕೊಳಗಾದವನ ಪಾಪಗಳನ್ನು ಕಿತ್ತು ಇವನ ಮೇಲೆ ಹೊರಿಸಲಾಗುವ ಆ ನ ಬರುವುದಕ್ಕೆ ಮುಂಚೆ ಹೀಗೆ ಮಾಡಬೇಕು." (ಬುಖಾರಿ)

ಪ್ರವಾದಿ ಮುಹಮ್ಮದ್‌ರ(ಸ) ಇನ್ನೊಂದು ವಚನದಿಂದ ಅದು ಇನ್ನಷ್ಟು ಪ್ಷವಾಗುತ್ತದೆ: -

"ಹ. ಅಬೂಹುರೈರಾ(ರ) ಉಲ್ಲೇಖಿಸಿರುವಂತೆ ಒಮ್ಮೆ ಪ್ರವಾದಿ(ಸ) "ದರಿದ್ರನು ಾರೆಂದು ನಿಮಗೆ ಗೊತ್ತೇ?" ಎಂದು ಪ್ರಶ್ನಿಸಿದರು. ಸಹಾಬಿಗಳು(ರ), "ಸಂಪತ್ತಾಗಲೀ ರಕುಗಳಾಗಲೀ ಇಲ್ಲದವನು" ಎಂದು ಉತ್ತರಿಸಿದರು. ಆಗ ಪ್ರವಾದಿ(ಸ) ಹೇಳಿದರು: ನನ್ನ ಸಮುದಾಯದ ದರಿದ್ರ ವ್ಯಕ್ತಿ ಯಾರೆಂದರೆ, ಅವನು ಪುನರುತ್ಥಾನ ದಿನದಂದು ನಮಾಝ್, ಉಪವಾಸ ಮತ್ತು ಝಕಾತ್‌ನಂತಹ ಸತ್ಕರ್ಮಗಳೊಂದಿಗೆ ಬರುವನು. ದರೆ ಅವನು (ಇಹದಲ್ಲಿ) ಯಾರಿಗಾದರೂ ಬಯ್ದಿರುವನು, ಯಾರ ಮೇಲಾದರೂ ುಳ್ಳಾರೋಪ ಹೊರಿಸಿರುವನು, ಯಾರದಾದರೂ ಸೊತ್ತನ್ನು ಕಬಳಿಸಿರುವನು,

ಯಾರದಾದರೂ ರಕ್ತ ಹರಿಸಿರುವನು, ಯಾರನ್ನಾದರೂ ಥಳಿಸಿರುವನು, ಆ ಬಳಿಕ ಅವನ ಸತ್ಕರ್ಮಗಳನ್ನೆಲ್ಲಾ ಆ (ಅವನಿಂದ ಹಾನಿ ಅನುಭವಿಸಿದ್ದ) ಜನರಿಗೆ ಹಂಚಿ ಬಿಡಲಾಗುವುದು. ಅವರ ಬೇಡಿಕೆಗಳು ಈಡೇರುವ ಮುನ್ನವೇ ಸತ್ಕರ್ಮಗಳೆಲ್ಲ ಮುಗಿದು ಬಿಡುವವು. ಆ ಬಳಿಕ ಅವರ ಪಾಪಗಳನ್ನು ಅವನ ಮೇಲೆ ಹೊರಿಸಲಾಗುವುದು. ತರುವಾಯ ಅವನನ್ನು ನರಕಕ್ಕೆ ತಳ್ಳಿ ಬಿಡಲಾಗುವುದು." (ಮುಸ್ಲಿಮ್)

ಈ ಪ್ರವಾದಿ ವಚನಗಳು ಎಷ್ಟು ರೋಮಾಂಚಕ! ಎಷ್ಟು ಭಯಾನಕ. ಸಹಜೀವಿಗಳ ಹಕ್ಕುಗಳನ್ನು ಗೌರವಿಸಬೇಕಾದುದು ಎಷ್ಟು ಅವಶ್ಯಕ ಮತ್ತು ಅವುಗಳ ಹರಣ ಎಂತಹ ಗಂಭೀರ ಹಾಗೂ ಘೋರ ಅಪರಾಧ ಎಂಬುದು ಇವುಗಳಿಂದ ಸ್ಪಷ್ಟವಾಗುತ್ತದೆ.

## ನ್ಯಾಯಪಾಲನೆ

ಸಹಜೀವಿಗಳ ಜೊತೆ ಸದ್ವರ್ತನೆ ತೋರಬೇಕೆಂಬ ಕುರಿತು ಪವಿತ್ರ ಕುರ್‌ಆನಿನ ಈ ಕೆಳಗಿನ ಆದೇಶವು ಸಂಕ್ಷಿಪ್ತವಾಗಿದ್ದರೂ ಬಹಳ ಸಮಗ್ರವಾಗಿದೆ:

**"ಪರಲೋಕದ ಮೇಲೆ ವಿಶ್ವಾಸವಿರಿಸದವರೇ ದುರ್ಗುಣ ವಿಶೇಷಣಗಳಿಗೆ ಅರ್ಹರು. ಅಲ್ಲಾಹನಿಗೆ ಅತ್ಯುತ್ತಮ ಗುಣ ವಿಶೇಷಗಳಿವೆ. ಅವನೇ ಮಹಾ ಪ್ರತಾಪಿಯೂ ಮಹಾ ಧೀಮಂತನೂ ಆಗಿರುತ್ತಾನೆ." (16:60)**

ಒಬ್ಬ ಮನುಷ್ಯನು ಮುಸ್ಲಿಮನಿರಲಿ, ಕಾಫಿರನಿರಲಿ, ಮಿತ್ರನಿರಲಿ, ಶತ್ರುವಿರಲಿ ನ್ಯಾಯವನ್ನು ಪಡೆಯುವ ಹಕ್ಕು ಅವನಿಗಿರುತ್ತದೆ. ಒಬ್ಬ ವ್ಯಕ್ತಿ ಅಥವಾ ಒಂದು ಗುಂಪಿನೊಂದಿಗೆ ನಮಗೆ ಶತ್ರುತ್ವವಿದ್ದರೂ, ಅವರ ಮೇಲೆ ಅನ್ಯಾಯ ಮಾಡುವ ಹಕ್ಕು ನಮಗಿಲ್ಲ.

**"ಓ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆನಿಲ್ಲುವವರೂ ನ್ಯಾಯದ ಸಾಕ್ಷ್ಯವಹಿಸುವವರೂ ಆಗಿರಿ. ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವ ಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ. ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ. ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಅರಿಯುವವನಾಗಿದ್ದಾನೆ."**

**(ಪವಿತ್ರ ಕುರ್‌ಆನ್, 5:8)**

ಪ್ರತಿಯೊಬ್ಬ ಮನುಷ್ಯರ ಜೀವನವು ಗೌರವಾನ್ವಿತ. ಆದ್ದರಿಂದ ಅನ್ಯಾಯವಾಗಿ ಯಾವ ಜೀವವನ್ನೂ ಹರಣಗೊಳಿಸುವಂತಿಲ್ಲ. ಅನ್ಯಾಯವಾಗಿ ಯಾರದೇ ರಕ್ತ ಹರಿಸುವಂತಿಲ್ಲ. ಪ್ರತಿಯೊಬ್ಬ ವ್ಯಕ್ತಿಗೆ ಸೇರಿದ ಸೊತ್ತು-ಸಂಪತ್ತುಗಳು ಕೂಡಾ ಗೌರವಾನ್ವಿತ. ಅವುಗಳನ್ನು ಅವನಿಂದ ಕಿತ್ತುಕೊಳ್ಳುವ ಹಾಗಿಲ್ಲ. ಪ್ರತಿಯೊಬ್ಬ ಮನುಷ್ಯನ ಆತ್ಮ ಗೌರವವೂ ಗೌರವಾರ್ಹ. ಅದನ್ನು ಘಾಸಿಗೊಳಿಸುವಂತಿಲ್ಲ. ಪ್ರತಿಯೊಬ್ಬ ಮಾನವನಿಗೂ ತನ್ನ ನಂಬಿಕೆಗಳ ಪ್ರಕಾರ ಆರಾಧನೆ ನಡೆಸುವ ಹಕ್ಕು ಇದೆ. ತನ್ನ ನಂಬಿಕೆ ಹಾಗೂ ಧರ್ಮವನ್ನು ಬದಲಿಸುವಂತೆ ಯಾರನ್ನೂ ಬಲಾತ್ಕರಿಸುವ ಹಾಗಿಲ್ಲ. ಯಾರದೇ ಧಾರ್ಮಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ

ತೆಸುವ ಹಾಗಿಲ್ಲ. ಯಾರದೇ ಆರಾಧನಾಲಯಗಳನ್ನು ಅಪವಿತ್ರಗೊಳಿಸುವಂತಿಲ್ಲ. ಯಾವುದೇ ರ್ಗದವರ ಧಾರ್ಮಿಕ ನಾಯಕರ ಅವಹೇಳನ ಮಾಡುವಂತಿಲ್ಲ. ಯಾವುದೇ ಪಂಗಡದವರ ಕ್ತಿ ನಿಯಮಗಳನ್ನು ರದ್ದುಗೊಳಿಸುವಂತಿಲ್ಲ. ಗೌರವಯುತವಾಗಿ ಬಾಳುವುದು ಪ್ರತಿಯೊಬ್ಬ ಾನವನ ಹಕ್ಕು. ಯಾರನ್ನೂ ಈ ಹಕ್ಕಿನಿಂದ ವಂಚಿಸುವಂತಿಲ್ಲ. ಧರ್ಮಸಮ್ಮತ ಮಾರ್ಗ ಿಂದ ಸಂಪಾದನೆ ಮಾಡುವುದೂ ಪ್ರತಿಯೊಬ್ಬನ ಹಕ್ಕು. ಈ ಹಕ್ಕನ್ನು ಯಾರಿಂದಲೂ ಸ್ತುಕೊಳ್ಳುವ ಹಾಗಿಲ್ಲ. ಜ್ಞಾನ ಗಳಿಸುವ ಹಾಗೂ ತನ್ನ ಧರ್ಮ ಸಂಪ್ರದಾಯ ಪ್ರಕಾರ ನ್ನ ಮಕ್ಕಳಿಗೆ ಶಿಕ್ಷಣ ತರಬೇತಿ ಕೊಡುವ ಹಕ್ಕು ಪ್ರತಿಯೊಬ್ಬನಿಗೂ ಇದೆ. ಈ ಹಕ್ಕನ್ನು ಾರ ಪಾಲಿಗೂ ನಿರಾಕರಿಸುವ ಹಾಗಿಲ್ಲ. ಎಲ್ಲ ಸ್ಥಿತಿಗಳಲ್ಲೂ ಮಹಿಳೆಯ ಮಾನ ರವಾರ್ಹ ಯಾವ ಸ್ಥಿತಿಯಲ್ಲೂ ಅವಳ ಶೀಲಕ್ಕೆ ಹಾನಿ ಮಾಡುವಂತಿಲ್ಲ. ಕಾನೂನಿನ ಕ್ಷಣೆ ಎಲ್ಲರಿಗೂ ಸಮಾನವಾಗಿ ಸಿಗಬೇಕು. ಈ ವಿಷಯದಲ್ಲಿ ಯಾವುದೇ ತಾರತಮ್ಯಕ್ಕೆ ವಕಾಶವಿಲ್ಲ. ಇವು ಮತ್ತು ಇಂತಹ ಎಲ್ಲ ಮಾನವೀಯ ಹಕ್ಕುಗಳು ಬಡವ-ಬಲ್ಲಿದ, ರಿಯ-ಬಿಳಿಯ, ಮುಸ್ಲಿಮ್-ಕಾಫಿರ್, ಮಿತ್ರ-ಶತ್ರು ಎಲ್ಲರಿಗೂ ಸಮಾನವಾಗಿ ಅನ್ವಯಿಸುತ್ತವೆ.

ಈ ರೀತಿ, ನಿಷ್ಪಕ್ಷವಾಗಿ ನ್ಯಾಯಪಾಲನೆ ಮಾಡಬೇಕೆಂಬುದು ಇಸ್ಲಾಮಿನ ಒಂದು ಮೂಲಭೂತ ಬೋಧನೆಯಾಗಿರುವುದು ಮಾತ್ರವಲ್ಲದೆ, ನ್ಯಾಯದ ಸಂರಕ್ಷಣೆ ಮತ್ತು ್ಯಾಯದ ಸ್ಥಾಪನೆ ಮುಸ್ಲಿಮರ ಜೀವನೋದ್ದೇಶವೂ ಆಗಿದೆ:

"ಓ ಸತ್ಯವಿಶ್ವಾಸಿಗಳೇ, ನೀವು ನ್ಯಾಯದ ಧ್ವಜವಾಹಕರೂ ಅಲ್ಲಾಹನಿಗಾಗಿ ಾಕ್ಷ್ಯವಹಿಸುವವರೂ ಆಗಿರಿ. ನಿಮ್ಮ ನ್ಯಾಯ ಮತ್ತು ಸಾಕ್ಷ್ಯವು ಸ್ವತಃ ನಿಮ್ಮ ಅಥವಾ ಮ್ಮ ಮಾತಾಪಿತರ ಮತ್ತು ನಿಮ್ಮ ಸಂಬಂಧಿಕರ ವಿರುದ್ಧವಾಗಿದ್ದರೂ ಸರಿಯೇ. ಕ್ಷಿಯು ಧನಿಕನಿರಲಿ ಅಥವಾ ಬಡವನಿರಲಿ ನಿಮಗಿಂತ ಹೆಚ್ಚಾಗಿ ಅಲ್ಲಾಹನು ಅವರ ಹಿತ ಿಂತಕನಾಗಿರುತ್ತಾನೆ. ಆದುದರಿಂದ ನಿಮ್ಮ ಚಿತ್ತಾಸಕ್ತಿಯ ಅನುಸರಣೆಯಲ್ಲಿ ನ್ಯಾಯ ರಿಪಾಲನೆಯಿಂದ ಸರಿಯಬೇಡಿರಿ." (ಪವಿತ್ರ ಕುರ್‌ಆನ್, 4:135)

ಅನ್ಯಾಯ ಮಾಡುವ ವ್ಯಕ್ತಿ ತಾತ್ಕಾಲಿಕವಾಗಿ ತನ್ನ ಅಪರಾಧದ ಶಿಕ್ಷೆಯಿಂದ ತಪ್ಪಿಸಿ ೊಂಡರೂ ಅಂತಿಮವಾಗಿ ಅವನು ಅದರ ಘೋರ ಶಿಕ್ಷೆಯನ್ನು ಎದುರಿಸಲೇ ಬೇಕಾಗುತ್ತದೆ.

ಹಝ್ರತ್ ಅಬೂ ಮೂಸಾ(ರ) ಉಲ್ಲೇಖಿಸಿರುವಂತೆ, ಪ್ರವಾದಿ ಮುಹಮ್ಮದ್(ಸ) ೇಳಿದರು, "ಅಲ್ಲಾಹನು ಅನ್ಯಾಯ ಮಾಡುವವನಿಗೆ ಕಾಲಾವಕಾಶ ಕೊಡುತ್ತಾನೆ. ಆದರೆ ಮ್ಮೆ ಅವನು ಆತನನ್ನು ಹಿಡಿದರೆ ಮತ್ತೆಂದೂ ಬಿಡುವುದಿಲ್ಲ." "ತರುವಾಯ ಪ್ರವಾದಿ(ಸ) ವರು, "ಈ ರೀತಿ ಇದೆ ನಿಮ್ಮ ಪ್ರಭುವಿನ ಹಿಡಿತ. ಅವನು ಅಕ್ರಮಿ ಜನಾಂಗವನ್ನು ಡಿದುಬಿಟ್ಟಾಗ ಅವನ ಹಿಡಿತವು ಅತ್ಯಂತ ತೀವ್ರ ಹಾಗೂ ಯಾತನಾಜನಕವಾಗಿರುತ್ತದೆ" ಂಬ ಪವಿತ್ರ ಕುರ್‌ಆನಿನ ವಾಕ್ಯವನ್ನೋದಿದರು. (ಬುಖಾರಿ, ಮುಸ್ಲಿಮ್)

ಅಲ್ಲಾಹನ ಪ್ರಕೋಪಕ್ಕೆ ತುತ್ತಾದ ಅವನ ಅವಿಧೇಯ ದಾಸರು ಪುನರುತ್ಥಾನ ದಿನ ಅವನ ಜ್ಯೋತಿಯಿಂದ ವಂಚಿತರಾಗಿ ಅಂಧಕಾರದಲ್ಲಿ ಅಲೆಯುವರು, ಅಲೆದಾಡುತ್ತಲೇ

ಹೋಗಿ ಧಗಧಗಿಸುವ ನರಕಾಗ್ನಿಗೆ ಬಿದ್ದು ಬಿಡುವರು. ಪರಲೋಕದಲ್ಲಂತೂ ಎಲ್ಲ ಕೆಡುಕುಗಳೂ ಕತ್ತಲೆಯ ರೂಪ ತಾಳುವುವು. ಇನ್ನು ಅನ್ಯಾಯವಂತೂ ಭಾರೀ ಕಾರ್ಗತ್ತಲ ರೂಪ ತಳೆಯುವುದು. ಪ್ರವಾದಿ(ಸ) ಹೀಗೆಂದಿರುವರು:

"ಅನ್ಯಾಯವು ಪುನರುತ್ಥಾನ ದಿನ ಕಾರ್ಗತ್ತಲ ರೂಪ ತಾಳುವುದು."

(ಬುಖಾರಿ, ಮುಸ್ಲಿಮ್)

ನ್ಯಾಯಕ್ಕಿರುವ ಮಹತ್ವ ಇದು. ಅನ್ಯಾಯಕ್ಕಿರುವ ದುರ್ಗತಿ ಇದು.

ಇನ್ನು ನಾವು ಯಾರ ಜೊತೆಗಾದರೂ ನ್ಯಾಯ ಪಾಲಿಸಬೇಕಿದ್ದರೆ, ಅವರೂ ನಮ್ಮ ಜೊತೆ ನ್ಯಾಯಪಾಲಿಸಿರಬೇಕೆಂಬ ನಿಬಂಧನೆಯೇನೂ ಇಲ್ಲ. ಇತರರು ನಮ್ಮ ಜೊತೆ ನ್ಯಾಯ ಮಾಡಲಿ, ಅನ್ಯಾಯವೆಸಗಲಿ, ನಾವಂತೂ ಎಲ್ಲ ಸ್ಥಿತಿಯಲ್ಲೂ ನ್ಯಾಯವನ್ನೇ ಪಾಲಿಸಬೇಕು ಮತ್ತು ಅನ್ಯಾಯಗಳಿಂದ ಸಂಪೂರ್ಣ ದೂರವಿರಬೇಕು. ಈ ಕುರಿತು ಪ್ರವಾದಿ ಮುಹಮ್ಮದ್(ಸ) ಹೀಗೆಂದಿರುವರು:

"ನೀವು ಇತರ ಜನರ ಧೋರಣೆಗಳನ್ನು ಅನುಸರಿಸುವವರಾಗಬೇಡಿರಿ, 'ಜನರು ನಮ್ಮ ಜೊತೆ ಸದ್ವರ್ತನೆ ಮಾಡಿದರೆ ನಾವೂ ಸದ್ವರ್ತನೆ ಮಾಡುತ್ತೇವೆ. 'ಅವರು ಅಕ್ರಮ ಮಾಡಿದರೆ ನಾವೂ ಅಕ್ರಮ ಮಾಡುತ್ತೇವೆ' ಎಂದು ಹೇಳಬೇಡಿರಿ. ಬದಲಾಗಿ, ಜನರು ಸದ್ವರ್ತನೆ ತೋರಿದರೆ ನೀವೂ ಸದ್ವರ್ತನೆಯನ್ನೇ ತೋರಬೇಕು ಮತ್ತು ಅವರು ದುರ್ವರ್ತನೆ ತೋರಿದರೂ ನೀವು ಅನ್ಯಾಯ ಮಾಡಬಾರದು ಎಂಬ ಧೋರಣೆಗೆ ನಿಮ್ಮನ್ನು ಒಗ್ಗಿಸಿಕೊಳ್ಳಿರಿ." (ತಿರ್ಮಿದಿ)

## ಸದ್ವರ್ತನೆ

ಇಸ್ಲಾಮ್ ಧರ್ಮವು ಕೇವಲ, ನ್ಯಾಯಪಾಲನೆ ಮಾಡಬೇಕೆಂದು ಜನರಿಗೆ ಆದೇಶಿಸಿ ಸುಮ್ಮನಾಗುವುದಿಲ್ಲ. ಅದು ಮುಂದುವರಿದು, ಸಹಜೀವಿಗಳ ಜೊತೆ ಉತ್ತಮವಾಗಿ ವರ್ತಿಸಬೇಕು ಎಂದು ಆದೇಶಿಸುತ್ತದೆ. ನಮ್ಮ ಸದ್ವರ್ತನೆಗೆ ಎಲ್ಲ ಮಾನವರೂ ಅರ್ಹರು. ಇದರಲ್ಲಿ ಮುಸ್ಲಿಮರು-ಮುಸ್ಲಿಮೇತರರು ಎಂಬ ಯಾವುದೇ ಭೇದವಿಲ್ಲ. ನಮ್ಮ ಮನಸ್ಸಿನಲ್ಲಿ ಪ್ರತಿಯೊಬ್ಬ ಮನುಷ್ಯನ ಬಗ್ಗೆ ಕರುಣೆ ಮತ್ತು ಅನುಕಂಪದ ಭಾವನೆಗಳಿರಬೇಕು ಎಂಬುದೇ ಇಸ್ಲಾಮಿನ ಅಪೇಕ್ಷೆ.

ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು:

"ಕರುಣೆ ತೋರುವವರ ಮೇಲೆ ಅಲ್ಲಾಹನು ಕರುಣೆ ತೋರುವನು. ನೀವು ಭೂಮಿಯವರ ಮೇಲೆ ಕರುಣೆ ತೋರಿರಿ. ಬಾನಿನವನು(ಅಲ್ಲಾಹನು) ನಿಮ್ಮ ಮೇಲೆ ಕರುಣೆ ತೋರುವನು." (ತಿರ್ಮಿದಿ, ಅಬೂದಾವೂದ್)

ಪ್ರತಿಯೊಬ್ಬ ಮನುಷ್ಯನೂ ಆದಿಪಿತ ಆದಮ್‌ರ(ಅ) ಪುತ್ರನೆಂಬ ನೆಲೆಯಲ್ಲಿ ನಮ್ಮ ಸಹೋದರನು. ಆದ್ದರಿಂದ ಪ್ರತಿಯೊಬ್ಬ ಮಾನವನೊಂದಿಗೂ ನಾವು ಸ್ವಂತ ಸಹೋದರನೆಂಬಂತೆಯೇ ವರ್ತಿಸಬೇಕು. ಅವನ ಬಗ್ಗೆ ನಮಗೆ ಕರುಣೆ ಇರಬೇಕು.

ನಾವು ಮನಃಪೂರ್ವಕವಾಗಿ ಅವನಿಗೆ ಹಿತವನ್ನು ಬಯಸುವವರಾಗಿರಬೇಕು. ಅವನಿಗೆ ಅತ್ಯಂತ ಹಿತಕರ ಸಲಹೆಗಳನ್ನು ಕೊಡಬೇಕು. ಅವನ ಕಷ್ಟ ಕಾಲಗಳಲ್ಲಿ ಅವನಿಗೆ ಸಹಾಯ ಮಾಡಬೇಕು. ಅವನೊಂದಿಗೆ ಸದಾ ಸೌಜನ್ಯದಿಂದ ವರ್ತಿಸಬೇಕು. ಸಾಧ್ಯವಾದಷ್ಟು ಅವನಿಗೆ ಸೇವೆ ಸಲ್ಲಿಸಬೇಕು.

## ದೀನದಲಿತರ ಸೇವೆ

ಒಬ್ಬ ವ್ಯಕ್ತಿ ಎಷ್ಟು ಹೆಚ್ಚು ದೀನ, ದುರ್ಬಲ, ಅಸಹಾಯಕ, ದರಿದ್ರ ಹಾಗೂ ಚಿಂತಿತನಾಗಿರುವನೋ ಅವನು ಅಷ್ಟೇ ಹೆಚ್ಚಿನ ಪ್ರಮಾಣದಲ್ಲಿ ನಮ್ಮ ಹಿತಾಕಾಂಕ್ಷೆ, ಗಮನ, ಅನುಕಂಪ, ಸೇವೆ ಮತ್ತು ಸಹಾಯಕ್ಕೆ ಅರ್ಹನಾಗಿದ್ದಾನೆ. ಅವನನ್ನು ಆ ಸ್ಥಿತಿಯಿಂದ ಪಾರುಗೊಳಿಸಲು ಶ್ರಮಿಸಬೇಕಾದುದು ನಮ್ಮೆಲ್ಲರ ಕರ್ತವ್ಯ.

ಪ್ರವಾದಿ ಮುಹಮ್ಮದ್(ಸ) ಹೇಳಿದ್ದಾರೆ:

"ವಿಧವೆಯರಿಗಾಗಿ, ಬಡವರಿಗಾಗಿ ಓಡಾಟ ನಡೆಸುವವನು ಅಲ್ಲಾಹನಿಗಾಗಿ ಓಡಾಟ ನಡೆಸುವವನಿಗೆ ಸಮಾನವಾಗಿರುವನು."

ಈ ವಚನವನ್ನು ಉಲ್ಲೇಖಿಸಿರುವ ಹಝ್ರತ್ ಅಬೂ ಹುರೈರಾ(ರ) ಹೇಳುತ್ತಾರೆ: (ಆ ಸಂದರ್ಭದಲ್ಲಿ) ನನಗೆ ನೆನಪಿರುವಂತೆ ಪ್ರವಾದಿ(ಸ) "ಅವನು ಸ್ವಲ್ಪವೂ ದಣಿಯದೆ ರಾತ್ರಿ ಜಾಗರಣೆ ಮಾಡಿ, ಅಲ್ಲಾಹನ ಆರಾಧನೆ ನಡೆಸುವ ವ್ಯಕ್ತಿಗೆ ಮತ್ತು ಸದಾ ಉಪವಾಸ ಆಚರಿಸುತ್ತಿರುವ ವ್ಯಕ್ತಿಗೆ ಸಮಾನನಾಗಿದ್ದಾನೆ" ಎಂದೂ ಹೇಳಿದ್ದರು.

(ಬುಖಾರಿ, ಮುಸ್ಲಿಮ್)

ಬಡವರ ಮತ್ತು ವಿಧವೆಯರ ಸೇವೆ ಎಷ್ಟೊಂದು ಪುಣ್ಯದಾಯಕ!

ಅನಾಥರ ಸೇವೆಯ ಕುರಿತು ಪ್ರವಾದಿ(ಸ) ಹೀಗೆಂದಿದ್ದಾರೆ: "ನಾನು ಮತ್ತು ಅನಾಥನ ಪೋಷಣೆ ಮಾಡುವ ವ್ಯಕ್ತಿ- ಆ ಅನಾಥ ಅವನ ಸಂಬಂಧಿಯಾಗಿರಲಿ ಅಲ್ಲದಿರಲಿ- ಸ್ವರ್ಗದಲ್ಲಿ ಈ ರೀತಿ ನಿಕಟವಾಗಿರುವೆವು" ಹೀಗೆ ಹೇಳಿ ತಮ್ಮ ತೋರು ಬೆರಳು ಮತ್ತು ನಡು ಬೆರಳುಗಳನ್ನು ಎತ್ತಿ ತೋರಿಸಿದರು. ಅವೆರಡರ ಮಧ್ಯೆ ಅಲ್ಪ ಅಂತರ ಮಾತ್ರ ಇತ್ತು. (ಬುಖಾರಿ)

ಅನಾಥರ ಸಂರಕ್ಷಣೆ ಮತ್ತು ಪಾಲನೆ ಪೋಷಣೆ ಮಾಡುವವರಿಗೆ ಪ್ರವಾದಿ(ಸ) ಎಷ್ಟೊಂದು ಉನ್ನತ ಸ್ಥಾನ ಕೊಟ್ಟಿದ್ದಾರೆ! ಇದಕ್ಕೆ ತದ್ವಿರುದ್ಧವಾಗಿ ಅನಾಥರ ಸೊತ್ತನ್ನು ಕಬಳಿಸುವವರಿಗೆ ಪವಿತ್ರ ಕುರ್‌ಆನಿನಲ್ಲಿ ಭೀಕರ ಎಚ್ಚರಿಕೆಗಳನ್ನು ಕೊಡಲಾಗಿದೆ. ಉದಾ:

"ಅನಾಥರ ಸೊತ್ತನ್ನು ಅಕ್ರಮವಾಗಿ ಕಬಳಿಸುವವರು ವಾಸ್ತವದಲ್ಲಿ ತಮ್ಮ ಹೊಟ್ಟೆಯನ್ನು ನರಕಾಗ್ನಿಯಿಂದ ತುಂಬುತ್ತಾರೆ ಮತ್ತು ನಿಶ್ಚಯವಾಗಿಯೂ ಅವರು ಪ್ರಜ್ವಲಿಸುವ ನರಕಾಗ್ನಿಗೆ ತಳ್ಳಲ್ಪಡುವರು." (ಪವಿತ್ರ ಕುರ್‌ಆನ್, 4:10)

ಈ ಎಲ್ಲ ಆದೇಶಗಳು ಮುಸ್ಲಿಮ್ ಮತ್ತು ಮುಸ್ಲಿಮೇತರರೆಂಬ ತಾರತಮ್ಯವಿಲ್ಲದೆ ಎಲ್ಲರಿಗೆ ಅನ್ವಯವಾಗುತ್ತವೆಂಬುದನ್ನು ಇಲ್ಲಿ ಮತ್ತೊಮ್ಮೆ ಸ್ಮರಿಸಿಕೊಳ್ಳಬೇಕಾಗಿದೆ.

## ನೆರೆಯವರ ಸೇವೆ

ನಮ್ಮ ನೆರೆಯಲ್ಲಿ ವಾಸಿಸುವ ಜನರು - ಅವರು ಮುಸ್ಲಿಮರಿರಲಿ, ಮುಸ್ಲಿಮೇತರರಿರಲಿ- ನಮ್ಮ ಹಿತಾಕಾಂಕ್ಷೆ, ಸೇವೆ ಮತ್ತು ಸಹಾಯಗಳಿಗೆ ಇತರರಿಗಿಂತ ಹೆಚ್ಚು ಅರ್ಹರಾಗಿದ್ದಾರೆ. ಪವಿತ್ರ ಕುರ್‌ಆನಿನಲ್ಲಿ, ನೆರೆಯವನು ಬಂಧುವೋ ಅಲ್ಲವೋ ಎಂಬ ತಾರತಮ್ಯ ತೋರದೆ ಎಲ್ಲ ನೆರೆಯವರ ಜೊತೆ ಸದ್ವರ್ತನೆ ತೋರುವಂತೆ ಆದೇಶಿಸಲಾಗಿದೆ. ನೆರೆಯವರ ಸೇವೆಗೆ ಇಸ್ಲಾಮ್ ಧರ್ಮದಲ್ಲಿ ಅಸಾಮಾನ್ಯ ಮಹತ್ವ ಇದೆಯೆಂಬುದು ನಮಗೆ ಹದೀಸ್‌ಗಳಿಂದಲೂ ಸ್ಪಷ್ಟವಾಗುತ್ತದೆ. ಪ್ರವಾದಿ(ಸ) ಹೇಳಿದ್ದರು:

"ಜಿಬ್ರೀಲ್(ಅ) ಅವರು ನನಗೆ ನೆರೆಯವರ(ಸೇವೆಯ) ಬಗ್ಗೆ ನಿರಂತರವಾಗಿ ಉಪದೇಶಿಸುತ್ತಲಿದ್ದರು. ಎಷ್ಟೆಂದರೆ ಅವರು ನೆರೆಯವರನ್ನೂ ಆಸ್ತಿಯಲ್ಲಿ ಹಕ್ಕುದಾರರಾಗಿ ಮಾಡುವರೋ ಎಂದು ನನಗೆ ತೋಚತೊಡಗಿತು." (ಬುಖಾರಿ, ಮುಸ್ಲಿಮ್)

ಹ. ಅಬೂಹುರೈರಾ(ರ) ಉಲ್ಲೇಖಿಸಿರುವಂತೆ, ಪ್ರವಾದಿ(ಸ) ಹೀಗೆ ಹೇಳಿರುವರು:

"ಅಲ್ಲಾಹನಾಣೆ, ಅವನು ಸತ್ಯವಿಶ್ವಾಸಿಯಲ್ಲ. ಅಲ್ಲಾಹನಾಣೆ, ಅವನು ಸತ್ಯವಿಶ್ವಾಸಿಯಲ್ಲ. ಅಲ್ಲಾಹನಾಣೆ, ಅವನು ಸತ್ಯವಿಶ್ವಾಸಿಯಲ್ಲ!"

'ಯಾರು?' ಎಂದು ಅವರೊಡನೆ ಕೇಳಲಾಯಿತು. ಅವರು ಹೇಳಿದರು:

"ಯಾರ ಕೆಡುಕುಗಳಿಂದ ಅವನ ನೆರೆಯವನು ಸುರಕ್ಷಿತನಲ್ಲವೋ ಅವನು."

(ಬುಖಾರಿ, ಮುಸ್ಲಿಮ್)

## ಹೆತ್ತವರ ಹಕ್ಕುಗಳು

ನಮ್ಮ ಮೇಲೆ, ಮಾನವರ ಪೈಕಿ ಅತಿ ಹೆಚ್ಚಿನ ಹೊಣೆಗಾರಿಕೆಗಳು ಮತ್ತು ಕರ್ತವ್ಯಗಳಿರುವುದು ನಮ್ಮ ಸ್ವಂತ ತಂದೆ-ತಾಯಿಯರ ಬಗ್ಗೆ. ಹೆತ್ತವರೊಡನೆ ಸದ್ವರ್ತನೆ ತೋರುವುದರ ಮಹತ್ವವನ್ನು ಪವಿತ್ರ ಕುರ್‌ಆನಿನಲ್ಲೂ ಪ್ರವಾದಿ ವಚನಗಳಲ್ಲೂ ಬಹಳ ಒತ್ತು ಕೊಟ್ಟು ಪ್ರತಿಪಾದಿಸಲಾಗಿದೆ.

"ನಿಮ್ಮ ಪ್ರಭು (ಹೀಗೆ) ವಿಧಿಸಿ ಬಿಟ್ಟಿದ್ದಾನೆ; ನೀವು ಕೇವಲ ಅವನೊಬ್ಬನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ, ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ವಕವಾಗಿ ಮಾತನಾಡಿರಿ. ನಯ ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. 'ಓ ನನ್ನ ಪ್ರಭೂ! ಇವರು ನನ್ನ

ಕ್ಕಂದಿನಲ್ಲಿ ದಯಾ ವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಪೆತ್ತೋರು' ಎಂದು ಪ್ರಾರ್ಥಿಸಿರಿ." (17:23,24)

ಮಾತಾಪಿತರ ಪೈಕಿಯೂ ಮಾತೆಯು ಪಿತನಿಗಿಂತ ಹೆಚ್ಚಿನ ಮಮತೆ ಮತ್ತು ನ್ವರ್ತನೆಗಳಿಗೆ ಅರ್ಹಳಾಗಿದ್ದಾಳೆ.

ಹಝ್ರತ್ ಅಬೂಹುರೈರಾ(ರ) ಉಲ್ಲೇಖಿಸಿರುವಂತೆ, ಒಮ್ಮೆ ಓರ್ವ ವ್ಯಕ್ತಿ ಬಂದು ಪ್ರವಾದಿವರ್ಯರೇ(ಸ) ನನ್ನ ಸದ್ವರ್ತನೆಗೆ ಅತಿ ಹೆಚ್ಚು ಅರ್ಹರು ಯಾರು?" ಎಂದು ಪ್ರಶ್ನಿಸಿದನು. ಪ್ರವಾದಿ(ಸ) 'ನಿನ್ನ ಮಾತೆ' ಎಂದು ಉತ್ತರಿಸಿದರು. 'ಆ ಬಳಿಕ ಯಾರು' ಎಂದು ವನು ಕೇಳಿದನು. ಆಗ ಪ್ರವಾದಿ(ಸ) 'ನಿನ್ನ ಮಾತೆ' ಎಂದು ಉತ್ತರಿಸಿದರು. ಅವನು ಪುನಃ ' ಬಳಿಕ ಯಾರು?' ಎಂದು ಪ್ರಶ್ನಿಸಿದನು. ಪ್ರವಾದಿ(ಸ) ಮತ್ತೆ 'ನಿನ್ನ ತಾಯಿ' ಎಂದುತ್ತರಿ ದರು. ಅವನು ಪುನಃ 'ಆ ಬಳಿಕ ಯಾರು?' ಎಂದು ಕೇಳಿದಾಗ "ಆ ಬಳಿಕ ನಿನ್ನ ತಂದೆ, ಆ ಳಿಕ ನಿನಗೆ ರಕ್ತ ಸಂಬಂಧದಲ್ಲಿ ಬಹಳಷ್ಟು ನಿಕಟರಾಗಿರುವವರು, ಆ ಬಳಿಕ ಅವರ ೊರತು ಅತಿಹೆಚ್ಚು ನಿಕಟರಾಗಿರುವವರು" ಎಂದು ಪ್ರವಾದಿ(ಸ) ಉತ್ತರಿಸಿದರು.

ಎಲ್ಲಾ ವಿಷಯಗಳಲ್ಲೂ ಹೆತ್ತವರ ಆಜ್ಞಾಪಾಲನೆ ಅತ್ಯಗತ್ಯ. ಆದರೆ ಅವರು ರ್ಕ್ ಅಥವಾ ಬಹುದೇವಾರಾಧನೆ ಮಾಡುವಂತೆ ಆದೇಶಿಸಿದರೆ ಅಥವಾ ಅದಕ್ಕೆ ಪ್ರೇರೇಪಣೆ ಕೊಟ್ಟರೆ ಆಗ ಅವರನ್ನು ಅನುಸರಿಸಬೇಕಾಗಿಲ್ಲ. ಮಾತ್ರವಲ್ಲ ಆ ವಿಷಯ ಲ್ಲಿ ಅವರನ್ನು ಅನುಸರಿಸುವುದು ತಪ್ಪು. ಆದರೂ ಬೇರೆ ವಿಷಯಗಳಲ್ಲಿ ಅವರ ಜ್ಞಾಪಾಲನೆ ಮಾಡುವುದು ಮತ್ತು ಅವರೊಂದಿಗೆ ಅತ್ಯಂತ ಸೌಜನ್ಯಶೀಲತೆಯೊಂದಿಗೆ ರ್ತಿಸುವುದು ಆಗಲೂ ನಮ್ಮ ಕರ್ತವ್ಯವೇ ಆಗಿರುತ್ತದೆ.

**"ಆದರೆ, ಅವರು ನಿನಗೆ ತಿಳಿಯದುದನ್ನು ನನ್ನೊಂದಿಗೆ ಸಹಭಾಗಿಯಾಗಿ ೂಡಬೇಕೆಂದು ನಿನ್ನ ಮೇಲೆ ಒತ್ತಡ ಹಾಕಿದರೆ ಅವರ ಮಾತನ್ನು ಎಷ್ಟು ಮಾತ್ರಕ್ಕೂ ೇಳಬೇಡ. ಈ ಲೋಕದಲ್ಲಿ ಅವರೊಂದಿಗೆ ಸದ್ವರ್ತನೆ ಮಾಡುತ್ತಿರು. ಆದರೆ, ಯಾರು ನ್ನ ಕಡೆಗೆ ಒಲಿದಿರುವನೋ ಅವನ ಮಾರ್ಗವನ್ನು ಮಾತ್ರ ಅನುಸರಿಸು."**

**(ಪವಿತ್ರ ಕುರ್‌ಆನ್, 31:15)**

## ಬಂಧುಗಳ ಹಕ್ಕುಗಳು

ಹೆತ್ತವರಲ್ಲದ ನಿಕಟ ಸಂಬಂಧಿಗಳ ಜೊತೆ ಸದ್ವರ್ತನೆ ತೋರುವುದು ಕೂಡಾ ಸತ್ಯವಿಶ್ವಾಸಿಯ ಪ್ರಧಾನ ಕರ್ತವ್ಯಗಳಲ್ಲೊಂದಾಗಿದೆ. ಅಲ್ಲಾಹನ ದಾಸರ ಪೈಕಿ ಹೆತ್ತವರ ಬಳಿಕ ನಮ್ಮ ಸದ್ವರ್ತನೆ, ಔದಾರ್ಯ, ಸೇವೆ ಮತ್ತು ಗೌರವಾದರಗಳಿಗೆ ಪಾತ್ರರಾಗಲು ಅತಿ ಹೆಚ್ಚು ಅರ್ಹರಾಗಿರುವವರು- ನಮ್ಮ ನಿಕಟ ಸಂಬಂಧಿಗಳು ಮತ್ತು ಬಂಧುಗಳು, ಬಂಧುಗಳ ಜೊತೆ ಸೌಜನ್ಯ ತೋರುವುದರ ಬಗ್ಗೆ ಪವಿತ್ರ ಕುರ್‌ಆನ್ ಹಲವೆಡೆ ಒತ್ತುಕೊಟ್ಟು ಪ್ರಸ್ತಾಪಿಸಿದೆ.

"ಒಳಿತು ಏನೆಂದರೆ... ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾ ಗಳಿಗೂ ದಾಸ್ಯವಿಮೋಚನೆಗಾಗಿಯೂ ವ್ಯಯಿಸುವುದು." (2:17

ಪವಿತ್ರ ಕುರ್‌ಆನಿನ 'ಅನ್ನಿಸಾ' ಅಧ್ಯಾಯದಲ್ಲಿ ದೇವಭಯ ಮತ್ತು ಪರಸ ಸಂಬಂಧಗಳ ರಕ್ಷಣೆ ಇವೆರಡನ್ನೂ ಧರ್ಮದ ಎರಡು ಮೂಲಭೂತ ಅಂಶಗಳ ಚಿತ್ರಿಸಲಾಗಿರುವುದನ್ನು ಕಾಣಬಹುದು.

"ನೀವು ಯಾರ ಹೆಸರನ್ನೆತ್ತಿ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಕೇಳುತ್ತೀರೋ ಅಲ್ಲಾಹನನ್ನು ಭಯಪಡಿರಿ. ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ."

(ಪವಿತ್ರ ಕುರ್‌ಆನ್, 4:

ಪವಿತ್ರ ಕುರ್‌ಆನ್, ಉತ್ತಮ ಸತ್ಯವಿಶ್ವಾಸಿಗಳ ವರ್ಣನೆ ಮಾಡುತ್ತಾ ಅವರು ಅಲ್ಲಾ ಜೊತೆ ಮಾಡಿರುವ ಕರಾರನ್ನು ಪಾಲಿಸುತ್ತಾರೆ ಎನ್ನುವುದರ ಬೆನ್ನಿಗೇ ಅವರು ಕುಟು ಸಂಬಂಧಗಳ ಕುರಿತಾದ ತಮ್ಮ ಬಾಧ್ಯತೆಗಳನ್ನು ನೆರವೇರಿಸುವವರಾಗಿರುತ್ತಾರೆ ಎಂದಿದೆ:

"ಅವರು ಅಲ್ಲಾಹನೊಡನೆ ಮಾಡಿದ ಕರಾರನ್ನು ಪಾಲಿಸುತ್ತಾರೆ. ಅದನ್ನು (ಕರಾರನ ಬಲಗೊಳಿಸಿಕೊಂಡ ಬಳಿಕ ಮುರಿದು ಬಿಡುವುದಿಲ್ಲ. ಅಲ್ಲಾಹನು ಯಾವ ಯಾ ಸಂಬಂಧಗಳನ್ನು ಕಾಪಾಡಲು ಆಜ್ಞೆ ಕೊಟ್ಟಿರುವನೋ ಅವುಗಳನ್ನು ಕಾಪಾಡಿಕೊಳ್ಳುತ್ತಾ ತಮ್ಮ ಪ್ರಭುವನ್ನು ಭಯಪಡುತ್ತಾರೆ. ಎಲ್ಲಾದರೂ ತಮ್ಮೊಡನೆ ಕೆಟ್ಟ ರೀತಿಯ ವಿಚಾರ ನಡೆದುಬಿಟ್ಟೀತೋ ಎಂದು ಹೆದರುತ್ತಾರೆ." (13:20-2

ಸಂಬಂಧಗಳನ್ನು ಗೌರವಿಸುವ ಮತ್ತು ಕಾಪಾಡುವ ಕುರಿತು ಪ್ರವಾದಿ ಮುಹಮ್ಮದ್( ಹೀಗೆಂದಿರುವರು:

"ರಕ್ತ ಸಂಬಂಧವು, ದಯಾಮಯನ(ಅನುಗ್ರಹದ) ಶಾಖೆಗಳಲ್ಲೊಂದಾಗಿದೆ. ಯಾ ಈ ಸಂಬಂಧಗಳನ್ನು ಸಂರಕ್ಷಿಸುವರೋ ಅವರ ಜೊತೆ ನಾನು ಸಂಬಂಧವಿಡುವೆನು. ಯಾ ಈ ಸಂಬಂಧಗಳನ್ನು ಮುರಿಯುವರೋ ಅವರಿಂದ ನಾನು ಸಂಬಂಧವನ್ನು ಮುರಿ ಕೊಳ್ಳುವೆನು ಎಂದು ಅಲ್ಲಾಹನು ಹೇಳಿರುತ್ತಾನೆ." (ಬುಖಾ

ಯಾರ ಜೊತೆ ಅಲ್ಲಾಹನು ಸಂಬಂಧವಿಟ್ಟಿರುವನೋ ಅವನು ಮಹಾ ಭಾಗ್ಯವಂ ಇನ್ನು ಯಾರಿಂದ ಅಲ್ಲಾಹನು ಸಂಬಂಧ ಮುರಿದುಕೊಂಡನೋ ಅವನಂತೂ ಸ್ವರ ಪ್ರವೇಶಿಸುವ ಅರ್ಹತೆಯನ್ನು ಕಳೆದುಕೊಳ್ಳುತ್ತಾನೆ:

"ಸಂಬಂಧಗಳನ್ನು ಮುರಿಯುವವನು ಸ್ವರ್ಗ ಪ್ರವೇಶಿಸಲಾರ" ಎಂದು ಪ್ರವಾದಿ( ಹೇಳಿರುವರು. (ಬುಖಾರಿ

ಬಂಧುಗಳ ಜೊತೆ ಇರುವ ಸಂಬಂಧವನ್ನು ಗೌರವಿಸುತ್ತಾ ಅವರ ಬಗೆಗಿನ ಬಾಧ್ಯ ಗಳನ್ನೆಲ್ಲಾ ಸರಿಯಾಗಿ ತೀರಿಸುವುದರಿಂದ ಮನುಷ್ಯನ ಆಯುಷ್ಯ ಮತ್ತು ಜೀವನಾಧಾ ಇವೆರಡರಲ್ಲೂ ವೃದ್ಧಿಯುಂಟಾಗುತ್ತದೆಂದು ಹದೀಸ್‌ನಲ್ಲಿ ಹೇಳಲಾಗಿದೆ.

"ತನ್ನ ಜೀವನಾಧಾರವು(ಆದಾಯವು) ವಿಶಾಲವಾಗಬೇಕು ಮತ್ತು ತನ್ನ ಆಯುಷ್ಯವು ೇರ್ಘವಾಗಬೇಕೆಂದು ಬಯಸುವವನು ತನ್ನ ಬಂಧುಗಳಿಗೆ ಸಂಬಂಧಿಸಿದ ಬಾಧ್ಯತೆಗಳನ್ನು ೇರಿಸಲಿ" ಎಂದು ಪ್ರವಾದಿ(ಸ) ಹೇಳಿರುವರು. (ಬುಖಾರಿ, ಮುಸ್ಲಿಮ್)

"ಸಂಬಂಧಿಕರ ಜೊತೆ ಸದ್ವರ್ತನೆ ತೋರಬೇಕು" ಎನ್ನುವಾಗ, ನಮ್ಮ ಸಂಬಂಧಿಕರು ಥವಾ ಬಂಧುಗಳು ನಮ್ಮ ಜೊತೆ ಸೌಜನ್ಯ ತೋರಿದರೆ ಮಾತ್ರ ಅವರೊಂದಿಗೆ ನಾವು ೌಜನ್ಯ ತೋರಬೇಕಾದುದಲ್ಲ ಎಂಬುದನ್ನು ನೆನಪಿಟ್ಟುಕೊಳ್ಳಬೇಕು. ನಮ್ಮ ಬಂಧುಗಳು ಮ್ಮ ಜೊತೆ ಹೇಗೆ ವರ್ತಿಸಿದರೂ ನಮ್ಮ ಹಕ್ಕುಗಳನ್ನೂ ತಮ್ಮ ಕರ್ತವ್ಯಗಳನ್ನೂ ಎಷ್ಟೇ ರ್ಲಕ್ಷಿಸಿದರೂ ನಾವಂತೂ ಅವರ ಹಕ್ಕುಗಳನ್ನು ಮತ್ತು ನಮ್ಮ ಕರ್ತವ್ಯಗಳನ್ನು ನಿರ್ಲಕ್ಷಿಸ ಾರದು. ಎಲ್ಲ ಸ್ಥಿತಿಗಳಲ್ಲೂ ಅವರೊಡನೆ ನಾವು ಸೌಜನ್ಯಶೀಲವಾಗಿಯೇ ವರ್ತಿಸಬೇಕು.

"ಪ್ರತಿಕ್ರಿಯೆಯಾಗಿ ಸಂಬಂಧ ರಕ್ಷಿಸಿದರೆ ಅದು ಸಂಬಂಧ ರಕ್ಷಣೆ ಎನಿಸುವುದಿಲ್ಲ. ನ್ನೊಂದಿಗೆ ಇತರರು ಸಂಬಂಧ ಕಡಿದುಕೊಂಡರೂ ಆ ಸಂಬಂಧವನ್ನು ಉಳಿಸಿಕೊಂಡು, ಆ ುರಿತ ತನ್ನ ಕರ್ತವ್ಯಗಳನ್ನು ನಿರ್ವಹಿಸುತ್ತಾ ಇರುವವನೇ ನಿಜವಾದ ಸಂಬಂಧ ರಕ್ಷಕನು" ಂದು ಪ್ರವಾದಿ(ಸ) ಹೇಳಿರುವರು. (ಬುಖಾರಿ)

ಮುಸ್ಲಿಮರಿಗೂ ಮುಸ್ಲಿಮೇತರರಿಗೂ ಸಂಬಂಧ ರಕ್ಷಣೆಯ ಈ ನಿಯಮಗಳು ಮಾನವಾಗಿ ಅನ್ವಯಿಸುತ್ತದೆ.

## ಪತಿ-ಪತ್ನಿಯರ ಹಕ್ಕುಗಳು

ಮಾನವೀಯ ಸಂಬಂಧಗಳ ಪೈಕಿ ಪತಿ-ಪತ್ನಿಯರ ಸಂಬಂಧವು ಅತ್ಯಂತ ಪ್ರಮುಖ ಾಗೂ ಪವಿತ್ರವಾಗಿದೆ. ಸಮಾಜದ ಸ್ವಾಸ್ಥ್ಯವು ಕುಟುಂಬದ ಸ್ವಾಸ್ಥ್ಯವನ್ನು ಅವಲಂಬಿಸಿರು ಂತೆ, ಕುಟುಂಬದ ಸ್ವಾಸ್ಥ್ಯವು ಮುಖ್ಯವಾಗಿ ಪತಿ-ಪತ್ನಿಯ ಸಂಬಂಧದ ಸ್ವಾಸ್ಥ್ಯವನ್ನು ವಲಂಬಿಸಿದೆ. ಪತಿ-ಪತ್ನಿಯರ ಮಧ್ಯೆ ಪರಸ್ಪರ ಎಷ್ಟು ಹೆಚ್ಚು ತಿಳುವಳಿಕೆ, ಅನುರಾಗ ುತ್ತು ಸಹಕಾರ ಇರುವುದೋ ಅಷ್ಟೇ ಹೆಚ್ಚು ಶಾಂತಿ-ಸಮೃದ್ಧಿಗಳು ಆ ಕುಟುಂಬದ ಪಾಲಿಗೆ ುರುತ್ತವೆ. ಮಕ್ಕಳ ಶ್ರೇಯಸ್ಸು ಮತ್ತು ಅವರ ಭವಿಷ್ಯದ ಹಿತ ಕೂಡಾ ಪತಿ-ಪತ್ನಿಯರ ಂಬಂಧ ಹೇಗಿದೆ ಎಂಬುದನ್ನು ಮುಖ್ಯವಾಗಿ ಅವಲಂಬಿಸಿರುತ್ತದೆ.

ಕುಟುಂಬವನ್ನು ಸ್ವಸ್ಥವಾಗಿಡಲು ಅಲ್ಲಾಹನು ಒಂದು ಸಮರ್ಪಕ ವ್ಯವಸ್ಥೆಯನ್ನು ಚಿಸಿರುವನು. ಆ ವ್ಯವಸ್ಥೆಯಲ್ಲಿ ಪುರುಷನು ಕುಟುಂಬದ ಮುಖ್ಯಸ್ಥನಾಗಿರುತ್ತಾನೆ. ುಹಿಳೆಯು ಧರ್ಮಸಮ್ಮತ ಮಿತಿಗಳೊಳಗೆ ತನ್ನ ಪತಿಯನ್ನು ಅನುಸರಿಸಬೇಕಾಗುತ್ತದೆ.

ಪವಿತ್ರ ಕುರ್‌ಆನ್ ಈ ಕುರಿತು ಒಂದೆಡೆ ಹೀಗೆ ಹೇಳಿದೆ:

"ಪುರುಷರು ಸ್ತ್ರೀಯರ ಮೇಲೆ 'ಮೇಲ್ವಿಚಾರಕ' ಆಗಿರುತ್ತಾರೆ. ಇದು ಅಲ್ಲಾಹನು ಲವರಿಗೆ ಕೆಲವರ ಮೇಲೆ ಶ್ರೇಷ್ಠತೆ ಪ್ರದಾನ ಮಾಡಿದುದರಿಂದ ಮತ್ತು ಪುರುಷರು ುಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದ. ಸುಶೀಲೆಯರಾದ ಸ್ತ್ರೀಯರು

ಅನುಸರಣಶೀಲರಾಗಿರುತ್ತಾರೆ ಮತ್ತು ಅವರು ಪುರುಷರ ಅನುಪಸ್ಥಿತಿಯಲ್ಲಿ ಅಲ್ಲಾಹನ ರಕ್ಷಣೆಯಲ್ಲಿ ಅವರ ಹಕ್ಕು ಬಾಧ್ಯತೆಗಳ ರಕ್ಷಣೆ ಮಾಡುತ್ತಾರೆ." (4:34)

ಇನ್ನು ಪವಿತ್ರ ಕುರ್‌ಆನ್ ಪುರುಷರಿಗೆ ಮಹಿಳೆಯರೊಡನೆ ಅತ್ಯುತ್ತಮವಾಗಿ ವರ್ತಿಸುವಂತೆ ಮತ್ತು ಅವರ ಹಕ್ಕುಗಳನ್ನು ಗೌರವಿಸುವಂತೆ ಮತ್ತು ಅವರಿಗೆ ಸಂಬಂಧಿಸಿದ ತಮ್ಮ ಕರ್ತವ್ಯಗಳನ್ನು ಮರೆಯದಂತೆ ಆದೇಶ ಕೊಟ್ಟಿದೆ. ಉದಾ:

"ನೀವು ಅವರೊಂದಿಗೆ ಉತ್ತಮ ರೀತಿಯಿಂದ ಜೀವನ ನಡೆಸಿರಿ. ಅವರು ನಿಮಗೆ ಅಪ್ರಿಯರಾಗಿದ್ದರೆ ಒಂದು ವಸ್ತುವು ನಿಮಗೆ ಅಪ್ರಿಯವಾಗಿದ್ದರೂ ಅಲ್ಲಾಹನು ಅದರಲ್ಲೇ ಅತಿ ಹೆಚ್ಚು ಒಳಿತನ್ನಿರಿಸಿರಲೂಬಹುದು." (4:19)

ಅಲ್ಲಾಹನು ಪತಿ-ಪತ್ನಿಯರ ಮಧ್ಯೆ ಪ್ರೇಮ ಮತ್ತು ವಾತ್ಸಲ್ಯವನ್ನು ಕಾಣಬಯಸುತ್ತಾನೆ:

"ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದೂ ಅವನ ನಿದರ್ಶನಗಳಲ್ಲೊಂದಾಗಿದೆ." (ಪವಿತ್ರ ಕುರ್‌ಆನ್, 30:21)

ಪ್ರವಾದಿ ಮುಹಮ್ಮದ್‌ರಂತೂ(ಸ) ಮಹಿಳೆಯರ ಜೊತೆ ಅತ್ಯಂತ ಸೌಜನ್ಯದಿಂದ ವರ್ತಿಸ ಬೇಕೆಂಬುದಕ್ಕೆ ಬಹಳ ಪ್ರಾಮುಖ್ಯತೆ ಕೊಟ್ಟಿದ್ದರು. ಅವರೊಮ್ಮೆ ಹೇಳಿದ್ದರು:

"ಮಹಿಳೆಯರ ಜೊತೆ ಸದ್ವರ್ತನೆ ತೋರಬೇಕೆಂಬ ನನ್ನ ಬೋಧನೆಯನ್ನು ಪಾಲಿಸಿರಿ." (ಬುಖಾರಿ, ಮುಸ್ಲಿಮ್)

ತನ್ನ ಮನೆಯವರ ಪಾಲಿಗೆ ಉತ್ತಮನಾಗಿರುವ, ಅಂದರೆ ಅವರ ಜೊತೆ, ಪ್ರೇಮ, ವಾತ್ಸಲ್ಯಗಳೊಂದಿಗೆ ವರ್ತಿಸುವ ವ್ಯಕ್ತಿಯೇ ಅತ್ಯುತ್ತಮ ವ್ಯಕ್ತಿ ಎಂದು ಇಸ್ಲಾಮ್ ಪ್ರತಿಪಾದಿಸುತ್ತದೆ. ಒಮ್ಮೆ ಪ್ರವಾದಿ(ಸ) ಹೀಗೆಂದರು:

"ನಿಮ್ಮ ಪೈಕಿ ಯಾರು ತನ್ನ ಮನೆಯವರ ಪಾಲಿಗೆ ಅತ್ಯುತ್ತಮನೋ ಅವನೇ ನಿಜವಾಗಿ ಅತ್ಯುತ್ತಮನು ಮತ್ತು ನಾನು ನನ್ನ ಮನೆಯವರ ಪಾಲಿಗೆ ನಿಮ್ಮೆಲ್ಲರಿಗಿಂತ ಉತ್ತಮನು." (ತಿರ್ಮಿದಿ, ದಾರಿಮಿ, ಇಬ್ನುಮಾಜಃ)

ಮಾನವ ಇತಿಹಾಸದಲ್ಲಿ ಪ್ರವಾದಿ ಮುಹಮ್ಮದ್‌ರಷ್ಟು(ಸ) ದೇವಭಕ್ತ, ಧರ್ಮನಿಷ್ಠ ವ್ಯಕ್ತಿ ಬೇರೆ ಇಲ್ಲ. ಅವರು ಹಗಲಿರುಳೂ ಧರ್ಮ ಸಂಸ್ಥಾಪನಾರ್ಥವಾಗಿ ಶ್ರಮಿಸುವುದರಲ್ಲೇ ನಿರತರಾಗಿದ್ದರು. ನಿತ್ಯವೂ ಧರ್ಮಪ್ರಚಾರ, ಚರ್ಚೆ, ಮಾತುಕತೆ, ಯುದ್ಧ, ಸಂಧಾನ ಮತ್ತು ಆರಾಧನಾ ಕರ್ಮಗಳಲ್ಲೇ ಅವರ ಸಮಯ ಕಳೆಯುತ್ತಿತ್ತು. ಅನೇಕ ಸಂಕಷ್ಟ, ಅಪಾಯ ಮತ್ತು ಒತ್ತಡಗಳು ಅವರಿಗೆ ಎದುರಾಗುತ್ತಿದ್ದವು. ಆದರೆ ಇವೆಲ್ಲದರ ಹೊರತಾಗಿಯೂ ಅವರೊಬ್ಬ ಆದರ್ಶ ಗೃಹಸ್ಥರಾಗಿದ್ದರು. ತಮ್ಮ ಪತ್ನಿಯರ ಹಕ್ಕುಗಳನ್ನು ಅವರೆಂದೂ ಮರೆಯುತ್ತಿರಲಿಲ್ಲ. ಪ್ರೇಮ, ಅನುಕಂಪ ಮತ್ತು ವಾತ್ಸಲ್ಯದ ಸಾಕಾರ ಮೂರ್ತಿಯಾಗಿದ್ದರು. ಒಬ್ಬ ದೇವಭಕ್ತ ಹಾಗೂ ಧರ್ಮನಿಷ್ಠ ವ್ಯಕ್ತಿ ತನ್ನ ಮನೆಯವರ ಪಾಲಿಗೆ ಎಷ್ಟು ವಾತ್ಸಲ್ಯಮಯಿಯಾಗಿರಬಲ್ಲನೆಂಬುದಕ್ಕೆ ಪ್ರವಾದಿ(ಸ) ಅತ್ಯುತ್ತಮ ಮಾದರಿಯಾಗಿದ್ದಾರೆ.

## ಕ್ಕಳ ಹಕ್ಕು

ಪತಿ-ಪತ್ನಿಯರಿಗೆ ಅಲ್ಲಾಹನು ಕೊಡುವ ಅಮೂಲ್ಯ ಕೊಡುಗೆಯೇ ಮಕ್ಕಳು. ಅಲ್ಲಾಹನ ರ್ಗದರ್ಶನದಂತೆ ಅವರ ಲಾಲನೆ-ಪಾಲನೆ ಮಾಡಿ ಅವರಿಗೆ ಉತ್ತಮ ತರಬೇತಿ ಡಬೇಕಾದುದು ಹೆತ್ತವರ ಕರ್ತವ್ಯವಾಗಿದೆ. ಈ ಕರ್ತವ್ಯವನ್ನು ಎಷ್ಟಂಶ ನಿರ್ವಹಿಸಿದ ಬ ಪ್ರಶ್ನೆಯನ್ನು ನಾಳೆ ತಂದೆ-ತಾಯಿ ಇಬ್ಬರೂ ಪರಲೋಕದಲ್ಲಿ ಎದುರಿಸಬೇಕಾಗುವುದು.

ಪ್ರವಾದಿ ಮುಹಮ್ಮದ್(ಸ) ಹೇಳಿರುವರು.

"ಕೇಳಿರಿ! ನಿಮ್ಮ ಪೈಕಿ ಪ್ರತಿಯೊಬ್ಬನೂ ಹೊಣೆಗಾರ ಮತ್ತು ಮೇಲ್ವಿಚಾರಕನಾಗಿದ್ದಾನೆ ತ್ತು ನಿಮ್ಮ ಪೈಕಿ ಪ್ರತಿಯೋರ್ವನೊಡನೆ, ಅವನ ಹೊಣೆಯ ಕುರಿತು ಮತ್ತು ಅವನ ೀನವಿರುವವರ ಕುರಿತು ವಿಚಾರಣೆ ನಡೆಸಲಾಗುವುದು. ಜನರ ನಾಯಕನು ಆ ಜನರ ಣೆಗಾರ ನಾಗಿರುವನು ಮತ್ತು ಅವನೊಡನೆ ಆ ಜನರ ಬಗ್ಗೆ ವಿಚಾರಿಸಲಾಗುವುದು. ರುಷನು ಮನೆಯವರ ಮೇಲ್ವಿಚಾರಕನು. ಅವನೊಡನೆ ಅವನ ಮನೆಯವರ ಕುರಿತು ಚಾರಿಸ ಲಾಗುವುದು. ಮಹಿಳೆಯು ತನ್ನ ಪತಿಯ ಮನೆ ಮತ್ತು ತನ್ನ ಮಕ್ಕಳ ಮೇಲ್ವಿಚಾರಕ ಗಿರುವಳು. ಅವಳನ್ನು ಅದರ ಕುರಿತು ಪ್ರಶ್ನಿಸಲಾಗುವುದು." (ಬುಖಾರಿ, ಮುಸ್ಲಿಮ್)

ಮನೆಯಲ್ಲಿ ಹೆಣ್ಣುಮಗು ಜನಿಸಿದರೆ ಕೆಲವರಿಗೆ ಬೇಸರವಾಗುವುದುಂಟು. ಪ್ರಾಚೀನ ರಬ್ ಸಮಾಜದಲ್ಲೂ ಇತರ ಕೆಲವು ಸಮಾಜಗಳಲ್ಲೂ ಹೆಣ್ಣು ಮಕ್ಕಳನ್ನು ಜೀವಂತ ಹತು ಬಿಡುವ ಸಂಪ್ರದಾಯವಿತ್ತು. ಪವಿತ್ರ ಕುರ್‌ಆನ್ ಈ ಪ್ರವೃತ್ತಿಯನ್ನು ಎಷ್ಟೊಂದು ರಿಣಾಮಕಾರಿ ಭಾಷೆಯಲ್ಲಿ ಖಂಡಿಸಿದೆಯೆಂಬುದನ್ನು ಗಮನಿಸಿ:

**"ಜೀವಂತ ಹೂಳಲ್ಪಟ್ಟ ಹೆಣ್ಣು ಮಗುವಿನೊಡನೆ ಕೇಳಲಾಗುವಾಗ, ಯಾವ ಪ್ಪಗಾಗಿ ಅವಳನ್ನು ಕೊಲ್ಲಲಾಯಿತೆಂದು."** **(81:8-9)**

ಹೆಣ್ಮಕ್ಕಳ ಬಗ್ಗೆ ಜನರಲ್ಲಿ ತಾತ್ಸಾರ ಮೂಡುವುದಕ್ಕೆ ಮುಖ್ಯ ಕಾರಣ, ಅವರು ಹಣ ಪಾದನೆ ಮಾಡುವುದಿಲ್ಲ ಮತ್ತು ಕೊನೆತನಕವೂ ಆರ್ಥಿಕವಾಗಿ ಇತರರಿಗೆ ಹೊರೆಯಾಗಿರು ರೆ ಎಂಬ ಭಾವನೆಯಾಗಿತ್ತು. ಪವಿತ್ರ ಕುರ್‌ಆನ್ ಈ ಮನೋವೃತ್ತಿಯನ್ನು ತಿದ್ದುತ್ತಾ ಗೆ ಹೇಳಿದೆ:

**"ನಿಮ್ಮ ಮಕ್ಕಳನ್ನು ಬಡತನದ ಭೀತಿಯಿಂದ ಕೊಲ್ಲಬೇಡಿರಿ. ನಾವು ಅವರಿಗೂ ಹಾರ ನೀಡುವೆವು ನಿಮಗೂ ನೀಡುವೆವು. ವಾಸ್ತವದಲ್ಲಿ ಅವರ ವಧೆಯು ಒಂದು ೋರ ಅಪರಾಧವಾಗಿದೆ."** **(17:31)**

ಅತ್ತ ಪ್ರವಾದಿ ಮುಹಮ್ಮದ್(ಸ) ಹೆಣ್ಮಕ್ಕಳ ಪೋಷಣೆಯನ್ನು ಭಾರೀ ಪುಣ್ಯ ರ್ಯವೆಂದು ಪ್ರೋತ್ಸಾಹಿಸಿರುವರು:

"ಇಬ್ಬರು ಹೆಣ್ಣು ಮಕ್ಕಳನ್ನು ಅವರು ಪ್ರಬುದ್ಧರಾಗುವವರೆಗೂ ಪೋಷಿಸಿದ ವ್ಯಕ್ತಿ ತ್ತು ನಾನು ಪುನರುತ್ಥಾನ ದಿನದಂದು ಹೀಗೆ ಪರಸ್ಪರ ನಿಕಟವಾಗಿ ಇರುವೆವು" ಎಂದು ಳಿ ಪ್ರವಾದಿ(ಸ) ತಮ್ಮ ಎರಡು ಬೆರಳುಗಳನ್ನು ಜೋಡಿಸಿ ತೋರಿಸಿದರು. (ಮುಸ್ಲಿಮ್)

ಪರಲೋಕದಲ್ಲಿ ಒಬ್ಬ ವ್ಯಕ್ತಿಗೆ ಪ್ರವಾದಿವರ್ಯರ(ಸ) ಜೊತೆಗೆ ಇರುವ ಸೌಭಾಗ್ಯ ದೊರಕಿದರೆ ಅದು ಎಷ್ಟೊಂದು ಮಹಾನ್ ಸನ್ಮಾನ! ಹೆಣ್ಮಕ್ಕಳ ಪಾಲನೆ ಪೋಷಣೆಯ ಅಂಥ ಸನ್ಮಾನಕ್ಕೆ ಪಾತ್ರಗೊಳಿಸುವಷ್ಟು ದೊಡ್ಡ ಸತ್ಕಾರ್ಯವಾಗಿದೆ. ಒಂದು ವೇ ಯಾವುದಾದರೂ ಕಾಲದಲ್ಲಿ ಸಮಾಜದ ಕೆಟ್ಟ ಸಂಪ್ರದಾಯಗಳಿಂದಾಗಿ ಒಬ್ಬ ವ್ಯಕ್ತಿ ಹೆಣ್ಮಕ್ಕಳ ಪಾಲನೆ ಪೋಷಣೆಯ ಹಾದಿಯಲ್ಲಿ ಕೆಲವಾರು ತೊಂದರೆಗಳನ್ನು ಎದುರಿ ಬೇಕಾಗಿ ಬಂದರೂ ತಾನೆದುರಿಸುವ ಕಷ್ಟ-ಕಾರ್ಪಣ್ಯಗಳು ಅಂತಿಮವಾಗಿ ತನ್ನ ಪಾಲಿಗ ವರದಾನ ವಾಗಲಿವೆ ಎಂಬ ಭರವಸೆ ಅವನಿಗಿರಬೇಕು. ಹೆಣ್ಣಿನ ಪೋಷಣೆ ತಾತ್ಕಾಲಿಕವಾ ಎಷ್ಟೇ ತೊಂದರೆಗಳಿಗೆ ಕಾರಣವಾದರೂ ಅದು ತನ್ನನ್ನು ನರಕದಿಂದ ರಕ್ಷಿಸು ಸಾಧನವಾಗುವಷ್ಟು ಮಹಾನ್ ಸತ್ಕಾರ್ಯ ಎಂಬುದನ್ನು ಅವನು ತಿಳಿದಿರಬೇಕು. ಪ್ರವಾ ಮುಹಮ್ಮದ್(ಸ) ಈ ಕುರಿತು ಹೀಗೆ ಹೇಳಿರುವರು:

ಒಬ್ಬನು ಈ ಹೆಣ್ಣು ಮಕ್ಕಳಿಂದಾಗಿ ಯಾವುದಾದರೂ ಸತ್ವ ಪರೀಕ್ಷೆಗೆ ತುತ್ತಾದರು (ಲೆಕ್ಕಿಸದೆ) ಅವರ ಜೊತೆ ಉತ್ತಮವಾಗಿಯೇ ವರ್ತಿಸುತ್ತಿದ್ದನೆಂದಾದರೆ ಈ ಹೆಣ್ಮಕ್ಕಳ ಅವನನ್ನು ನರಕದಿಂದ ರಕ್ಷಿಸುವರು." (ಬುಖಾರಿ, ಮುಸ್ಲಿಮ್

ಮಕ್ಕಳ ಪಾಲನೆಯ ವಿಷಯದಲ್ಲಿ ಹೆತ್ತವರ ಮೇಲೆ ಅನೇಕ ಹೊಣೆಗಾರಿಕೆಗಳಿವ ಮಕ್ಕಳನ್ನು ಸಚ್ಚಾರಿತ್ರ್ಯ ಸಂಪನ್ನರಾಗಿ ಮಾಡಲು ಪ್ರಯತ್ನಿಸಬೇಕಾದುದು ಹೆತ್ತವರ ಅ ಮುಖ್ಯ ಕರ್ತವ್ಯ.

"ಯಾವ ತಂದೆಯೂ ತನ್ನ ಮಗನಿಗೆ ಸಚ್ಚಾರಿತ್ರ್ಯಕ್ಕಿಂತ ಉತ್ತಮ ಉಡುಗೊ ಕೊಟ್ಟಿಲ್ಲ" ಎಂದು ಪ್ರವಾದಿ(ಸ) ಹೇಳಿರುವರು. (ತಿರ್ಮಿದಿ, ಬೈಹಕೀ

ಒಬ್ಬ ವ್ಯಕ್ತಿಯು ಅಲ್ಲಾಹನ ಮೆಚ್ಚುಗೆಯ ಅಪೇಕ್ಷೆಯೊಂದಿಗೆ, ಅವನ ಧರ್ಮ ಮಿತಿಗಳೊಳಗೆ ಇದ್ದುಕೊಂಡು, ತನ್ನ ಮಕ್ಕಳು ಮತ್ತು ಮನೆಯವರಿಗಾಗಿ ಮಾಡುವ ವೆಚ್ ಕೂಡಾ ಅಲ್ಲಾಹನ ಮಾರ್ಗದ ವೆಚ್ಚವೆಂದೂ ಅದೊಂದು ಪುಣ್ಯ ಕಾರ್ಯವೆಂದೂ ಇಸ್ಲಾಮ ವರ್ಣಿಸುತ್ತದೆ. ಈ ಕುರಿತು ಪ್ರವಾದಿ ಮುಹಮ್ಮದ್‌ರ(ರ) ವಚನ ಗಮನಾರ್ಹ.

"ಒಬ್ಬ ಮುಸ್ಲಿಮನು ಅಲ್ಲಾಹನ ಸಂಪ್ರೀತಿ ಸಂಪಾದಿಸಲು ತನ್ನ ಮನೆಯವರಿಗಾ ಮಾಡುವ ಖರ್ಚು ದಾನವಾಗಿದೆ." (ಬುಖಾರಿ, ಮುಸ್ಲಿಮ್

ಇನ್ನೊಂದು ಹದೀಸ್‌ನಲ್ಲಿ ಪ್ರವಾದಿವರ್ಯರು(ಸ) ಇನ್ನೂ ಮುಂದುವರಿದು ಹೀ ಹೇಳಿರುವರು:

"ಮನುಷ್ಯನು ಖರ್ಚು ಮಾಡುವ 'ದೀನಾರ್'ಗಳ ಪೈಕಿ ಅವನು ತನ್ನ ಮಡದಿ-ಮಕ್ಕಳಿಗಾ ವ್ಯಯಿಸುವ ಧನವೇ ಅತ್ಯುತ್ತಮ. ಆ ಬಳಿಕ ಅಲ್ಲಾಹನ ಮಾರ್ಗದಲ್ಲಿ ಜಿಹಾದ್ ನಡೆಸ ವುದಕ್ಕಾಗಿ ತನ್ನ ಪ್ರಾಣಿಗಾಗಿ(ವಾಹನಕ್ಕಾಗಿ) ವ್ಯಯಿಸುವ ಹಣ ಉತ್ತಮ. ಆ ಬಳಿಕ ಅಲ್ಲಾಹ ಮಾರ್ಗದಲ್ಲಿ ಅವನು ತನ್ನ ಸಂಗಡಿಗರಿಗಾಗಿ ವ್ಯಯಿಸುವ ಹಣ ಉತ್ತಮ."

ಇಲ್ಲಿ ಕೇವಲ ಅತ್ಯಂತ ಆಪ್ತರ ಬಗ್ಗೆ ಮಾತ್ರ ಪ್ರಸ್ತಾಪಿಸಲಾಗಿದೆಯಾದರೂ ವಾಸ್ತವದಲ್ಲಿ ಮನುಷ್ಯರೆಂಬ ನೆಲೆಯಲ್ಲಿ ಇಬ್ಬರೂ ನಮ್ಮ ಸಹಾಯ, ಸಹಕಾರ, ಹಿತಾಕಾಂಕ್ಷೆ ಮತ್ತು

ಸೇವೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಇನ್ನು ಆ ಮನುಷ್ಯನು ಬಂಧುವೂ ಆಗಿದ್ದರೆ ಅವನು ನಮ್ಮ ಹೆಚ್ಚಿನ ಸೇವೆಗೆ ಪಾತ್ರನಾಗುತ್ತಾನೆ. ಪ್ರವಾದಿ(ಸ) ಹೇಳುತ್ತಾರೆ.

"ಬಡವರಿಗಾಗಿ ವೆಚ್ಚ ಮಾಡುವುದು ಪುಣ್ಯ ಕಾರ್ಯ. ಸಂಬಂಧಿಕರಿಗಾಗಿ ವ್ಯಯ ಮಾಡುವುದರಲ್ಲಿ ದುಪ್ಪಟ್ಟು ಪುಣ್ಯವಿದೆ. ಏಕೆಂದರೆ ಅದು ದಾನವೂ ಹೌದು, ಬಂಧುತ್ವದ ಋಣ ಸಂದಾಯವೂ ಹೌದು." **(ತಿರ್ಮಿದಿ, ನಸಾಈ, ದಾರಿಮಿ)**

## ಮುಸ್ಲಿಮೇತರರ ಹಕ್ಕುಗಳು

ನಾವು ಈಗಾಗಲೇ ಹಲವು ಬಾರಿ ಒತ್ತಿ ಹೇಳಿರುವಂತೆ, ಮನುಷ್ಯರಿಗೆ ಸಂಬಂಧಿಸಿದ ನಮ್ಮ ಬಾಧ್ಯತೆಗಳ ವಿಷಯದಲ್ಲಿ ಮುಸ್ಲಿಮ್ ಮತ್ತು ಮುಸ್ಲಿಮೇತರ ಎಂಬ ತಾರತಮ್ಯ ಇಲ್ಲ. ಮನುಷ್ಯರೆಂಬ ನೆಲೆಯಲ್ಲಿ ಎಲ್ಲರೂ ನಮ್ಮ ಸದ್ವರ್ತನೆ, ಕರುಣೆ ಮತ್ತು ನ್ಯಾಯಶೀಲತೆಗೆ ಅರ್ಹರು. ಪ್ರತಿಯೊಬ್ಬ ಬಡ, ಅಸಹಾಯಕ ವ್ಯಕ್ತಿ-ಅವನು ಬಡವ ಮತ್ತು ಅಸಹಾಯಕ ನೆಂಬ ಒಂದೇ ಕಾರಣಕ್ಕಾಗಿ ನಮ್ಮ ನೆರವನ್ನು ಪಡೆಯಲು ಹಕ್ಕುಳ್ಳ ವನಾಗುತ್ತಾನೆ. ಅದೇ ರೀತಿ ನಮ್ಮ ಪ್ರತಿಯೊಬ್ಬ ನೆರೆವಾಸಿ ಮತ್ತು ಪ್ರತಿಯೊಬ್ಬ ಸಂಬಂಧಿಕ- ಅವನು ಮುಸ್ಲಿಮನಾಗಿದ್ದರೂ ಮುಸ್ಲಿಮೇತರನಾಗಿದ್ದರೂ ನಮ್ಮ ಅತ್ಯುತ್ತಮ ವರ್ತನೆಗೆ ಅರ್ಹನಾಗುತ್ತಾನೆ. ಈ ಕುರಿತು ಅಲ್ಲಾಹನ ಆದೇಶ ಹೀಗಿದೆ:

**"ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯ ಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ. ನೀವು ಧರ್ಮದ ವಿಷಯದಲ್ಲಿ ನಿಮ್ಮ ವಿರುದ್ಧ ಯುದ್ಧ ಮಾಡಿರುವ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರುವ ಮತ್ತು ನಿಮ್ಮನ್ನು ಹೊರ ಹಾಕುವ ವಿಷಯದಲ್ಲಿ ಪರಸ್ಪರ ಸಹಕರಿಸಿರುವ ಜನರೊಂದಿಗೆ ಸ್ನೇಹ ಬೆಳೆಸು ವುದರಿಂದ ಮಾತ್ರ ಅಲ್ಲಾಹನು ನಿಮ್ಮನ್ನು ತಡೆಯುತ್ತಾನೆ. ಅವರೊಂದಿಗೆ ಸ್ನೇಹ ಬೆಳೆಸುವವರೇ ಅಕ್ರಮಿಗಳು." (ಪವಿತ್ರ ಕುರ್‌ಆನ್, 60:8-9)**

ಪವಿತ್ರ ಕುರ್‌ಆನಿನ 'ಮುಮ್ತಹಿನಃ' ಎಂಬ ಅಧ್ಯಾಯದ ಈ ವಾಕ್ಯಗಳಲ್ಲಿ ಮುಸ್ಲಿಮರು ತಾವು ಮುಸ್ಲಿಮರೆಂಬ ಕಾರಣಕ್ಕಾಗಿಯೇ ತಮ್ಮ ವಿರುದ್ಧ ಯುದ್ಧ ಸಾರಿದ, ತಮ್ಮನ್ನು ತಮ್ಮ ನಿವಾಸಗಳಿಂದ ಹೊರ ಹಾಕಿದ ಮತ್ತು ಹೊರ ಹಾಕಲು ಇತರ ಶತ್ರುಗಳಿಗೆ ನೆರವಾದಂತಹ ಮುಸ್ಲಿಮೇತರರ ಜೊತೆ ಸಂಬಂಧ ಬೆಳೆಸಬಾರದು ಎಂದು ಆದೇಶಿಸಲಾಗಿದೆ. ಮೇಲ್ನೋಟದಲ್ಲೇ ಸ್ಪಷ್ಟವಾಗಿ ಗೋಚರಿಸುವಂತೆ ಇದು ಯುದ್ಧ ಕಾಲಕ್ಕೆ ಮತ್ತು ಮುಸ್ಲಿಮರ ವಿರುದ್ಧ ಯುದ್ಧ ನಿರತರಾಗಿರುವ ಮುಸ್ಲಿಮೇತರರಿಗೆ ಸಂಬಂಧಿಸಿದ ಆದೇಶಗಳಾಗಿವೆ. ಆದರೆ ಈ ಸಂದಿಗ್ಧ ಸನ್ನಿವೇಶದಲ್ಲೂ ಸಾಮಾನ್ಯ ಮುಸ್ಲಿಮೇತರರ ಜೊತೆ ಸದ್ವರ್ತನೆ ಮತ್ತು ನ್ಯಾಯಪಾಲನೆ ಮಾಡದಂತೆ ನಿಮ್ಮನ್ನು ತಡೆಯುವುದಿಲ್ಲ ಎಂದು ಸ್ಪಷ್ಟಪಡಿಸಲಾಗಿದೆ. ಅಲ್ಲದೆ ಅಲ್ಲಾಹನು ನ್ಯಾಯಶೀಲರನ್ನೇ

ಮೆಚ್ಚುತ್ತಾನೆ ಎಂದು ಪ್ರತ್ಯೇಕ ಹೇಳುವ ಮೂಲಕ, ಅಂಥ ಮುಸ್ಲಿಮೇತರರ ಜೊ ನ್ಯಾಯವನ್ನೇ ಪಾಲಿಸಬೇಕೆಂದು ಪ್ರೋತ್ಸಾಹಿಸಲಾಗಿದೆ. ಇಲ್ಲಿ ಇನ್ನೊಂದು ಮಾತು ಬಹ ಗಮನಾರ್ಹ. ಅದೇನೆಂದರೆ ಅಲ್ಲಾಹನು ಈ ವಾಕ್ಯಗಳಲ್ಲಿ ಮುಸ್ಲಿಮರ ವಿರು ಯುದ್ಧ ನಿರತರಾಗಿರುವ ಅಥವಾ ಅವರ ಶತ್ರುಗಳಾಗಿ ಬಿಟ್ಟಿರುವ ಮುಸ್ಲಿಮೇತರ ಜೊತೆ ಕೂಡಾ ನ್ಯಾಯ ಪಾಲಿಸದಂತೆ ಅಥವಾ ಅವರ ಜೊತೆ ಸದ್ವರ್ತನೆ ತೋರ ದಂ ಮುಸ್ಲಿಮರನ್ನು ತಡೆದಿಲ್ಲ. ಕೇವಲ, ಅಂಥವರ ಜೊತೆ ಸ್ನೇಹ ಮಾಡಬಾರದು ಮತ ಇಸ್ಲಾಮ್ ಹಾಗೂ ಮುಸ್ಲಿಮ್ ಸಮಾಜಕ್ಕೆ ಹಾನಿಕಾರಕವಾಗುವ ರೀತಿಯಲ್ಲಿ ಅವ ಜೊತೆ ನಿಕಟತೆ ಬೆಳೆಸಿಕೊಳ್ಳಬಾರದೆಂದು ಮಾತ್ರ ಆದೇಶಿಸಿರುವನು.

ಮುಸ್ಲಿಮೇತರರು ಮುಸ್ಲಿಮರಿಗೆ ಅನ್ಯಾಯ ಮಾಡಿದರೆ ಮುಸ್ಲಿಮರ ಧೋರ ಏನಾಗಿರಬೇಕು ಎಂಬ ಕುರಿತು ಪವಿತ್ರ ಕುರ್‌ಆನ್ ಹೀಗೆ ಹೇಳಿದೆ:

**"ಅವರ ಮೇಲೆ ಅತಿರೇಕವೆಸಗಲ್ಪಟ್ಟರೆ ಅದನ್ನು ಪ್ರತಿರೋಧಿಸುತ್ತಾರೆ: ಕೆಡುಕಿ ಪ್ರತಿಫಲ ಅದಕ್ಕೆ ಸಮಾನವಾದ ಕೆಡುಕಾಗಿದೆ. ಇನ್ನು ಯಾರಾದರೂ ಕ್ಷಮಿಸಿಬಿಟ್ಟರೆ ಹಾಗ ಸುಧಾರಿಸಿಕೊಂಡರೆ ಅದರ ಪ್ರತಿಫಲದ ಹೊಣೆ ಅಲ್ಲಾಹನ ಮೇಲಿದೆ. ನಿಶ್ಚಯವಾಗಿಯ ಅವನು ಅಕ್ರಮಿಗಳನ್ನು ಮೆಚ್ಚುವುದಿಲ್ಲ. ತಮ್ಮ ಮೇಲೆ ಅಕ್ರಮವಾದ ಬಳಿಕ ಪ್ರತೀಕಾರವೆಸ ದವರನ್ನು ಆಕ್ಷೇಪಿಸಲಾಗದು. ವಾಸ್ತವದಲ್ಲಿ ಇತರರ ಮೇಲೆ ಅಕ್ರಮವೆಸಗುವವರು ಮತ ಭೂಮಿಯಲ್ಲಿ ಅನ್ಯಾಯವಾಗಿ ಅತಿರೇಕವೆಸಗುವವರೇ ಆಕ್ಷೇಪಕ್ಕೆ ಅರ್ಹರು. ಇಂತಹವರಿ ವೇದನಾಯುಕ್ತ ಯಾತನೆ ಇದೆ. ಆದರೆ ಯಾರಾದರೂ ಸಹನೆಯಿಂದ ವರ್ತಿಸಿದರೆ ಹಾಗ ಕ್ಷಮಿಸಿದರೆ ಇದೊಂದು ಮಹಾ ಸಾಹಸದ ಕಾರ್ಯಗಳಲ್ಲಾಗುವುದು."** (42:39-4

ಈ ದಿವ್ಯ ವಾಕ್ಯಗಳಿಂದ ವ್ಯಕ್ತವಾಗುವಂತೆ, ಅನ್ಯಾಯ ಮಾಡುವವರು ಮುಸ್ಲಿ ರಾಗಲಿ, ಮುಸ್ಲಿಮೇತರರಾಗಿರಲಿ ಅಲ್ಲಾಹನ ದೃಷ್ಟಿಯಲ್ಲಿ ಅದು ಅತ್ಯಂತ ಅಪ್ರಿಯವಾ ಕೃತ್ಯವಾಗಿದೆ. ಎರಡನೆಯದಾಗಿ ಮುಸ್ಲಿಮೇತರನೊಬ್ಬನು ಒಬ್ಬ ಮುಸ್ಲಿಮನಿಗೆ ಅನ್ಯಾ ವೆಸಗಿದರೆ ಅವನಿಗೆ ತನ್ನ ಮೇಲೆ ಆದ ಅನ್ಯಾಯದಷ್ಟೇ ಪ್ರತೀಕಾರ ಪಡೆಯು ಅಧಿಕಾರವಿದೆ. ಆದರೂ ಅವನು ಪ್ರತೀಕಾರವೆಸಗುವ ಬದಲು ಅನ್ಯಾಯ ಮಾಡಿದವನನ ಉದಾರವಾಗಿ ಕ್ಷಮಿಸಿಬಿಟ್ಟರೆ ಈ ಮೂಲಕ ಅವನು ಒಂದು ಉನ್ನತ ಚಾರಿತ್ರ್ಯ ಮತ ಸೌಜನ್ಯವನ್ನು ಪ್ರದರ್ಶಿಸಿದಂತಾಗುತ್ತದೆ. ಈ ಮಾತನ್ನೇ ಪವಿತ್ರ ಕುರ್‌ಆನಿನ ಇತರ ಕೆಲ ಅಧ್ಯಾಯಗಳಲ್ಲೂ ಹೇಳಲಾಗಿದೆ.

'ಅಶ್ಶೂರಾ' ಅಧ್ಯಾಯವು ಮಕ್ಕಾದಲ್ಲಿ ಅವತೀರ್ಣಗೊಂಡಿದ್ದು, ಅದರಲ್ಲಿ ನೀ ಲಾಗಿರುವ ಆದೇಶಗಳು ಕೇವಲ 'ದಅ್‌ವತ್'(ಧರ್ಮಪ್ರಚಾರ)ನ ಹಂತಕ್ಕೆ ಮಾ ಸೀಮಿತವಾಗಿವೆಯೆಂದೂ ಮದೀನಾ ಪಟ್ಟಣಕ್ಕೆ ತಲುಪಿದ ಬಳಿಕ ಮುಸ್ಲಿಮರಿಗೆ, ಮಕ್ಕಾ ಸತ್ಯಧಿಕ್ಕಾರಿಗಳ ಯುದ್ಧ ಘೋಷಣೆಗೆ ಪ್ರತಿಯಾಗಿ ಯುದ್ಧ ಘೋಷಣೆ ಮಾಡಬೇಕೆಂ ಆದೇಶ ನೀಡಲಾಯಿತೆಂದೂ ಯಾರಾದರೂ ವಾದಿಸಬಹುದು. ಅಲ್ಲದೆ "ಯಾರ ವಿರು ಯುದ್ಧ ನಡೆಸಲಾಗುತ್ತಿದೆಯೋ ಅವರಿಗೆ ಅನುಮತಿ ನೀಡಲಾಗಿದೆ. ಏಕೆಂದರೆ ಅವ

ರ್ದಿತರು. ಮತ್ತು ನಿಶ್ಚಯವಾಗಿಯೂ ಅಲ್ಲಾಹನು ಅವರಿಗೆ ಸಹಾಯ ಮಾಡಲು ಮರ್ಥನು." ಎಂಬ ವಾಕ್ಯ (ಪವಿತ್ರ ಕುರ್‌ಆನ್, 22:39)ವನ್ನೂ ಅವರು ಉದ್ಧರಿಸಬಹುದು. ದರ ಆಧಾರದಲ್ಲಿ ಅವರು, ಈ ವಾಕ್ಯದ ಅವತೀರ್ಣದ ಬಳಿಕ ಈ ಹಿಂದೆ ನೀಡಲಾದ, ್ಯಾಯ ಪಾಲಿಸಬೇಕು ಮತ್ತು ಸದ್ವರ್ತನೆ ತೋರಬೇಕು' ಎಂಬ ಆದೇಶಗಳು ಅನೂರ್ಜಿತ ೊಳ್ಳುತ್ತದೆಂದೂ ತರ್ಕಿಸಬಹುದು. ಆದರೆ ಈ ತರ್ಕ ಸರಿಯಲ್ಲ.

ಏಕೆಂದರೆ ಮೂಲತಃ ಭಾರತದಲ್ಲಿ ನಾವಿನ್ನೂ 'ದಅ್‌ವತ್' (ಧರ್ಮ ಪ್ರಚಾರ)ನ ಂತದಲ್ಲೇ ಇದ್ದೇವೆ. ಆ ಹಂತ ದಾಟಿಲ್ಲ. ಎರಡನೆಯದಾಗಿ ಮದೀನಾದಲ್ಲೇ ಅವತೀರ್ಣ ೊಂಡ 'ಅಲ್ ಬಕರಃ' ಅಧ್ಯಾಯದಲ್ಲಿ ಯುದ್ಧಕ್ಕೆ ಅನುಮತಿ ಕೊಡುವುದರ ಜೊತೆಗೇ ್ಯಾಯಪಾಲನೆ ಮಾಡಬೇಕೆಂಬ ಆದೇಶವನ್ನೂ ಕೊಡಲಾಗಿದೆ.

**"ನಿಮ್ಮೊಡನೆ ಯುದ್ಧ ಮಾಡುವವರೊಂದಿಗೆ ನೀವೂ ಅಲ್ಲಾಹನ ಮಾರ್ಗದಲ್ಲಿ ಯುದ್ಧ ಾಡಿರಿ. ಆದರೆ ಅತಿಕ್ರಮಿಸಬೇಡಿರಿ. ಅಲ್ಲಾಹನು ಅತಿಕ್ರಮಿಸುವವರನ್ನು ಮೆಚ್ಚುವುದಿಲ್ಲ." (2:190)**

ಸ್ವಲ್ಪ ಮುಂದುವರಿದು ಮತ್ತೆ ಹೀಗೆ ಹೇಳಲಾಗಿದೆ.

**"ನಿಮ್ಮ ಮೇಲೆ ಕೈ ಮಾಡಿದವರ ಮೇಲೆ ನೀವೂ ಅದೇ ರೀತಿಯಲ್ಲಿ ಕೈ ಮಾಡಿರಿ. ಆದರೆ ಲ್ಲಾಹನ ಭಯವಿರಿಸಿಕೊಳ್ಳಿರಿ. ಅಲ್ಲಾಹನು ಸೀಮೋಲ್ಲಂಘನೆಯನ್ನು ಮಾಡದವರೊಂದಿಗೆ ಾತ್ರವಿರುತ್ತಾನೆಂಬುದನ್ನು ನೀವು ತಿಳಿದಿರಬೇಕು." (ಪವಿತ್ರ ಕುರ್‌ಆನ್, 2:194)**

ಅಂದರೆ ಪ್ರತೀಕಾರ ಪಡೆಯುವಾಗಲೂ ಅಲ್ಲಾಹನ ಭಯ ಮನುಷ್ಯನ ಮನಸ್ಸಿ ಲ್ಲಿರಬೇಕು.

ಇವು ಕೇವಲ ಮುಸ್ಲಿಮೇತರರ ಕುರಿತು ಮಾತ್ರ ಇರುವ ಆದೇಶಗಳಲ್ಲ ಂಬುದನ್ನು ಇಲ್ಲಿ ಮರೆಯಬಾರದು. ಒಬ್ಬ ಮುಸ್ಲಿಮನು ಇನ್ನೊಬ್ಬ ಮುಸ್ಲಿಮನ ೀಲೆ ಅನ್ಯಾಯ ಮಾಡಿದರೆ ಆಗಲೂ ಇದೇ ನಿಯಮಗಳು ಅನ್ವಯಿಸುತ್ತವೆ. ಆಗಲೂ ಕ್ರಮಕ್ಕೊಳಗಾದ ವ್ಯಕ್ತಿಗೆ ಅಕ್ರಮ ಮಾಡಿದವನ ವಿರುದ್ಧ ಪ್ರತೀಕಾರವೆಸಗಲು ಅವಕಾಶ ಡಲಾಗುವುದು. ಆದರೆ ಅಲ್ಲೂ ತಪ್ಪಿತಸ್ಥನನ್ನು ಶಿಕ್ಷಿಸುವ ಬದಲು ಕ್ಷಮಿಸುವುದನ್ನೇ ಚ್ಚು ಪ್ರಶಂಸನೀಯ ಕ್ರಮವೆಂದು ಪರಿಗಣಿಸಲಾಗುತ್ತದೆ.

'ಅಲ್ ಬಕರಃ' ಅಧ್ಯಾಯದಂತೆ 'ಅಲ್ ಮಾಇದಃ' ಅಧ್ಯಾಯ ಕೂಡಾ ದೀನಾದಲ್ಲಿ ಅವತೀರ್ಣಗೊಂಡಿದೆ. ಈ ಅಧ್ಯಾಯದಲ್ಲಿ ಮುಸ್ಲಿಮರ ವಿರುದ್ಧ ತ್ರುತ್ವವುಳ್ಳ ಮುಸ್ಲಿಮೇತರರ ಬಗ್ಗೆ ಹೀಗೆ ಹೇಳಲಾಗಿದೆ:

"ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖ ಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣ ಾಗಿರುತ್ತದೆ. ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ. ನೀವು ಮಾಡುತ್ತಿರುವುದನ್ನೆಲ್ಲ ಲ್ಲಾಹನು ಚೆನ್ನಾಗಿ ಅರಿಯುವವನಾಗಿದ್ದಾನೆ." (5:8)

ಇದು ಶತ್ರುಗಳಾಗಿ ಬಿಟ್ಟಿರುವ ಮುಸ್ಲಿಮೇತರರ ಬಗ್ಗೆ ಇರುವ ಆದೇಶ. ಶತ್ರು ಗಳಿಗೂ ಅನ್ಯಾಯ ಮಾಡಬಾರದೆನ್ನುವ ಉನ್ನತ ಧರ್ಮವು ಶತ್ರುಗಳಲ್ಲದ ಸಾಮಾನ್ಯ ಮುಸ್ಲಿಮೇತರರಿಗೆ ಅನ್ಯಾಯ ಮಾಡುವುದನ್ನು ಹೇಗೆ ತಾನೇ ಅನುಮತಿಸಬಲ್ಲುದು? ಈ ನಿಟ್ಟಿನಲ್ಲಿ ಪವಿತ್ರ ಕುರ್‌ಆನಿನ ಈ ಕೆಳಗಿನ ಆದೇಶ ಕೂಡಾ ಸದಾ ಸ್ಮರಣೀಯವಾಗಿದೆ

**"ಒಳಿತು ಮತ್ತು ಕೆಡುಕು ಸರಿಸಮಾನವಲ್ಲ. ನೀವು ಕೆಡುಕನ್ನು ಅತ್ಯುತ್ತಮ ಒಳಿತಿನ ಮೂಲಕ ದೂರೀಕರಿಸಿರಿ. ನಿಮ್ಮೊಂದಿಗೆ ಹಗೆತನ ಕಟ್ಟಿಕೊಂಡವನು ನಿಮ್ಮ ಆಪ್ತ ಮಿತ್ರನಾಗಿ ಬಿಡುವುದನ್ನು ನೀವು ಕಾಣುವಿರಿ."** **(41:34**

## ಮುಸ್ಲಿಮರ ಹಕ್ಕುಗಳು

ಸಂಬಂಧಗಳ ಪೈಕಿ ಇಸ್ಲಾಮೀ ಭ್ರಾತೃತ್ವದ ಮತ್ತು ಸತ್ಯವಿಶ್ವಾಸದ ಸಂಬಂಧವೇ ಅತ್ಯಂತ ಗಾಢ, ಅರ್ಥಪೂರ್ಣ ಹಾಗೂ ಅಭೇದ್ಯವಾದ ಸಂಬಂಧ. ಈ ಸಂಬಂಧವು ಕಡು ಶತ್ರುಗಳನ್ನು ಕೂಡಾ ಪರಸ್ಪರ ಆಪ್ತ ಮಿತ್ರರಾಗಿ ಮಾರ್ಪಡಿಸಬಲ್ಲಷ್ಟು ಶಕ್ತಿಶಾಲಿಯಾಗಿದೆ ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

**"ನಿಮ್ಮ ಮೇಲೆ ಅಲ್ಲಾಹನು ಮಾಡಿದ್ದ ಆ ಉಪಕಾರವನ್ನು ಸ್ಮರಿಸಿರಿ. ನೀವು ಪರಸ್ಪರ ಶತ್ರುಗಳಾಗಿದ್ದಿರಿ. ಅವನು ನಿಮ್ಮ ಹೃದಯಗಳನ್ನು ಜೋಡಿಸಿದನು ಮತ್ತು ಅವನ ಅನುಗ್ರಹದಿಂದ ನೀವು ಸಹೋದರರಾದಿರಿ."** **(3:103**

ಸಹೋದರತೆಯ ಈ ಸಂಬಂಧವನ್ನು ಸದಾ ಸಂರಕ್ಷಿಸಬೇಕಾದುದು ಎಲ್ಲ ಮುಸ್ಲಿಮರ ಕರ್ತವ್ಯ. ಒಂದು ವೇಳೆ ಇಬ್ಬರು ಮುಸ್ಲಿಮರ ಮಧ್ಯೆ ಸಹೋದರತೆಯ ಈ ನಂಟು ದುರ್ಬಲ ವಾಗುತ್ತಿರುವಂತೆ ಕಂಡು ಬಂದರೆ ಅಥವಾ ಮುರಿದು ಹೋದರೆ ಅದರ ಮರುಸ್ಥಾಪನೆಗೆ ಶ್ರಮಿಸಬೇಕಾದುದು ಉಳಿದೆಲ್ಲ ಮುಸ್ಲಿಮರ ಹೊಣೆಗಾರಿಕೆಯಾಗಿದೆ. ಪವಿತ್ರ ಕುರ್‌ಆನಿನ ಆದೇಶ ಗಮನಾರ್ಹ:

**"ಸತ್ಯವಿಶ್ವಾಸಿಗಳಲ್ಲಿ ಎರಡು ಗುಂಪುಗಳು ಪರಸ್ಪರ ಜಗಳಾಡಿದರೆ,[5] ಅವರ ನಡುವೆ ಸಂಧಾನ ಮಾಡಿಸಿರಿ. ಅವರಲ್ಲಿ ಒಂದು ಗುಂಪು ಇನ್ನೊಂದು ಗುಂಪಿನ ಮೇಲೆ ಅತಿರೇಕ ವೆಸಗಿದರೆ, ಅತಿರೇಕವೆಸಗಿದವರು ಅಲ್ಲಾಹನ ಆದೇಶದೆಡೆಗೆ ಮರಳಿ ಬರುವವರೆಗೂ ಅವರ ವಿರುದ್ಧ ಹೋರಾಡಿರಿ. ತರುವಾಯ ಅವರು ಮರಳಿ ಬಂದರೆ, ಅವರ ಮಧ್ಯೆ ನ್ಯಾಯಪೂರ್ಣ ಸಂಧಾನ ಮಾಡಿಸಿಬಿಡಿರಿ ಮತ್ತು ನ್ಯಾಯವನ್ನು ಪಾಲಿಸಿರಿ. ಅಲ್ಲಾಹನು ನ್ಯಾಯ ಪರಿಪಾಲಕರನ್ನು ಪ್ರೀತಿಸುತ್ತಾನೆ. ಸತ್ಯವಿಶ್ವಾಸಿಗಳಂತು ಪರಸ್ಪರ ಸಹೋದರರು. ಆದುದರಿಂದ ನಿಮ್ಮ ಸಹೋದರರ ನಡುವೆ ಸಂಬಂಧಗಳನ್ನು ಸರಿಪಡಿಸಿರಿ ಮತ್ತು ಅಲ್ಲಾಹನಿಗೆ ಭಯಪಡಿರಿ ನಿಮ್ಮ ಮೇಲೆ ಕೃಪೆ ತೋರಲಾಗುವುದೆಂದು ನಿರೀಕ್ಷಿಸಬಹುದು."** **(49:9-10**

ಮುಸ್ಲಿಮರ ಮಧ್ಯೆ ವಿವಾದವೇನಾದರೂ ತಲೆದೋರಿದಾಗ ಅದನ್ನು ಬಗೆಹರಿಸಲು ಶ್ರಮಿಸಬೇಕೆಂದು ಆಗ್ರಹಿಸುವ ಇಸ್ಲಾಮ್ ಧರ್ಮವು ಮೂಲತಃ ಸಂಬಂಧಗಳ

ರ್ಬಲಗೊಳ್ಳುವುದಕ್ಕೆ ಕಾರಣವಾಗುವ ಅಂಶಗಳನ್ನೇ ಹತ್ತಿಕ್ಕುವ ನಿಟ್ಟಿನಲ್ಲೂ ಗಮನ ರಿಸಿದೆ. ಪವಿತ್ರ ಕುರ್‌ಆನಿನ ಈ ಕೆಳಗಿನ ವಾಕ್ಯದಿಂದ ಸ್ಪಷ್ಟವಾಗುತ್ತದೆ :

"ಸತ್ಯವಿಶ್ವಾಸಿಗಳೇ, ಪುರುಷರು ಇತರ ಪುರುಷರನ್ನು ಅಪಹಾಸ್ಯ ಮಾಡಬಾರದು. ವರು ಇವರಿಗಿಂತ ಉತ್ತಮರಿರಲೂಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನೂ ಪಹಾಸ್ಯಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು. ಪರಸ್ಪರರನ್ನು ಂದಿಸಬೇಡಿರಿ ಮತ್ತು ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ. ತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಕರ್ಮಭ್ರಷ್ಟತೆಯಲ್ಲಿ ಹೆಸರು ಗಳಿಸುವುದು ಬಹಳ ಟ್ಟಿದು. ಈ ನಿಲುಮೆಯನ್ನು ತೊರೆಯದವರು ಅಕ್ರಮಿಗಳಾಗಿರುವರು. ಸತ್ಯವಿಶ್ವಾಸಿಗಳೇ, ಚ್ಚಿನ ಗುಮಾನಿಗಳಿಂದ ದೂರವಿರಿ. ನಿಶ್ಚಯವಾಗಿಯೂ ಕೆಲವು ಗುಮಾನಿಗಳು ಪಾಪ ಾಗಿವೆ. ದೋಷಾನ್ವೇಷಣೆ ಮಾಡದಿರಿ. ನಿಮ್ಮಲ್ಲಿ ಯಾರೂ ಯಾರ ಬಗ್ಗೆಯೂ ರದೂಷಣೆ ಮಾಡಬಾರದು. ನಿಮ್ಮಲ್ಲಿ ಯಾರಾದರೂ ತನ್ನ ಮೃತ ಸಹೋದರನ ಾಂಸ ತಿನ್ನುವುದನ್ನು ಇಷ್ಟಪಡುವನೇ? ನೀವು ಸ್ವತಃ ಇದನ್ನು ಅಸಹ್ಯಪಡುತ್ತೀರಿ. ಲ್ಲಾಹನನ್ನು ಭಯಪಡಿರಿ, ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ರುಣಾನಿಧಿಯೂ ಆಗಿರುತ್ತಾನೆ." (49:11-12)

ಈ ವಾಕ್ಯದಲ್ಲಿ ಸತ್ಯವಿಶ್ವಾಸಿಗಳ ಪರಸ್ಪರ ಸಂಬಂಧಗಳನ್ನು ದುರ್ಬಲಗೊಳಿಸುವ ಾರಕ ಅಂಶಗಳನ್ನು ಒಂದೊಂದಾಗಿ ಗುರುತಿಸಲಾಗಿದೆ. ಇವೆಲ್ಲ ನಿಜವಾಗಿ ಅನೈತಿಕ ೃತ್ಯಗಳಾಗಿದ್ದು, ಈ ಕೃತ್ಯಗಳನ್ನೆಸಗುವವರು ತಮ್ಮ ಅಂತರಂಗ-ಬಹಿರಂಗಗಳನ್ನೂ ಇಹ-ರಗಳನ್ನೂ ನಾಶ ಮಾಡಿಕೊಂಡಂತಾಗುತ್ತದೆ. ಈ ಕೃತ್ಯಗಳನ್ನೆಸಗುವವನು ತನ್ನ ಹೋದರನಿಗೆ ಅನ್ಯಾಯ ಮಾಡಿದಂತಾಗುವುದಲ್ಲದೆ ಸ್ವತಃ ತನ್ನ ಮೇಲೆಯೇ ದೊಡ್ಡ ಕ್ರಮವೆಸಗಿದಂತಾಗುತ್ತದೆ. ಮಾನವ ಪ್ರಕೃತಿಗೆ ಭೂಷಣವಲ್ಲದ ಈ ಗುಣಗಳನ್ನು ಉತ್ತಮ ಕೃತಿಯುಳ್ಳ ಎಲ್ಲ ಮಾನವರೂ ಸ್ವಾಭಾವಿಕವಾಗಿ ದ್ವೇಷಿಸುತ್ತಾರೆ. ಈ ಗುಣಗಳು ತ್ಯವಿಶ್ವಾಸಕ್ಕೂ ತದ್ವಿರುದ್ಧವಾಗಿದೆ.

ಮೇಲು-ಕೀಳೆಂಬ ಭಾವನೆ ಮತ್ತು ವಂಶ-ಪರಂಪರೆಗಳಿಗೆ ಸಂಬಂಧಿಸಿದ ರಭಿಮಾನಗಳು ಕೂಡಾ ಇಸ್ಲಾಮೀ ಭ್ರಾತೃತ್ವಕ್ಕೆ ಮಾರಕವಾಗಿವೆ. ಆದ್ದರಿಂದಲೇ ಪವಿತ್ರ ರ್‌ಆನಿನಲ್ಲಿ ಪ್ರಸ್ತುತ ಆದೇಶಗಳ ಬೆನ್ನಿಗೇ ಮಾನವರೆಲ್ಲರೂ ಒಂದೇ ತಂದೆ-ತಾಯಿಗೆ ಿಸಿದ ಏಕೋದರ ಸಹೋದರರೆಂದೂ ಮೂಲತಃ ಅವರ ಕುಲ, ಗೋತ್ರ, ಜನಾಂಗವೆಲ್ಲಾ ಂದೇ ಎಂದೂ ಅವರ ಮಧ್ಯೆ ಮೇಲು-ಕೀಳೆಂಬ ಭೇದವಿಲ್ಲವೆಂದೂ ಯಾರು ಅತಿ ಹೆಚ್ಚು ವಭಕ್ತರೋ ಅವರೇ ಅಲ್ಲಾಹನ ದೃಷ್ಟಿಯಲ್ಲಿ ಗೌರವಾರ್ಹರೆಂದೂ ವ್ಯಕ್ತವಾಗಿ ಸಾರಲಾಗಿದೆ.

"ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟು ಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಟ್ಟುಕೊಳ್ಳಲಿಕ್ಕಾಗಿ ನಿಮ್ಮ

ಜನಾಂಗಗಳನ್ನೂ ಗೋತ್ರಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು." (49:

ಪವಿತ್ರ ಕುರ್‌ಆನಿನ ಇತರ ಅಧ್ಯಾಯಗಳಲ್ಲೂ ಸತ್ಯವಿಶ್ವಾಸಿಗಳ ಪರಸ್ಪರ ಬಾಂಧವ್ಯಕ್ಕೆ ಒತ್ತು ಕೊಡಲಾಗಿದೆ:

"ಸತ್ಯವಿಶ್ವಾಸಿ ಪುರುಷರು ಮತ್ತು ಸತ್ಯವಿಶ್ವಾಸಿ ಸ್ತ್ರೀಯರು ಇವರೆಲ್ಲ ಪರಸ್ಪರ ಆಪ್ತರು." (9:

ಪವಿತ್ರ ಕುರ್‌ಆನ್, ಮುಸ್ಲಿಮರಲ್ಲಿ ಪರಸ್ಪರ ಸ್ನೇಹಾನುಕಂಪವನ್ನು ಕ ಬಯಸುತ್ತದೆ. ಆದ್ದರಿಂದ ಅದು ಅವರನ್ನು ಹೀಗೆ ಚಿತ್ರಿಸಿದೆ:

"ಅವರು ಪರಸ್ಪರ ಬಹಳ ಕರುಣಾಳುಗಳೂ ಆಗಿರುತ್ತಾರೆ." (48:

"ಅವರು ಸತ್ಯವಿಶ್ವಾಸಿಗಳೊಂದಿಗೆ ವಿನಮ್ರರೂ ಸತ್ಯನಿಷೇಧಿಗಳೊಂ ಕಠೋರರೂ ಆಗಿರುವರು." (5:

ಇನ್ನೊಂದೆಡೆ ಪವಿತ್ರ ಕುರ್‌ಆನ್ ಮುಸ್ಲಿಮರ ಪರಸ್ಪರ ನಿಕಟ ಬಾಂಧವ್ಯವ ವರ್ಣಿಸಲು ಅವರನ್ನು 'ಉಕ್ಕಿನ ಎರಕ ಹೊಯ್ದ ಗೋಡೆ' ಎಂದು ಬಣ್ಣಿಸಿದೆ:

"ಅಲ್ಲಾಹನಿಗಂತು, ಅವನ ಮಾರ್ಗದಲ್ಲಿ ಸೀಸದ ಎರಕ ಹೊಯ್ದ ಉ ಗೋಡೆಯೋ ಎಂಬಂತೆ ಪಂಕ್ತಿಬದ್ಧರಾಗಿ ಹೋರಾಡುವವರೇ ಪ್ರಿಯರು." (61

ಪ್ರವಾದಿ ಮುಹಮ್ಮದ್(ಸ) ತಮ್ಮ ಅನೇಕ ವಚನಗಳಲ್ಲಿ, ಮುಸ್ಲಿಮರ ಹ ಬಾಧ್ಯತೆಗಳನ್ನು ಅತ್ಯುತ್ತಮವಾಗಿ ತಿಳಿಯಪಡಿಸಿರುವರು. ಆ ವಚನ ಪ್ರಸ್ತುತ ಕುರ್‌ ವಾಕ್ಯಗಳ ವಿವರಣೆಯೆಂದೂ ಪರಿಗಣಿಸಬಹುದು. ನಾವಿಲ್ಲಿ ಅಂತಹ ಕೆಲವು ಸವ ವಚನಗಳನ್ನು ಮುಂದಿಡುತ್ತಿದ್ದೇವೆ. ಪ್ರವಾದಿ(ಸ) ಹೇಳಿದರು:

"ಯಾರ ನಾಲಿಗೆ ಮತ್ತು ಕೈಯಿಂದ ಇತರ ಮುಸ್ಲಿಮರು ಸುರಕ್ಷಿತರೋ ಅ ನಿಜವಾದ ಮುಸ್ಲಿಮ್." (ಬುಖಾರಿ, ಮುಸ್ಲಿ

ಇಸ್ಲಾಮ್ ಸಂಪೂರ್ಣ ಮಾನವಕುಲಕ್ಕೆ ಶಾಂತಿ ಮತ್ತು ಸಂರಕ್ಷಣೆಯ ಸಂದೇಶವಾ ಪ್ರವಾದಿ(ಸ) ತಮ್ಮ ಕಾಲದ ದೊರೆಗಳನ್ನು ಇಸ್ಲಾಮ್ ಧರ್ಮದ ಕಡೆಗೆ ಆಹ್ವಾನಿ ಬರೆದ ಪತ್ರಗಳಲ್ಲಿ "ಇಸ್ಲಾಮ್ ಧರ್ಮವನ್ನು ಸ್ವೀಕರಿಸಿರಿ, ನೀವು ಸುರಕ್ಷಿತರಾಗುವಿರಿ" ಎ ಬರೆಯುತ್ತಿದ್ದರು. ಈ ರೀತಿ ಇಸ್ಲಾಮಿನ ವೃತ್ತವನ್ನು ಪ್ರವೇಶಿಸುವವರಿಗೆ ಪ್ರವಾದಿ(ಸ) ಭರ ನೀಡಿದ ಸುರಕ್ಷಿತತೆಯ ವಾತಾವರಣ ಪ್ರಾಪ್ತವಾಗಬೇಕಾದುದು ಅತ್ಯಗತ್ಯ. ತ ಮುಸ್ಲಿಮನೆಂದು ಹೇಳಿಕೊಳ್ಳುವ ಒಬ್ಬ ವ್ಯಕ್ತಿ ತನ್ನ ಮಾತು ಅಥವಾ ಕೃತಿಯಿಂದ ತನ್ನ ಇನ್ನೊಬ್ಬ ಸತ್ಯ ವಿಶ್ವಾಸಿಗೆ ಶಾಂತಿ ಮತ್ತು ಸಂರಕ್ಷಣೆಯ ಬದಲು ಕಿರುಕುಳ ಮತ್ತು ಉಪ ಕೊಡುತ್ತಾನೆಂದಾದರೆ ಅವನು ಆ ಮೂಲಕ ತನಗೆ ಇಸ್ಲಾಮ್ ಎಂಬ ಶಾಂತಿ ಧ ದೊಂದಿಗೆ ಸಂಬಂಧವೇ ಇಲ್ಲವೆಂಬುದನ್ನು ತೋರಿಸಿ ಕೊಡುತ್ತಿದ್ದಾನೆಂದೇ ಅರ್ಥ.

"ಯಾವ ವ್ಯಕ್ತಿಯ ನಾಲಗೆ ಮತ್ತು ಕೈಯಿಂದ ಇತರ ಮುಸ್ಲಿಮರು ಸುರಕ್ಷಿತ ರುವರೋ ಅವನೇ ನಿಜವಾದ ಮುಸ್ಲಿಮ್" ಎಂಬ ಪ್ರವಾದಿವರ್ಯರ(ಸ) ವ

ಸಂಕ್ಷಿಪ್ತವಾದರೂ ವ್ಯಾಪಕ ಅರ್ಥವುಳ್ಳದ್ದು. ಈ ವಾಕ್ಯದಲ್ಲಿ, ಪ್ರತಿಯೊಬ್ಬ ನೈಜ ಮುಸ್ಲಿಮನು, ತನ್ನ ಯಾವುದೇ ಕೃತ್ಯದಿಂದಾಗಲೀ, ಯಾವುದೇ ಮಾತಿನಿಂದಾಗಲೀ ಇನ್ನೊಬ್ಬ ಮುಸ್ಲಿಮನಿಗೆ ಕಿಂಚಿತ್ತೂ ಸಂಕಟವಾಗದಂತೆ ಎಚ್ಚರ ವಹಿಸಬೇಕೆಂಬ ಅಪ್ಪಣೆ ಅಡಗಿದೆ.

ಇನ್ನೊಂದು ಸಂದರ್ಭದಲ್ಲಿ ಪ್ರವಾದಿ(ಸ) ಇದೇ ಮಾತನ್ನು ಇನ್ನಷ್ಟು ಒತ್ತು ನೀಡಿ ಹೀಗೆ ಹೇಳಿರುವರು:

"ನನ್ನ ಜೀವ ಯಾರ ವಶದಲ್ಲಿವೆಯೋ ಅವನಾಣೆ! ನಿಮ್ಮ ಪೈಕಿ ಯಾವ ವ್ಯಕ್ತಿಯೂ ಅವನು ಸ್ವತಃ ತನಗಾಗಿ ಬಯಸುವುದನ್ನೇ ತನ್ನ ಸಹೋದರನಿಗಾಗಿಯೂ ಬಯಸುವ ತನಕ ಸತ್ಯವಿಶ್ವಾಸಿಯಾಗಲು ಸಾಧ್ಯವಿಲ್ಲ." (ಬುಖಾರಿ, ಮುಸ್ಲಿಮ್)

ಈ ಪ್ರವಾದಿ ವಚನ ಅತ್ಯಂತ ಮಹತ್ವಪೂರ್ಣ ಹಾಗೂ ಅರ್ಥಗರ್ಭಿತವಾಗಿದೆ. ಲೋಕ-ಪರಲೋಕಗಳಲ್ಲಿ ಯಾವ ಹಿತ ಮತ್ತು ಸಾಫಲ್ಯವನ್ನು ನಾವು ಸ್ವತಃ ನಮಗಾಗಿ ಅಪೇಕ್ಷಿಸು ತ್ತೇವೆಯೋ ಅದನ್ನೇ ನಮ್ಮ ಇತರ ಮುಸ್ಲಿಮ್ ಸಹೋದರರಿಗಾಗಿಯೂ ಅಪೇಕ್ಷಿಸಬೇಕು. ಇದು ಪ್ರತಿಯೊಬ್ಬ ಮುಸ್ಲಿಮನ ಬಗ್ಗೆ ನಮ್ಮ ಮೇಲಿರುವ ಕರ್ತವ್ಯ. ಪ್ರಸ್ತುತ ಪ್ರವಾದಿ ವಚನದ ಪ್ರಕಾರ ಈ ಹೊಣೆ ಈಡೇರಿಸುವ ತನಕ ನಾವು ಯಾರೂ ಮುಸ್ಲಿಮ ರೆನಿಸಿಕೊಳ್ಳಲಿಕ್ಕೆ ಸಾಧ್ಯವಿಲ್ಲ.

ಹಝ್ರತ್ ತಮೀಮ್‌ದಾರೀ(ರ) ಹೀಗೆ ಉಲ್ಲೇಖಿಸಿರುವರು:

"ಒಮ್ಮೆ ಪ್ರವಾದಿ(ಸ) 'ಧರ್ಮವೆಂದರೆ ನಿಷ್ಠೆ ಮತ್ತು ಹಿತಾಕಾಂಕ್ಷೆ' ಎಂದು ಹೇಳಿದರು. ಈ ಮಾತನ್ನು ಅವರು ಮೂರು ಸಲ ಪುನರಾವರ್ತಿಸಿದರು. 'ಯಾರ ಬಗ್ಗೆ ಹಿತಾಕಾಂಕ್ಷೆ?' ಎಂದು ನಾವು ಪ್ರಶ್ನಿಸಿದೆವು. ಆಗ ಪ್ರವಾದಿ(ಸ) 'ಅಲ್ಲಾಹನಿಗೆ, ಅವನ ಗ್ರಂಥಕ್ಕೆ, ಅವನ ಸಂದೇಶವಾಹಕರಿಗೆ, ಮುಸ್ಲಿಮರ ನಾಯಕರಿಗೆ ಮತ್ತು ಮುಸ್ಲಿಮ್ ಜನಸಾಮಾನ್ಯರಿಗೆ' ಎಂದು ಉತ್ತರಿಸಿದರು." (ಮುಸ್ಲಿಮ್)

ಅರ್ಥಾತ್ ಸತ್ಯವಿಶ್ವಾಸಿಯಾದವನು ಅಲ್ಲಾಹನಿಗೂ ಅವನ ಗ್ರಂಥ ಹಾಗೂ ಅವನ ಸಂದೇಶವಾಹಕರಿಗೂ ಮುಸ್ಲಿಮರ ನೇತಾರರಿಗೂ ಮುಸ್ಲಿಮ್ ಜನಸಾಮಾನ್ಯರಿಗೂ ನಿಷ್ಠಾವಂತನಾಗಿರಬೇಕು ಮತ್ತು ಸದಾ ಶುಭ ಮತ್ತು ಒಳಿತನ್ನು ಆಶಿಸುವವನಾಗಿರಬೇಕು. ಇದುವೇ ಅವನ ಧರ್ಮದ ತಿರುಳು.

ಒಂದು ಸಂದರ್ಭದಲ್ಲಿ ಪ್ರವಾದಿ(ಸ) ಹೀಗೆ ಹೇಳಿದರು:

"ಮುಸ್ಲಿಮನು ಮುಸ್ಲಿಮನ ಸಹೋದರನಾಗಿರುತ್ತಾನೆ. ಅವನು ಅವನ ಮೇಲೆ ಸ್ವತಃ ಅನ್ಯಾಯ ಮಾಡುವುದಿಲ್ಲ. ಅವನು ಇನ್ನೊಬ್ಬರ ಅನ್ಯಾಯ ಸಹಿಸಿ ಅಸಹಾಯಕ ನಾಗಿರಲು ಬಿಟ್ಟು ಬಿಡುವುದೂ ಇಲ್ಲ. ಯಾರು ತನ್ನ ಸಹೋದರನ ಅಗತ್ಯವನ್ನು ಈಡೇರಿಸುವನೋ ಅವನ ಅಗತ್ಯವನ್ನು ಅಲ್ಲಾಹನು ಈಡೇರಿಸುವನು. (ಈ ಲೋಕದಲ್ಲಿ) ಒಬ್ಬನು ಒಬ್ಬ ಮುಸ್ಲಿಮನಿಗೆ ಎದುರಾದ ಸಂಕಷ್ಟವನ್ನು ನಿವಾರಿಸಿದರೆ ಅವನಿಗೆ ಪರಲೋಕದಲ್ಲಿ ಎದುರಾಗುವ ಸಂಕಷ್ಟಗಳನ್ನು ಅಲ್ಲಾಹನು ನಿವಾರಿಸುವನು. ಒಬ್ಬನು

ಮುಸ್ಲಿಮನ ದೌರ್ಬಲ್ಯಗಳನ್ನು ಮರೆಮಾಚಿದರೆ ಅಲ್ಲಾಹನು ಪರಲೋಕದಲ್ಲಿ ಅವ ದೌರ್ಬಲ್ಯವನ್ನು ಮರೆಮಾಚುವನು." (ಬುಖಾರಿ, ಮುಸ್ಲಿಮ್

ಒಮ್ಮೆ ಪ್ರವಾದಿ(ಸ) ಮುಸ್ಲಿಮರು ಪರಸ್ಪರ ಬಾಧ್ಯತೆಯ ಬಗ್ಗೆ ಮಾತನಾಡುತ್ತಾ ಹೀ ಹೇಳಿದರು:

"ಒಬ್ಬ ವ್ಯಕ್ತಿ ಪಾಪಿಷ್ಠನೆನಿಸಿಕೊಳ್ಳಲು ಅವನು ತನ್ನ ಮುಸ್ಲಿಮ್ ಸಹೋದರನನ ಕೀಳಾಗಿ ಕಾಣುತ್ತಾನೆಂಬ ಅಪರಾಧವೇ ಸಾಕು. ಒಬ್ಬ ಮುಸ್ಲಿಮನ ಸರ್ವಸ್ವವೂ ಇನ್ನೊ ಮುಸ್ಲಿಮನ ಪಾಲಿಗೆ ಹರಾಮ್(ನಿಷಿದ್ಧ, ಗೌರವಾರ್ಹ) ಆಗಿದೆ. ಅವರ ರಕ್ತವೂ ಸಂಪತ್ತ ಮಾನವೂ." (ಮುಸ್ಲಿಮ್

ಮುಸ್ಲಿಮರ ಪರಸ್ಪರ ಸಂಬಂಧಗಳಿಗೆ ಹಾನಿಯುಂಟು ಮಾಡಬಲ್ಲ ಗುಣಗಳನ ಪ್ರವಾದಿ(ಸ) ಸಮಗ್ರವಾಗಿ ವಿವರಿಸಿದ್ದು ಅವುಗಳಿಂದ ಸಂಪೂರ್ಣ ದೂರವಿರಬೇಕೆಂದ ಆದೇಶಿಸಿದ್ದಾರೆ:

"ಊಹಾಪೋಹಗಳಿಂದ ದೂರವಿರಿ. ಊಹಾಪೋಹವು ಒಂದು ಅತಿದೊಡ್ಡ ಮಿ ವಾಗಿದೆ. ಹೊಂಚು ಹಾಕುತ್ತಾ ಇರಬೇಡಿ. ಜನರ ರಹಸ್ಯಗಳನ್ನು ಶೋಧಿಸುತ್ತಾ ಇರಬೇ ಒಬ್ಬರನ್ನು ಇನ್ನೊಬ್ಬರ ವಿರುದ್ಧ ಉದ್ರೇಕಿಸಬೇಡಿರಿ. ಪರಸ್ಪರ ಅಸೂಯೆ ತೋರಬೇಡಿ ಪರಸ್ಪರ ಹಗೆತನವಿಟ್ಟುಕೊಳ್ಳಬೇಡಿರಿ. ಪರಸ್ಪರರನ್ನು ಖಂಡಿಸಬೇಡಿರಿ. ಅಲ್ಲಾಹನ ದಾಸರಾ ಪರಸ್ಪರ ಸಹೋದರರಾಗಿರಿ." (ಬುಖಾರಿ, ಮುಸ್ಲಿಮ್

ಇನ್ನು, ಯಾವುದಾದರೂ ಆಕಸ್ಮಿಕ ಕಾರಣದಿಂದ ಇಬ್ಬರು ಮುಸ್ಲಿಮರ ಮಧ್ಯೆ ತೀ ಭಿನ್ನಾಭಿಪ್ರಾಯ ತಲೆದೋರಿದರೆ ಆಗಲೂ ಅವರು ಪರಸ್ಪರ ಸಂಬಂಧಗಳನ್ನು ಕಡಿ ಕೊಳ್ಳಬಾರದು. ಒಂದು ವೇಳೆ ಅತ್ಯಂತ ಅನಿವಾರ್ಯ ಸನ್ನಿವೇಶದಲ್ಲಿ ಅವರು ಸಂಬಂ ಗಳನ್ನು ಕಡಿದುಕೊಂಡರೂ 3 ದಿನಕ್ಕಿಂತ ಹೆಚ್ಚು ಕಾಲ ಈ ಸ್ಥಿತಿಯಲ್ಲಿ ಮುಂದುವರಿಯ ಅವರಿಗೆ ಅನುಮತಿ ಇಲ್ಲ. ಈ ಕುರಿತು ಪ್ರವಾದಿವರ್ಯರ(ಸ) ಆದೇಶ ಹೀಗಿದೆ:

"ಯಾರಾದರೂ ತನ್ನ(ಮುಸ್ಲಿಮ್) ಸಹೋದರನಿಂದ 3 ದಿನಗಳಿಗಿಂತ ಹೆಚ್ಚು ಕಾ ಸಂಬಂಧ ಕಡಿದುಕೊಂಡಿರುವುದು, ಅಂದರೆ ಪರಸ್ಪರ ಭೇಟಿಯಾದಾಗ ಒಬ್ಬನು ಒಂದ ದಿಕ್ಕಿಗೂ ಇನ್ನೊಬ್ಬನು ಇನ್ನೊಂದು ದಿಕ್ಕಿಗೂ ಮುಖ ತಿರುಗಿಸಿಕೊಳ್ಳುವುದು ಧರ್ಮ ಸಮ್ಮತವಲ್ಲ. ಅವರ ಪೈಕಿ ಯಾರು ಮೊದಲು ಸಲಾಮ್ ಹೇಳುತ್ತಾನೋ ಅವನ ಉತ್ತಮನು." (ಬುಖಾರಿ, ಮುಸ್ಲಿಮ್

ಒಬ್ಬನು ಮುಸ್ಲಿಮನೆಂದ ಮೇಲೆ ಅವನು ಎಲ್ಲ ಅವಸ್ಥೆಗಳಲ್ಲೂ ಇನ್ನೊಬ್ಬ ಮುಸ್ಲಿಮ ಸಹಾಯಕ ಹಾಗೂ ಬೆಂಬಲಿಗನಾಗಿರುತ್ತಾನೆ. ತನ್ನ ಸಹೋದರನ ಮೇಲೆ ಅನ್ಯಾಯವಾಗುತ್ತಿದ್ದ ಆ ಅನ್ಯಾಯದಿಂದ ಅವನನ್ನು ರಕ್ಷಿಸುತ್ತಾನೆ. ಒಂದು ವೇಳೆ ಸಹೋದರನೇ ಅನ್ಯಾಯಕ್ಕಿಳಿದಿದ್ದ ಆ ಅನ್ಯಾಯ ಎಸಗದಂತೆ ಅವನನ್ನು ತಡೆಯುವ ಮೂಲಕ ಅವನನ್ನು ರಕ್ಷಿಸುತ್ತಾನೆ.

ಹಝ್ರತ್ ಅನಸ್(ರ) ಉಲ್ಲೇಖಿಸಿರುವಂತೆ ಒಮ್ಮೆ ಪ್ರವಾದಿ(ಸ), "ನೀವು ನಿಮ ಸಹೋದರನಿಗೆ ನೆರವಾಗಿರಿ. ಅವನು ಮರ್ದಿತನಾಗಿರಲಿ ಅಥವಾ ಮರ್ದಕನಾಗಿರಲಿ!" ಎಂದ

ಿದರು. ಆಗ ಓರ್ವ ವ್ಯಕ್ತಿ, "ಅಲ್ಲಾಹನ ಸಂದೇಶವಾಹಕರೇ(ಸ)! ಅವನು ಮರ್ದಿತ
ದ್ದರೆ ನಾನು ಅವನಿಗೆ ನೆರವಾಗುವೆನು. ಆದರೆ ಅವನು ಮರ್ದಕನಾಗದಿದ್ದರೆ ನಾನು
ನಿಗೆ ನೆರವಾಗಲು ಹೇಗೆ ಸಾಧ್ಯ?" ಎಂದು ಪ್ರಶ್ನಿಸಿದನು. ಆಗ ಪ್ರವಾದಿ(ಸ) "ಅವನು
ರ್ದನ ಮಾಡದಂತೆ ಅವನನ್ನು ತಡೆಯಬೇಕು - ಅದುವೇ ಅವನಿಗೆ ಮಾಡುವ ಸಹಾಯ"
ಮ ಹೇಳಿದರು.

ಒಬ್ಬ ಮುಸ್ಲಿಮನಿಗೆ ಸಂಕಟವಾದರೆ ಎಲ್ಲ ಮುಸ್ಲಿಮರೂ ಆ ಬಗ್ಗೆ ಕಾಳಜಿ ವಹಿಸಿ ಆ
ಟವನ್ನು ಹಂಚಿಕೊಳ್ಳಲು ಪ್ರಯತ್ನಿಸಬೇಕು. ಪ್ರವಾದಿ ಮುಹಮ್ಮದ್(ಸ) ಸತ್ಯವಿಶ್ವಾಸಿ
ನ್ನು ಈ ರೀತಿ ಬಣ್ಣಿಸಿದ್ದಾರೆ:

"ಸತ್ಯವಿಶ್ವಾಸಿಗಳು ಪರಸ್ಪರರ ಮೇಲೆ ಕರುಣೆ ತೋರುವುದರಲ್ಲಿ, ಪರಸ್ಪರರನ್ನು
ಿಸುವುದರಲ್ಲಿ ಮತ್ತು ಪರಸ್ಪರರ ಮೇಲೆ ವಾತ್ಸಲ್ಯ, ಔದಾರ್ಯಗಳನ್ನು ತೋರುವುದರಲ್ಲಿ
ನೇ ಶರೀರದಂತಿರುವುದನ್ನು ನೀವು ಕಾಣುವಿರಿ. ಶರೀರದ ಒಂದು ಅಂಗವು ರೋಗ
ತವಾದರೆ ಇಡೀ ಶರೀರವು ನಿದ್ದೆಗೇಡು ಮತ್ತು ಜ್ವರಕ್ಕೆ ತುತ್ತಾಗುತ್ತದೆ."

(ಬುಖಾರಿ, ಮುಸ್ಲಿಮ್)

ಮುಸ್ಲಿಮರ ಪರಸ್ಪರ ಬಾಂಧವ್ಯ ಎಷ್ಟು ಸುಭದ್ರವಾಗಿರಬೇಕೆಂದರೆ ಒಬ್ಬ ಮುಸ್ಲಿಮನು
ನ್ನೊಬ್ಬ ಮುಸ್ಲಿಮನಿಗೆ ಆಶ್ರಯವಾಗಬೇಕು. ಅವರು ಪರಸ್ಪರರನ್ನು ಬಲಪಡಿಸುವವ
ಬೇಕು, ಯಾವ ಮುಸ್ಲಿಮನಿಗೂ ತಾನು ಒಬ್ಬಂಟಿಗ ಹಾಗೂ ಅಸಹಾಯಕನೆಂಬ ಪ್ರಜ್ಞೆ
ಟಾಗಲು ಅವಕಾಶ ಕೊಡಬಾರದು.

ಹಝ್ರತ್ ಅಬೂ ಮೂಸಾ(ರ) ವರದಿ ಮಾಡಿರುವಂತೆ ಒಮ್ಮೆ ಪ್ರವಾದಿ(ಸ), "ಒಬ್ಬ
ವಿಶ್ವಾಸಿಯು ಇನ್ನೊಬ್ಬ ಸತ್ಯವಿಶ್ವಾಸಿಯ ಪಾಲಿಗೆ ಗೋಡೆಯಂತಿರುತ್ತಾನೆ. ಅವರ ಒಂದು
ವು ಇನ್ನೊಂದು ಭಾಗವನ್ನು ಈ ರೀತಿ ಬಲಪಡಿಸುತ್ತಲಿರುತ್ತದೆ" ಎಂದು ಹೇಳಿ ತಮ್ಮ
ು ಕೈ ಬೆರಳುಗಳನ್ನು ಇನ್ನೊಂದು ಕೈಯ ಬೆರಳುಗಳ ಮಧ್ಯೆ ಹೆಣೆದು ತೋರಿಸಿದರು.

(ಬುಖಾರಿ, ಮುಸ್ಲಿಮ್)

ಒಬ್ಬ ಮುಸ್ಲಿಮನ ಬಗ್ಗೆ ಇನ್ನೊಬ್ಬ ಮುಸ್ಲಿಮನಿಗಿರುವ ಬಾಧ್ಯತೆಗಳನ್ನು ವಿವರಿಸುತ್ತಾ
ಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು:

"ಒಬ್ಬ ಸತ್ಯವಿಶ್ವಾಸಿಯ ಕುರಿತು ಇನ್ನೊಬ್ಬ ಸತ್ಯವಿಶ್ವಾಸಿಗೆ 6 ಬಾಧ್ಯತೆಗಳಿವೆ.
ು ಅನಾರೋಗ್ಯ ಪೀಡಿತನಾಗಿದ್ದರೆ ಅವನ ಸಂದರ್ಶನಕ್ಕೆ ಹೋಗಬೇಕು. ಅವನು
ಕೊಂಡರೆ ಅವನ ಅಂತ್ಯಕ್ರಿಯೆಯಲ್ಲಿ ಪಾಲುಗೊಳ್ಳಬೇಕು. ಅವನು ಆಮಂತ್ರಿಸಿದರೆ
ಕ್ಕೆ ಓಗೊಡ ಬೇಕು. ಭೇಟಿಯಾದಾಗ ಸಲಾಮ್ ಹೇಳಬೇಕು. ಅವನು ಸೀನಿದರೆ
ರ್ಹಮುಕಲ್ಲಾಹ್' ಎಂದು ಹೇಳಬೇಕು. ಅವನು ಉಪಸ್ಥಿತನಿರಲಿ ಇಲ್ಲದಿರಲಿ
ಗೆ ಶುಭವನ್ನೇ ಬಯಸಬೇಕು." (ನಸಾಈ)

❁❁❁

# ನೈತಿಕತೆ ಮತ್ತು ಸಚ್ಚಾರಿತ್ರ

ಇಸ್ಲಾಮ್ ಧರ್ಮದಲ್ಲಿ ಒಬ್ಬ ವ್ಯಕ್ತಿಯ ಈಮಾನ್ ಅಥವಾ ಸತ್ಯವಿಶ್ವಾಸದ ಬ
ಅತಿ ಹೆಚ್ಚಿನ ಪ್ರಾಮುಖ್ಯತೆ ಇರುವುದು ಅವನ ಚಾರಿತ್ರ್ಯ ಮತ್ತು ಕರ್ಮಗಳಿಗೆ. ಮೂಲ
ಇಸ್ಲಾಮ್ ಎಂಬುದು ಸತ್ಯವಿಶ್ವಾಸ ಮತ್ತು ಸತ್ಕರ್ಮಗಳ ಸಂಗಮದ ಇನ್ನೊಂದು ಹೆಸ
ಆದ್ದರಿಂದ ಇಹ-ಪರಲೋಕಗಳ ಯಶಸ್ಸಿನ ಬಗ್ಗೆ ಅಲ್ಲಾಹನು ನೀಡಿರುವ ಎಲ್ಲಾ ವಾಗ್ದಾನಗ
ಸತ್ಯವಿಶ್ವಾಸ ಮತ್ತು ಸತ್ಕರ್ಮ ಎರಡನ್ನೂ ಅವಲಂಬಿಸಿಕೊಂಡಿವೆ. ಪವಿತ್ರ ಕುರ್‌ಆನಿನ
ಅನೇಕ ಕಡೆ ಸತ್ಯವಿಶ್ವಾಸದ ಜೊತೆಜೊತೆಗೇ ಸತ್ಕರ್ಮದ ಪ್ರಸ್ತಾಪ ಬಂದಿದೆ. ನಾವಿಲ್ಲಿ ಅಂತ
ಕೆಲವು ವಾಕ್ಯಗಳನ್ನು ಮಾತ್ರ ಓದುಗರ ಮುಂದಿಡುತ್ತಿದ್ದೇವೆ.

"ನಿಶ್ಚಯವಾಗಿಯೂ ಪೈಗಂಬರರನ್ನು ನಂಬುವವರಿರಲಿ, ಯಹೂದಿಯರಿರ
ಕ್ರೈಸ್ತರಿರಲಿ, ಸಬಯನರಿರಲಿ, ಯಾರು ಅಲ್ಲಾಹ್ ಮತ್ತು ನಿರ್ಣಾಯಕ (ಪುನರುತ್ಥಾನ) ದಿ
ಮೇಲೆ ವಿಶ್ವಾಸವಿಟ್ಟು ಸತ್ಕರ್ಮಗಳನ್ನು ಮಾಡುವರೋ ಅವರಿಗೆ ಅದರ ಪ್ರತಿಫಲವು ಅ
ಪ್ರಭುವಿನ ಬಳಿ ಇದ್ದೇ ಇದೆ. ಅವರಿಗೆ ಯಾವ ಭಯವೂ ವ್ಯಥೆಯೂ ಇಲ್ಲ." (2:6

ಅಂದರೆ ಅಲ್ಲಾಹನಿಗೆ ಮಾನವಕುಲದ ಯಾವುದೇ ಗುಂಪಿನ ಬಗ್ಗೆ ಪೂರ್ವಗ್ರಹ ಪೀ
ಪ್ರೇಮವಾಗಲೀ ದ್ವೇಷವಾಗಲೀ ಇಲ್ಲ. ಯಾರೇ ಇರಲಿ, ಅವರು ಸತ್ಯದ ಮೇಲೆ ವಿಶ್
ಘೋಷಿಸಿ, ಸತ್ಕರ್ಮಗಳಿಂದ ತಮ್ಮ ಬದುಕನ್ನು ಸಂಪನ್ನಗೊಳಿಸಿದರೆ, ಇಂತಹ ಎ
ವಿವೇಕವಂತ ಜನರು ಪರಲೋಕದಲ್ಲಿ ಘೋರ ಯಾತನೆಯಿಂದ ರಕ್ಷಿಸಲ್ಪಡುವ
ಮಾತ್ರವಲ್ಲದೆ ಅತ್ಯುತ್ತಮ ಪ್ರತಿಫಲಕ್ಕೆ ಅರ್ಹರಾಗುವರು.

"ಸತ್ಯವಿಶ್ವಾಸವನ್ನಿರಿಸಿಕೊಂಡು ಸತ್ಕರ್ಮಗಳನ್ನು ಕೈಗೊಂಡವರಿಗೆ ನಾವು ತಳಭ
ದಲ್ಲಿ ನದಿಗಳು ಹರಿಯುವಂತಹ ಸ್ವರ್ಗೋದ್ಯಾನಗಳಲ್ಲಿ ಪ್ರವೇಶ ಕೊಡುವೆವು. ಅವ
ಅಲ್ಲಿ ಸದಾಕಾಲ ವಾಸಿಸುವರು. ಇದು ಅಲ್ಲಾಹನ ದಿಟವಾದ ವಾಗ್ದಾನ. ಅಲ್ಲಾಹನಿಗಿ
ಅಧಿಕ ಸತ್ಯವಂತನು ಇನ್ನಾರಿದ್ದಾನೆ. ಕರ್ಮಗಳ ಪರಿಣಾಮವು ನಿಮ್ಮ ಆಶೋತ
ಗಳನ್ನಾಗಲಿ, ಗ್ರಂಥದವರ ಆಶೋತ್ತರಗಳನ್ನಾಗಲಿ ಹೊಂದಿಕೊಂಡಿರುವುದಿಲ್ಲ- ಕೇ
ಯಾರು ಮಾಡಿದರೂ ಅದರ ಫಲವನ್ನು ಅವನು ಪಡೆದೇ ತೀರುವನು ಮತ್ತು ಅವ
ಅಲ್ಲಾಹನ ಎದುರು ಯಾರನ್ನೂ ತನ್ನ ರಕ್ಷಕ ಮಿತ್ರನನ್ನಾಗಿಯೂ ಸಹಾಯಕನನ್ನಾಗಿಯ

ಹೊಂದಲಾರನು. ಪುರುಷನಿರಲಿ ಅಥವಾ ಸ್ತ್ರೀ ಇರಲಿ ಸತ್ಕರ್ಮ ಮಾಡುವವರು ಸತ್ಯವಿಶ್ವಾಸಿ ಳಾಗಿದ್ದರೆ ಇಂತಹವರೇ ಸ್ವರ್ಗದಲ್ಲಿ ಪ್ರವೇಶ ಪಡೆಯುವರು. ಕಿಂಚಿತ್ತೂ ಇವರ ಹಕ್ಕು ಚ್ಯುತಿಯಾಗಲಾರದು." (4:122-124)

ಪವಿತ್ರ ಕುರ್‌ಆನಿನ ಈ ವಾಕ್ಯಗಳಿಂದ ನಮಗೆ ಅನೇಕ ವಿಷಯಗಳು ತಿಳಿದು ರುತ್ತವೆ. ಮೊದಲನೆಯದಾಗಿ ಸತ್ಯವಿಶ್ವಾಸ ಮತ್ತು ಸತ್ಕರ್ಮಗಳಿಗೆ ಖಚಿತ ಪ್ರತಿಫಲವಾಗಿ ಸ್ವರ್ಗ ಮತ್ತು ಅದರ ಶಾಶ್ವತ ಸುಖ ಪ್ರಾಪ್ತವಾಗುವುದು. ಎರಡನೆಯದಾಗಿ ಒಬ್ಬ ವ್ಯಕ್ತಿ ಸತ್ಯವಿಶ್ವಾಸಿ ಆಗಿದ್ದರೆ ಆತನ ಅತಿ ಸಣ್ಣ ಸತ್ಕರ್ಮಕ್ಕೂ ಪ್ರತಿಫಲ ದೊರೆಯುವುದು. ಯಾವ ಸತ್ಕರ್ಮವೂ ವ್ಯರ್ಥವಾಗದು.

ಮೂರನೆಯದಾಗಿ ಪ್ರತಿಯೊಂದು ದುಷ್ಕೃತ್ಯಕ್ಕೂ ಶಿಕ್ಷೆ ಸಿಕ್ಕಿಯೇ ತೀರುವುದು. ಮನುಷ್ಯನು ತೌಬಾ (ಪಶ್ಚಾತ್ತಾಪ) ಮಾಡಿ ಮರಳುವ ಹೊರತು, ಈ ಕೃತ್ಯಗಳ ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಅವನಿಗೆ ಅನ್ಯ ಮಾರ್ಗವಿಲ್ಲ. ಅಲ್ಲಾಹನ ಹೊರತು ಯಾರೂ ಅವನನ್ನು ಅವನ ದುಷ್ಕೃತ್ಯಗಳ ಶಿಕ್ಷೆಯಿಂದ ರಕ್ಷಿಸಲಾರರು.

**"ಈ ಸೊತ್ತು ಮತ್ತು ಈ ಸಂತತಿಗಳು ಕೇವಲ ಲೌಕಿಕ ಜೀವನದ ಕ್ಷಣಿಕ ಸೊಬಗು ಮಾತ್ರ. ವಾಸ್ತವದಲ್ಲಿ ಉಳಿಯುವ ಪುಣ್ಯ ಕಾರ್ಯಗಳೇ ನಿಮ್ಮ ಪ್ರಭುವಿನ ಬಳಿ ಪರಿಣಾಮದ ದೃಷ್ಟಿಯಿಂದ ಶ್ರೇಷ್ಠವಾಗಿರುತ್ತವೆ. ಅವುಗಳ ಮೇಲೆಯೇ ಉತ್ತಮ ನಿರೀಕ್ಷೆಗಳನ್ನಿರಿಸಿ ಕೊಳ್ಳಬಹುದು." (ಪವಿತ್ರ ಕುರ್‌ಆನ್, 18:46)**

ಅಂದರೆ ಸಂಪತ್ತು-ಸಂತಾನ ಮುಂತಾದವುಗಳೆಲ್ಲ ಕೇವಲ ಲೌಕಿಕ ಜೀವನದ ಆಡಂಬರದ ಸಾಧನಗಳು. ಅವುಗಳಿಂದ ಮನುಷ್ಯನಿಗೆ ಏನಾದರೂ ಪ್ರಯೋಜನ ಸಿಗುವುದಿದ್ದರೆ ಅದು ಕೇವಲ ಇಹಲೋಕದ ಈ ಸಂಕ್ಷಿಪ್ತ ಜೀವನದಲ್ಲಿ ಮಾತ್ರ. ಇದರಾಚೆ ಪರಲೋಕದಲ್ಲಿ ಅವು ಮನುಷ್ಯನ ಯಾವ ಪ್ರಯೋಜನಕ್ಕೂ ಬರಲಾರವು. ಮನುಷ್ಯನ ಸತ್ಕರ್ಮಗಳು ಮಾತ್ರ ಅವನಿಗೆ ಇಹದಲ್ಲೂ ಪರದಲ್ಲೂ ಉಪಯುಕ್ತವಾಗಿರುತ್ತವೆ. ಅಲ್ಲಾಹನ ದೃಷ್ಟಿಯಲ್ಲೂ ಮಹತ್ವ ಇರುವುದು ಸತ್ಕರ್ಮಗಳಿಗೆ ಮಾತ್ರ.

**"ನಿಶ್ಚಯವಾಗಿಯೂ ಸತ್ಯವಿಶ್ವಾಸವಿರಿಸಿಕೊಂಡು ಸತ್ಕರ್ಮವೆಸಗುತ್ತಿರುವವರಿಗಾಗಿ (ಜನರ) ಹೃದಯಗಳಲ್ಲಿ ರಹ್ಮಾನನು ಸದ್ಯವೇ ಅನುರಾಗವನ್ನುಂಟು ಮಾಡುವನು."**

**(ಪವಿತ್ರ ಕುರ್‌ಆನ್, 19:96)**

ಸತ್ಯಧರ್ಮದ ಮಾರ್ಗವು ವಿರೋಧ ಮತ್ತು ಸಂಘರ್ಷಗಳ ಮಾರ್ಗವಾಗಿದೆ. ಆದರೆ ಈ ಪವಿತ್ರ ವಾಕ್ಯದ ಪ್ರಕಾರ ಜನರ ಯಾವುದೇ ಗುಂಪು ಸತ್ಯದ ಮೇಲೆ ವಿಶ್ವಾಸ ಘೋಷಿಸಿ ಸತ್ಕರ್ಮ ಕೈಗೊಂಡರೆ ಅವರ ಬಗ್ಗೆ ಸಮಾಜದಲ್ಲಿರುವ ವಿರೋಧವು ಕ್ರಮೇಣ ಮಾಯವಾಗಿ ಜನರು ಅವರನ್ನು ಪ್ರೀತಿಸತೊಡಗುವರು. ಜನರು ಸತ್ಯ ಮತ್ತು ಸತ್ಯ ಪ್ರಚಾರಕರ ವಿಶೇಷತೆಗಳನ್ನು ಗುರುತಿಸಿ ಅವರನ್ನು ಗೌರವಿಸಲಾರಂಭಿಸುವರು.

**"ನಿಮ್ಮ ಪೈಕಿ ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗಿದವರೊಡನೆ, ಅಲ್ಲಾಹನು ಅವರಿಗಿಂತ ಮುಂಚಿನವರನ್ನು ಭೂಮಿಯಲ್ಲಿ ಪ್ರತಿನಿಧಿಗಳಾಗಿ ಮಾಡಿದಂತೆಯೇ ಅವರನ್ನು**

ಮಾಡುವನೆಂದು ವಾಗ್ದಾನ ಮಾಡಿರುವನು. ತಾನು ಅವರಿಗಾಗಿ ಮೆಚ್ಚಿರುವ ಅವ ಧರ್ಮವನ್ನು ಸುಭದ್ರ ಬುನಾದಿಗಳಲ್ಲಿ ಸ್ಥಾಪಿಸುವನು ಮತ್ತು ಅವರ (ಪ್ರಚಲಿತ ಭಯಾವಸ್ಥೆಯನ್ನು ಶಾಂತಿಯಾಗಿ ಮಾರ್ಪಡಿಸಿ ಬಿಡುವನು. ಅವರು ನನ್ನ ದಾಸ್ಯ-ಆರಾಧ ಮಾತ್ರ ಮಾಡಲಿ ಮತ್ತು ನನ್ನೊಂದಿಗೆ ಯಾರನ್ನೂ ಸಹಭಾಗಿಗಳಾಗಿ ಮಾಡದಿರಲಿ."

**(ಪವಿತ್ರ ಕುರ್‌ಆನ್, 24:55**

ಈ ದಿವ್ಯ ವಚನದಿಂದ ಸ್ಪಷ್ಟವಾಗುವಂತೆ, ಅಲ್ಲಾಹನು ಖಿಲಾಫತನ್ನು ದಯ ಪಾಲಿಸುವುದು ಸತ್ಯವಿಶ್ವಾಸ ಮತ್ತು ಸತ್ಕರ್ಮಗಳನ್ನು ಉನ್ನತ ಪ್ರಮಾಣದಲ್ಲಿ ಮೈಗೂಡಿ ಕೊಂಡವರಿಗೆ ಮಾತ್ರ. ಇಂಥವರ ಕೈಯಿಂದಲೇ ಅಲ್ಲಾಹನು ಧರ್ಮಕ್ಕೆ ಪ್ರಾಬಲ್ಯ ಕೊಡಿಸುವನು ಯಾವ ಜನವರ್ಗವು ಈ ಗುಣಗಳನ್ನು ಮೈಗೂಡಿಸಿಕೊಳ್ಳುವುದೋ ಆ ಗುಂಪು ಅಂತಿಮವಾ ಈ ಜಗತ್ತಿನಲ್ಲೂ ಶಾಂತಿಯನ್ನೇ ಪಡೆಯುವುದು. ಧರ್ಮದ ಪ್ರಾಬಲ್ಯವನ್ನು ಕಾಣುವುದು ಮತ ಖಿಲಾಫತ್ ಅಥವಾ ಭೂಮಿಯ ಮೇಲೆ ಅಲ್ಲಾಹನ ಪ್ರಾತಿನಿಧ್ಯಕ್ಕೆ ಅರ್ಹವೆನಿಸಿಕೊಳ್ಳುವುದು

'ಅಮಲೆ ಸಾಲಿಹ್' ಅಥವಾ ಸತ್ಕರ್ಮ ಎಂಬುದು ಯಾವುದಾದರೊಂದು ವಿಶಿ ಸತ್ಕಾರ್ಯಕ್ಕಿರುವ ಹೆಸರಲ್ಲ. ಸತ್ಯವಿಶ್ವಾಸಿಯು ತನ್ನ ಸಂಪೂರ್ಣ ಜೀವನದಲ್ಲಿ ಅಲ್ಲಾಹನ ಮೆಚ್ಚುಗೆಯನ್ನರಸುತ್ತಾ ತನ್ನೆಲ್ಲ ಕರ್ಮಗಳಲ್ಲಿ ಅಲ್ಲಾಹನ ಪ್ರವಾದಿಯ(ಸ ಮಾದರಿಯನ್ನನುಸರಿಸುತ್ತಾ ಇದ್ದರೆ ಅವನ ಸಂಪೂರ್ಣ ಜೀವನವೇ ಒಂದ ಸತ್ಕರ್ಮವಾಗಿ ಬಿಡುವುದು. ಅವನ ನಿದ್ದೆ, ಎಚ್ಚರ, ಆಹಾರ ಸೇವನೆ, ಧನ ಸಂಪಾದನ ಮಡದಿ ಮಕ್ಕಳ ಪೋಷಣೆ ಮಾತ್ರವಲ್ಲ ತನ್ನ ಪತ್ನಿಯ ಜೊತೆ ಆತನು ನಡೆಸು ಲೈಂಗಿಕ ಕ್ರಿಯೆ ಕೂಡಾ ಸತ್ಕರ್ಮ ಎಂದೇ ಪರಿಗಣಿಸಲ್ಪಡುವುದು ಮತ್ತು ಅವನಿ ಅಲ್ಲಾಹನ ವತಿಯಿಂದ ಆ ಎಲ್ಲ ಕರ್ಮಗಳಿಗೂ ಸತ್ಫಲ ದೊರೆಯುವುದು.

ಪ್ರವಾದಿ(ಸ) ಹೀಗೆ ಹೇಳಿರುವರು,

"ಕಡ್ಡಾಯ ಕರ್ಮಗಳ ನಂತರ, ಧರ್ಮಸಮ್ಮತವಾದ ಆಹಾರ ಸಂಪಾದನೆ ಕೂಡ ಕಡ್ಡಾಯವಾಗಿದೆ." **(ಬೈಹಕಿ, ಶುಅಬುಲ್ ಈಮಾನ್**

ಈ ಪ್ರವಾದಿ ವಚನದಲ್ಲಿ ನಿಜವಾಗಿ 'ಅಲ್ ಜುಮುಅಃ' ಅಧ್ಯಾಯದ ಈ ಕೆಳಗಿ ವಾಕ್ಯದ ಕಡೆಗೆ ಸೂಚನೆ ಇದೆ:

**"ನಮಾಝ್ ಮುಗಿದ ಬಳಿಕ ಭೂಮಿಯ ಮೇಲೆ ಚದುರಿ ಬಿಡಿರಿ ಮತ್ತು ಅಲ್ಲಾಹ ಅನುಗ್ರಹವನ್ನರಸಿರಿ. ಅಲ್ಲಾಹನನ್ನು ಅತ್ಯಧಿಕ ಸ್ಮರಿಸುತ್ತಲಿರಿ. ನಿಮಗೆ ಯಶಸ್ಸು ಪ್ರಾಪ್ತವಾಗಲೂಬಹುದು."** **(62:10**

ಅಂದರೆ ಯಾವ ರೀತಿ ನಮಾಝ್‌ನ ಸಮಯದಲ್ಲಿ ನಮಾಝ್ ಕಡ್ಡಾಯವೋ ಅದೆ ರೀತಿ ಇಂತಹ ಕರ್ತವ್ಯಗಳನ್ನು ಈಡೇರಿಸಿದ ಬಳಿಕ, ಅಲ್ಲಾಹನ ಅನುಗ್ರಹದಿಂದ ಮಾನವನಿ ಸಿಗುವಂತಹ ಧರ್ಮಬದ್ಧ ಜೀವನಾಧಾರವನ್ನು ಸಂಪಾದಿಸಲು ಶ್ರಮಿಸಬೇಕಾದುದು ಕೂಡ ಕಡ್ಡಾಯ. ಆದರೆ ಸಂಪಾದನೆಯ ಮಧ್ಯೆಯೂ ಮನುಷ್ಯನು ಅಲ್ಲಾಹನನ್ನು ಬಹಳವಾ ಸ್ಮರಿಸುತ್ತಲೇ ಇರಬೇಕು. ಹಾಗೆ ಅಲ್ಲಾಹನನ್ನು ಸ್ಮರಿಸುತ್ತಲಿದ್ದರೆ ಅವನು ಲೌಕಿ

ಂಪತ್ತುಗಳಿಗೆ ಮಾರು ಹೋಗುವ ಅಥವಾ ನಿಷಿದ್ಧ ಸಂಪಾದನೆಗೆ ಇಳಿಯುವ ಅಪಾಯಗಳಿಂದ ಾರವುಳಿಯಲು ಸಾಧ್ಯವಿದೆ. ಅಲ್ಲದೆ ಅಲ್ಲಾಹನ ಸ್ಮರಣೆಯು ಮನುಷ್ಯನನ್ನು, ತನ್ನ ಂಪತ್ತನ್ನು ಅಲ್ಲಾಹನ ಮಾರ್ಗದಲ್ಲಿ ಹಾಗೂ ಸತ್ಕಾರ್ಯಗಳಲ್ಲೇ ವ್ಯಯಿಸುವಂತೆ ್ರೇರೇಪಿಸುತ್ತಲಿರುತ್ತದೆ. ಇದು ಮನುಷ್ಯನ ಇಹ-ಪರ ವಿಜಯಗಳಿಗೆ ಹೇತುವಾಗುವ ಣವಾಗಿದೆ. ಒಂದು ಸಂದರ್ಭದಲ್ಲಿ ಪ್ರವಾದಿ(ಸ) ಹೀಗೆ ಹೇಳಿದರು:

"ನೀವು ಅಲ್ಲಾಹನ ಮಾರ್ಗದಲ್ಲಿ ಕೊಟ್ಟ ದೀನಾರ್(ಸ್ವರ್ಣ ನಾಣ್ಯ), ನೀವು ಲಾಮ ವಿಮೋಚನೆಗೆ ವ್ಯಯಿಸುವ ದೀನಾರ್, ನೀವು ಒಬ್ಬ ಬಡವನಿಗೆ ದಾನವಾಗಿ ೂಟ್ಟ ದೀನಾರ್ ಮತ್ತು ನೀವು ನಿಮ್ಮ ಮನೆಯವರಿಗಾಗಿ ವ್ಯಯಿಸಿದ ದೀನಾರ್-ಇವುಗಳ ಪೈಕಿ ನೀವು ನಿಮ್ಮ ಮನೆಯವರಿಗಾಗಿ ಖರ್ಚು ಮಾಡಿದ ದೀನಾರ್ ನಿಮಗೆ ತಿ ಹೆಚ್ಚು ಪ್ರತಿಫಲವನ್ನು ತಂದು ಕೊಡುವುದು." (ಮುಸ್ಲಿಮ್)

ಅಂದರೆ ಓರ್ವ ವ್ಯಕ್ತಿ ಅಲ್ಲಾಹನ ಸಂಪ್ರೀತಿಗಾಗಿ-ಕೇವಲ ಧರ್ಮಬದ್ಧ ಮಾರ್ಗಗಳಿಂದ ಸಂಪಾದಿಸಿದ ತನ್ನ ಸಂಪತ್ತನ್ನು ಇತರ ಸತ್ಕರ್ಮಗಳಿಗೂ ತನ್ನ ಮನೆಯವರ ಪಾಲನೆ ಪೋಷಣೆಗಾಗಿಯೂ ಖರ್ಚು ಮಾಡುತ್ತಾನೆ. ಈ ಎಲ್ಲ ವ್ಯಯ ಳಿಗೂ ಅವನಿಗೆ ಪ್ರತಿಫಲ ಸಿಗುವುದು. ಆದರೆ ಅವನು ತನ್ನ ಮನೆಯವರಿಗಾಗಿ ವ್ಯಯಿಸಿದ ಸಂಪತ್ತಿಗೆ ಅತೀ ಹೆಚ್ಚಿನ ಪ್ರತಿಫಲ ಸಿಗುವುದು.

ಒಮ್ಮೆ ಪ್ರವಾದಿ(ಸ) ಹೀಗೆಂದರು:

"ಪ್ರತಿಯೊಂದು 'ತಸ್ಬೀಹ್'(ಸುಬ್‌ಹಾನಲ್ಲಾಹ್)ನಲ್ಲೂ ಪುಣ್ಯವಿದೆ. ಪ್ರತಿಯೊಂದು ತಕ್ಬೀರ್'(ಅಲ್ಲಾಹ್ ಅಕ್ಬರ್)ನಲ್ಲೂ ಪುಣ್ಯವಿದೆ. ಪ್ರತಿಯೊಂದು 'ತಹ್ಮೀದ್' (ಅಲ್-ಹಮ್ದುಲಿಲ್ಲಾಹ್)ನಲ್ಲೂ ಪುಣ್ಯವಿದೆ. ಪ್ರತಿಯೊಂದು 'ತಹ್ಲೀಲ್'(ಲಾ ಇಲಾಹ ಇಲ್ಲಲ್ಲಾಹ್)ನಲ್ಲೂ ಪುಣ್ಯವಿದೆ. ಸತ್ಕರ್ಮವನ್ನು ಆದೇಶಿಸುವುದರಲ್ಲಿ ಪುಣ್ಯವಿದೆ. ಕೆಡುಕಿನಿಂದ ತಡೆಯುವುದರಲ್ಲಿ ಪುಣ್ಯವಿದೆ. ನಿಮ್ಮ ಗುಪ್ತಾಂಗಗಳ ಸೂಕ್ತ ಉಪಯೋಗದಲ್ಲೂ ಪುಣ್ಯವಿದೆ."

ಈ ಮಾತನ್ನು ಆಲಿಸಿದ ಪ್ರವಾದಿಯ(ಸ) ಸಂಗಡಿಗರು ಪ್ರಶ್ನಿಸಿದರು, "ಅಲ್ಲಾಹನ ಸಂದೇಶವಾಹಕರೇ(ಸ)! ನಮ್ಮಲ್ಲೋರ್ವನು ತನ್ನ ಲೈಂಗಿಕ ತೃಷೆ ತೀರಿಸಿಕೊಂಡರೆ ಅದರಲ್ಲೂ ಅವನಿಗೆ ಪುಣ್ಯ ಸಿಗುವುದೇ?"

ಪ್ರವಾದಿ(ಸ) ಹೇಳಿದರು: "ನೀವು ಆಲೋಚಿಸಿ. ಅವನೊಂದು ವೇಳೆ ತನ್ನ ಗುಪ್ತಾಂಗವನ್ನು ಒಂದು ನಿಷಿದ್ಧ ಸ್ಥಳದಲ್ಲಿ ಉಪಯೋಗಿಸಿದ್ದರೆ(ವ್ಯಭಿಚರಿಸಿದ್ದರೆ) ಅವನಿಗೆ ಪಾಪ ಬರುತ್ತಿರ ಲಿಲ್ಲವೇ? ಹಾಗೆಯೇ ಅದನ್ನವನು ಧರ್ಮಸಮ್ಮತವಾಗಿ ಬಳಸಿದಾಗ ಅವನಿಗೆ ಪುಣ್ಯವೂ ಬರುವುದು." (ಮುಸ್ಲಿಮ್)

ಇದು ಇಸ್ಲಾಮಿನಲ್ಲಿ ಪುಣ್ಯ ಮತ್ತು ಸತ್ಕರ್ಮಗಳ ಕುರಿತು ಇರುವ ವಿಶಾಲ ಕಲ್ಪನೆ. ಇದು ಅಲ್ಲಾಹನ ಅಪಾರ ಔದಾರ್ಯಕ್ಕೆ ಸಾಕ್ಷಿ. ಅಂದರೆ ಒಬ್ಬ ದಾಸನು ಅಲ್ಲಾಹನು ನಿಶ್ಚಯಿಸಿದ ಮೇರೆಯೊಳಗೆ ನಿಂತು ನಡೆಸುವ ಲೈಂಗಿಕ ಕ್ರಿಯೆಗೂ ಅವನು ಪುಣ್ಯ ಫಲ ನಯಪಾಲಿಸುವನು!

ಸತ್ಕರ್ಮದ ಪ್ರಥಮ ಮೂಲ ಬುನಾದಿ ಏನೆಂದರೆ ಅಲ್ಲಾಹನೊಂದಿ ಮನುಷ್ಯನ ಸಂಬಂಧವು ಸರಿಯಾಗಿರಬೇಕು. ಅಲ್ಲಾಹನ ಜೊತೆ ಮನುಷ್ಯನ ಸಂಬಂ ಹೇಗಿರಬೇಕೆಂಬುದರ ವಿವರಗಳು ಈ ಹಿಂದಿನ ಅಧ್ಯಾಯಗಳಲ್ಲಿ ಕಳೆದಿವೆ.

ಸತ್ಕರ್ಮದ ಎರಡನೆಯ ಮೂಲ ಬುನಾದಿ, ಅಲ್ಲಾಹನ ದಾಸರಿಗೆ ಸಂಬಂಧಿಸಿ ಬಾಧ್ಯತೆಗಳನ್ನೆಲ್ಲ ಈಡೇರಿಸುವುದಾಗಿದೆ. ಈ ಕುರಿತು ವಿವರಗಳು ಕೂಡಾ ಹಿಂದಿ ಅಧ್ಯಾಯಗಳಲ್ಲಿ ಕಳೆದಿವೆ.

ಸತ್ಕರ್ಮದ ಮೂರನೆಯ ಮೂಲ ಬುನಾದಿಯನ್ನು ಸಾಮಾನ್ಯವಾಗಿ ಅಖ್ಲಾಕ ಅಥವಾ ಸಚ್ಚಾರಿತ್ರ್ಯವೆಂದು ಗುರುತಿಸಲಾಗುತ್ತದೆ. ಇಲ್ಲಿ ನಾವು ಆ ಕುರಿತು ಸಂಕ್ಷಿಪ್ತವಾ ವಿವರಿಸಲಿದ್ದೇವೆ:

ಇಸ್ಲಾಮಿನಲ್ಲಿ ಸಚಾರಿತ್ರ್ಯ ಮತ್ತು ಉನ್ನತ ಮಟ್ಟದ ನೈತಿಕತೆಗೆ ಎಷ್ಟು ಮಹತ್ವ ಇ ಎಂಬುದು ಪ್ರವಾದಿ ಮುಹಮ್ಮದ್‌ರ(ಸ) ಒಂದು ವಚನದಿಂದ ಸ್ಪಷ್ಟವಾಗುತ್ತದೆ:

"ನಾನು ಕಳುಹಿಸಲ್ಪಟ್ಟಿರುವುದೇ ಸಚ್ಚಾರಿತ್ರ್ಯ(ಅಥವಾ ಉನ್ನತ ನೈತಿಕ ಮೌಲ್ಯಗಳ ಪೂರ್ತೀಕರಣಕ್ಕಾಗಿ." (ಮುವತ್ತಾ, ಅಹ್ಮದ್

ನಿಜವಾಗಿಯೂ ಪ್ರವಾದಿ(ಸ) ತಮ್ಮ ಬದುಕಿನಲ್ಲಿ ಮಾಡಿದ್ದೇ ಈ ಕಾರ್ಯವನ್ನು. ಅವರ ನೈತಿಕ ನಿಯಮಗಳನ್ನು ಬಹಳ ವ್ಯಕ್ತವಾಗಿ ತಿಳಿಸಿದ್ದು ಮಾತ್ರವಲ್ಲದೆ ಅವುಗಳ ವೈಶಿಷ್ಟ್ಯ ಮತ ಮಹತ್ವವನ್ನೂ ಸಾರಿ ಹೋದರು. ಇದಕ್ಕಿಂತಲೂ ಮಿಗಿಲಾಗಿ ಅವರು ತಮ್ಮ ಸಂಪೂರ್ಣ ಬದುಕಿನಲ್ಲಿ ನೈತಿಕ ಮೌಲ್ಯಗಳನ್ನು ಸ್ಥಾಪಿಸಿ ಅತ್ಯುತ್ತಮ ಚಾರಿತ್ರ್ಯದ ಮಾದರಿಯನ್ನು ತೋರಿ ಹೋದರು. ಇತರರು ನೀತಿಯನ್ನು ಪಾಲಿಸಲಿ ಪಾಲಿಸದಿರಲಿ ನೀವು ಮಾತ್ರ ನೀತಿಯನ್ನು ಬಿಡಬಾರದು. ಲಾಭವಿರಲಿ-ನಷ್ಟವಿರಲಿ ಲೌಕಿಕ ಪ್ರತಿಕ್ರಿಯೆಗಳನ್ನು ಲೆಕ್ಕಿಸದೆ ಸದಾ ನೈತಿ ಮೌಲ್ಯಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು ಎಂದು ಆದೇಶಿಸಿದರು. ನೈತಿಕ ಮೌಲ್ಯಗಳ ಜಾತಿ, ಕುಲ, ಕುಟುಂಬ, ದೇಶ ಮತ್ತಿತರ ಎಲ್ಲ ಹಿತಾಸಕ್ತಿಗಳಿಗಿಂತಲೂ ಉನ್ನತ ಹಾಗು ಪವಿತ್ರ ಎಂದವರು ಬೋಧಿಸಿದರು. ಈ ರೀತಿ ನೈತಿಕತೆಯೇ ವ್ಯಾಪಕವಾಗಿರುವ ಜೀವನ ವ್ಯವಸ ಯೊಂದನ್ನು ಅವರು ಮಾನವಕುಲಕ್ಕೆ ಪರಿಚಯಿಸಿ ತಮ್ಮ ಜೀವನಾವಧಿಯಲ್ಲಿ ವ್ಯವಸ್ಥೆಯನ್ನು ಸ್ಥಾಪಿಸಿ ತೋರಿಸಿದ್ದಲ್ಲದೆ, ಆ ವ್ಯವಸ್ಥೆಯನ್ನು ಸದಾ ಸ್ಥಾಪಿತವಾಗಿಡಬೇಕಾ ಕರ್ತವ್ಯವನ್ನು ಮುಸ್ಲಿಮ್ ಸಮುದಾಯಕ್ಕೆ ವಹಿಸಿಕೊಟ್ಟು ಹೋದರು.

ಪ್ರವಾದಿ ಮುಹಮ್ಮದ್‌ರ(ಸ) ಚಾರಿತ್ರ್ಯ ಮತ್ತು ಅವರ ಬದುಕು ಸಚ್ಚಾರಿತ್ರ್ಯ ಮತ ಉನ್ನತ ನೈತಿಕತೆಗೆ ಮಾನವ ಇತಿಹಾಸದಲ್ಲೇ ಅಪೂರ್ವವಾದ ಅತಿಶ್ರೇಷ್ಠ ಮಾದರಿಯಾಗಿದೆ ಸಾಕ್ಷಾತ್ ಅಲ್ಲಾಹನೇ ಅವರ ಈ ನೈತಿಕ ಶ್ರೇಷ್ಠತೆಯನ್ನು ದೃಢೀಕರಿಸುವನು:

"ನಿಶ್ಚಯವಾಗಿಯೂ ನೀವು ಚಾರಿತ್ರ್ಯದ ಅತ್ಯುನ್ನತ ಮಟ್ಟದಲ್ಲಿದ್ದೀರಿ."

(ಪವಿತ್ರ ಕುರ್‌ಆನ್, 68:4

ಪ್ರವಾದಿ ಮುಹಮ್ಮದ್(ಸ) ಸಚ್ಚರಿತ ಮನುಷ್ಯನನ್ನು ಅತ್ಯುತ್ತಮ ಮನುಷ್ಯನೆಂದ ವರ್ಣಿಸಿರುವರು.

"ನಿಮ್ಮ ಪೈಕಿ ಚಾರಿತ್ರ್ಯದಲ್ಲಿ ಯಾರು ಉತ್ತಮರೋ ಅವರೇ ನಿಮ್ಮ ಪೈಕಿ ಅತ್ಯುತ್ತಮ ಾಗಿರುವರು." (ಬುಖಾರಿ, ಮುಸ್ಲಿಮ್)

ಇಂತಹ ಚಾರಿತ್ರ್ಯವಂತ ವ್ಯಕ್ತಿಗಳೇ ಅಲ್ಲಾಹನಿಗೂ ಅವನ ಸಂದೇಶವಾಹಕರಿಗೂ ್ರಿಯರಾಗಿದ್ದಾರೆ. ಈ ಕುರಿತು ಪ್ರವಾದಿ(ಸ) ಹೀಗೆ ನುಡಿದಿರುವರು:

"ನಿಮ್ಮ ಪೈಕಿ ಅತ್ಯುತ್ತಮ ನೈತಿಕ ಗುಣಗಳನ್ನು ಹೊಂದಿರುವವರೇ ನನಗೆ ಅತ್ಯಂತ ್ರಿಯರು." (ಬುಖಾರಿ)

ನ್ಯಾಯಕ್ಕೆ ಇಸ್ಲಾಮ್ ಧರ್ಮದಲ್ಲಿ ಮೂಲಭೂತ ಸ್ಥಾನವಿದೆ. ಮನುಷ್ಯನು ಲ್ಲಾಹನಿಗೆ ಸಂಬಂಧಿಸಿದ ಹಾಗೂ ಅವನ ಎಲ್ಲ ದಾಸರಿಗೆ ಸಂಬಂಧಿಸಿದ ತನ್ನೆಲ್ಲಾ ಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಈಡೇರಿಸುವುದೇ ನ್ಯಾಯದ ಪರಮ ರೂಪವಾಗಿದೆ. ಾಗೆಯೇ ಮನುಷ್ಯನು ಅಲ್ಲಾಹನಿಗೆ ಹಾಗೂ ಅವನ ಯಾವುದೇ ದಾಸನಿಗೆ ಮಾಡುವ ಕ್ಕುಚ್ಯುತಿಯೇ ಅನ್ಯಾಯದ ಪರಮ ರೂಪವಾಗಿದೆ. ಆದ್ದರಿಂದಲೇ ಅಲ್ಲಾಹನನ್ನು ಬಿಟ್ಟು ನ್ಯರ ಆರಾಧನೆ ಮಾಡುವುದನ್ನು ಅಂದರೆ ಬಹುದೇವಾರಾಧನೆಯನ್ನು ಪವಿತ್ರ ಕುರ್‌ಆನ್ ುಹಾ ಅಕ್ರಮ' ಎಂದು ಖಂಡಿಸಿದೆ. ಏಕೆಂದರೆ ಬಹುದೇವಾರಾಧನೆಯೆಂಬುದು ಮನುಷ್ಯನು ಲ್ಲಾಹನಿಗೆ ಮಾಡುವ ಅತಿದೊಡ್ಡ ಹಕ್ಕುಚ್ಯುತಿಯಾಗಿದೆ.

ಇನ್ನು ಮನುಷ್ಯನು ಅಲ್ಲಾಹನ ಆಜ್ಞೋಲ್ಲಂಘನೆ ಮಾಡುವ ಮೂಲಕ ತನ್ನ ಇಹ-ರ ಬದುಕನ್ನು ವಿನಾಶಕ್ಕೆ ತಳ್ಳುತ್ತಾನೆ. ಈ ರೀತಿ ತನ್ನ ಮೇಲೆ ತಾನೇ ಮಾಡಿಕೊಳ್ಳುವ ಕ್ರಮವೂ ಅಕ್ರಮವೆಂದೇ ಪರಿಗಣಿಸಲ್ಪಡುತ್ತದೆ. ಪವಿತ್ರ ಕುರ್‌ಆನಿನಲ್ಲಿ ಝುಲ್ಮ್ (ಅಕ್ರಮ) ಂಬ ಪದವನ್ನು ಹೆಚ್ಚಾಗಿ ಇದೇ ಅರ್ಥದಲ್ಲಿ ಬಳಸಲಾಗಿದೆ:

**"ನಾವು(ಅವರನ್ನು ಶಿಕ್ಷಿಸುವ ಮೂಲಕ) ಅವರ ಮೇಲೆ ಅಕ್ರಮವೆಸಗಲಿಲ್ಲ. ಆಜ್ಞೋಲ್ಲಂಘನೆ ಮಾಡುವ ಮೂಲಕ) ಅವರು ತಾವೇ ತಮ್ಮ ಮೇಲೆ ಅಕ್ರಮ ಸಗಿಕೊಂಡರು." (11:101)**

ಕರುಣೆ, ಸದ್ವರ್ತನೆ ಮತ್ತು ಜನಸೇವೆಗಳೆಲ್ಲಾ ಇಸ್ಲಾಮಿನ ದೃಷ್ಟಿಯಲ್ಲಿ ನೈತಿಕತೆ ಮತ್ತು ತ್ಕರ್ಮಗಳ ವಿಶಾಲ ವ್ಯಾಪ್ತಿಗೆ ಸೇರುತ್ತವೆ.

## ತ್ಯವಂತಿಕೆ

ಸತ್ಯವಂತಿಕೆ ಮತ್ತು ಪ್ರಾಮಾಣಿಕತೆಗೆ ಇಸ್ಲಾಮಿನಲ್ಲಿ ಮೂಲಭೂತ ಸ್ಥಾನವಿದೆ. ುನುಷ್ಯನು ಎಂಥ ಸ್ಥಿತಿಯಲ್ಲೂ ಸತ್ಯವನ್ನೇ ನುಡಿಯಬೇಕು. ಪ್ರಾಮಾಣಿಕತೆಯನ್ನೇ ಾಲಿಸಬೇಕು. ಅವನ ಅಂತರಂಗ-ಬಹಿರಂಗಗಳು ಸಮಾನವಾಗಿರಬೇಕು. ಮಾತು-ಕೃತಿ, ಾರಿತ್ರ್ಯ-ವ್ಯವಹಾರ ಎಲ್ಲದರಲ್ಲೂ ಅವನು ಸತ್ಯ ಮತ್ತು ಪ್ರಾಮಾಣಿಕತೆಯ ಸಾಕಾರ ಮೂರ್ತಿ ುಾಗಿರಬೇಕು ಎಂಬುದನ್ನೇ ಇಸ್ಲಾಮ್ ಬಯಸುತ್ತದೆ.

ಒಬ್ಬ ವ್ಯಕ್ತಿ ತಾನು ಸತ್ಯವನ್ನೇ ನುಡಿಯುವೆನೆಂದೂ ಯಾವ ಕಾರಣಕ್ಕೂ ಸುಳ್ಳನ್ನು ನ್ನ ಬಳಿ ಸುಳಿಯಲು ಬಿಡುವುದಿಲ್ಲವೆಂದೂ ದೃಢ ತೀರ್ಮಾನ ಕೈಗೊಂಡರೆ ಅವನಿಗೆ

ಸತ್ಯದ ಪಾಲನೆ ಮತ್ತು ಅಸತ್ಯದ ವರ್ಜನೆ ಮಾತ್ರವಲ್ಲದೆ ಇತರ ಕೆಡುಕುಗಳ ವರ್ಜ
ಮತ್ತು ಇತರ ಒಳಿತುಗಳ ಪಾಲನೆಯೂ ಬಹಳ ಸುಲಭವಾಗಿ ಬಿಡುತ್ತದೆ. ಕೇವ
ಸತ್ಯವನ್ನೇ ನುಡಿಯುವುದರಿಂದ ಅವನ ಅಂತರಂಗವು ನಿಷ್ಕಲ್ಮಶವಾಗುವುದಲ್ಲದೆ ಅವನಲ್ಲಿ
ಪ್ರಬಲವಾದ ಸಚ್ಚಾರಿತ್ರ್ಯವೂ ಬೆಳೆಯುತ್ತದೆ. ಸುಳ್ಳು ಹೇಳಿ ತನ್ನ ಅಪರಾಧಗಳನ್ನು
ಬಚ್ಚಿಡಲು ಅವನಿಗೆ ಸಾಧ್ಯವಾಗುವುದಿಲ್ಲ. ಅವನು ಸತ್ಯವಿಶ್ವಾಸಿಯಾದ್ದರಿಂದ ಬಹಿರಂಗವಾ
ದುಷ್ಕೃತ್ಯವೆಸಗಲಿಕ್ಕೂ ಅವನಿಗೆ ಸಾಧ್ಯವಾಗುವುದಿಲ್ಲ. ಅತ್ತ ಸುಳ್ಳು ಹೇಳುವ ವ್ಯಕ್ತಿ ಸುಳ್ಳಿ
ಮೂಲಕ ತನ್ನ ಅಂತರಂಗವನ್ನು ಮಲಿನಗೊಳಿಸಿಕೊಳ್ಳುತ್ತಾನೆ. ಅಲ್ಲದೆ ಸುಳ್ಳು ಅವ
ಪಾಲಿಗೆ ಅನೇಕ ಪಾಪ ಕೃತ್ಯಗಳ ಬಾಗಿಲನ್ನು ತೆರೆದು ಬಿಡುತ್ತದೆ. ಸುಳ್ಳು ಹೇಳಿ ಇತರರಿಂ
ತನ್ನ ಪಾಪ ಕೃತ್ಯಗಳನ್ನು ಅಡಗಿಸಬಹುದು ಎಂಬ ಭರವಸೆಯಿಂದಲೇ ಅವನು ಅನೇ
ಪಾಪ ಕೃತ್ಯಗಳನ್ನು ಎಸಗುತ್ತಾನೆ. ಪಾಪ ಕೃತ್ಯ ಅವನಿಗೆ ಸುಲಭವಾಗಿ ಬಿಡುತ್ತದೆ.

ಈ ವಿಷಯದಲ್ಲಿ ಪ್ರವಾದಿ ಮುಹಮ್ಮದ್‌ರವರ(ಸ) ವಚನವೊಂದು ಬಹ
ಗಮನಾರ್ಹವಾಗಿದೆ:

"ಸತ್ಯವನ್ನೇ ಪಾಲಿಸಿರಿ. ಏಕೆಂದರೆ ಸತ್ಯ ನುಡಿಯು ನಿಮ್ಮನ್ನು ಸ್ವರ್ಗದೆಡೆಗೆ ಒಯ್ಯುತ್ತದ
ಒಬ್ಬ ಮನುಷ್ಯನು ಸದಾ ಸತ್ಯವನ್ನೇ ನುಡಿಯುತ್ತಾ ಸತ್ಯವನ್ನೇ ಅರಸುತ್ತಾ ಇದ್ದರೆ ಕೊನೆ
ಅಲ್ಲಾಹನ ಬಳಿ ಅವನ ಬಗ್ಗೆ 'ಸಿದ್ದೀಕ್'(ಸತ್ಯವಂತ) ಎಂದು ಬರೆಯಲಾಗುತ್ತದೆ. ನೀ
ಸುಳ್ಳಿನಿಂದ ದೂರ ಓಡಿರಿ. ಏಕೆಂದರೆ ಸುಳ್ಳು ನಿಮ್ಮನ್ನು ಅಲ್ಲಾಹನ ಆಜ್ಞೋಲ್ಲಂಘನೆಯೆಡೆ
ಕೊಂಡೊಯ್ಯುತ್ತದೆ. ಆಜ್ಞೋಲ್ಲಂಘನೆಯು ನಿಮ್ಮನ್ನು ನರಕದೆಡೆಗೆ ಒಯ್ಯುತ್ತದೆ. ಒಬ್ಬ ವ್ಯಕ್
ಸುಳ್ಳು ಹೇಳುತ್ತಾ ಸುಳ್ಳನ್ನೇ ಅರಸುತ್ತಾ ಇದ್ದರೆ ಕೊನೆಗೆ ಅಲ್ಲಾಹನ ಬಳಿ ಅವನ ಬಗ
'ಕದ್ದಾಬ್' (ಸುಳ್ಳುಗಾರ) ಎಂದು ಬರೆಯಲಾಗುತ್ತದೆ." (ಬುಖಾರಿ, ಮುಸ್ಲಿಮ್

ಸುಳ್ಳು ಸಾಕ್ಷ್ಯ ಮತ್ತು ಪ್ರಮಾಣ(ಆಣೆ) ಕೂಡಾ ಸುಳ್ಳಿನ ಒಂದು ವಿಧವಾಗಿದೆ
ಮಾತ್ರವಲ್ಲ ಇದು ಸುಳ್ಳಿನ ಅತ್ಯಂತ ಕೆಟ್ಟ ಸ್ವರೂಪವಾಗಿದೆ.

ಒಮ್ಮೆ ಪ್ರವಾದಿ(ಸ) ಹೇಳಿದರು:

"ಅಲ್ಲಾಹನ ಜೊತೆ ಇತರರನ್ನು ಪಾಲುಗೊಳಿಸುವುದು, ಹೆತ್ತವರ ಹಕ್ಕುಚ್ಯುತಿ ಮತ್ತು
ಅವರ ಆಜ್ಞೋಲ್ಲಂಘನೆ ಮಾಡುವುದು, ಯಾರನ್ನಾದರೂ ವಧಿಸುವುದು, ಸುಳ್ಳು ಪ್ರಮಾ
ಮಾಡುವುದು (ಮತ್ತು ಇನ್ನೊಂದು ಉಲ್ಲೇಖದ ಪ್ರಕಾರ)ಸುಳ್ಳು ಸಾಕ್ಷ್ಯ ನುಡಿಯುವುದು
ಇವು ಅತಿದೊಡ್ಡ ಪಾಪ ಕೃತ್ಯಗಳು." (ಬುಖಾರಿ, ಮುಸ್ಲಿಮ್

ಪವಿತ್ರ ಕುರ್‌ಆನ್ ಸತ್ಯವಿಶ್ವಾಸಿಗಳ ಗುಣವರ್ಣನೆ ಮಾಡುತ್ತಾ ಸತ್ಯಸಂಧತೆಯನ್ನು
ಅವರ ಒಂದು ಪ್ರಮುಖ ಗುಣವಾಗಿ ಚಿತ್ರಿಸಿದೆ:

**"ಇವರು ಸಹನೆಯುಳ್ಳವರೂ ಸತ್ಯಸಂಧರೂ ವಿಧೇಯರೂ ಉದಾರಿಗಳೂ
ಆಗಿರುತ್ತಾರೆ ಮತ್ತು ರಾತ್ರಿಯ ಕೊನೆಯ ಘಳಿಗೆಗಳಲ್ಲಿ ಅಲ್ಲಾಹನೊಡನೆ ಪಾಪ
ವಿಮೋಚನೆಗಾಗಿ ಪ್ರಾರ್ಥಿಸುತ್ತಿರುತ್ತಾರೆ."** (3:17

"ಇವರೇ ಸತ್ಯಸಂಧರು ಮತ್ತು ಇವರೇ ಧರ್ಮನಿಷ್ಠರು." (2:177)

ಅಲ್ಲಾಹನ ಮಾರ್ಗದಲ್ಲಿ ತನ್ನ ಪ್ರಾಣ ಮತ್ತು ಸಂಪತ್ತನ್ನು ಬಲಿ ಕೊಡುವ ಮೂಲಕ ಮನುಷ್ಯನು ತಾನು ಸತ್ಯವಿಶ್ವಾಸಿ ಎಂಬ ತನ್ನ ಘೋಷಣೆ ಸತ್ಯವೆಂದು ಸಾಬೀತುಪಡಿಸಿ ದಂತಾಗುತ್ತದೆ. ಈ ಕುರಿತು ಪವಿತ್ರ ಕುರ್‌ಆನ್ ಹೀಗೆನ್ನುತ್ತದೆ:

"ಅಲ್ಲಾಹನೊಡನೆ ಮಾಡಿದ ಕರಾರನ್ನು ನಿಜವೆಂದು ಸಾಧಿಸಿ ತೋರಿಸಿದವರು ಸತ್ಯವಿಶ್ವಾಸ ಸ್ವೀಕಾರ ಮಾಡಿದವರಲ್ಲಿದ್ದಾರೆ. ಅವರಲ್ಲಿ ಕೆಲವರು ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದರು. ಇನ್ನು ಕೆಲವರು ಸಮಯ ಕಾಯುತ್ತಿದ್ದಾರೆ. ಅವರು ತಮ್ಮ ನಿಲುವಿನಲ್ಲಿ ಏನೂ ಬದಲಾವಣೆ ಮಾಡಲಿಲ್ಲ." (33:23)

ಸತ್ಯ ಮತ್ತು ಪ್ರಾಮಾಣಿಕತೆಗಳನ್ನು ಗರಿಷ್ಠ ಪ್ರಮಾಣದಲ್ಲಿ ಪಾಲಿಸುವ ಸತ್ಯವಿಶ್ವಾಸಿ ಗಳನ್ನು ಪವಿತ್ರ ಕುರ್‌ಆನ್ 'ಸಿದ್ದೀಕ್' ಎಂದು ವರ್ಣಿಸುತ್ತದೆ. ಗೌರವ ಮತ್ತು ಸ್ಥಾನಮಾನ ದಲ್ಲಿ 'ಸಿದ್ದೀಕ್'ಗಳು ಪ್ರವಾದಿಗಳ ಅನಂತರದ ಅತ್ಯುನ್ನತ ಸ್ಥಾನಕ್ಕೆ ಪಾತ್ರರಾಗುತ್ತಾರೆ.

"ಅಲ್ಲಾಹ್ ಮತ್ತು ಸಂದೇಶವಾಹಕರನ್ನು ಅನುಸರಿಸುವವರು ಅಲ್ಲಾಹನಿಂದ ಸಕಲ ಸೌಭಾಗ್ಯಗಳನ್ನು ಹೊಂದಿದ ಪ್ರವಾದಿಗಳ, ಸತ್ಯಸಂಧರ, ಹುತಾತ್ಮರ ಮತ್ತು ಸಜ್ಜನರ ಸಹವಾಸದಲ್ಲಿರುವರು. ಅದೆಂತಹ ಉತ್ತಮ ಸಂಗಾತಿಗಳವರು!"

(ಪವಿತ್ರ ಕುರ್‌ಆನ್, 4:69)

ಒಬ್ಬ ಮುಸ್ಲಿಮನಿಗೆ, ತಾನು ಅಲ್ಲಾಹನ ನೆಚ್ಚಿನ ದಾಸನಾಗಬೇಕು ಮತ್ತು ಸತ್ಯವಂತ ನಾಗಬೇಕು ಎಂಬ ಹಂಬಲವಿದ್ದರೆ, ಅವನು ಸತ್ಯವಂತರ ಸಹವಾಸದಲ್ಲಿರಬೇಕು. ಪವಿತ್ರ ಕುರ್‌ಆನಿನಲ್ಲಿ ಹೀಗೆ ಆದೇಶಿಸಲಾಗಿದೆ:

"ಓ ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ, ಸತ್ಯ ಸಂಧರೊಂದಿಗಿರಿ."

(9:119)

ಸತ್ಯಸಂಧತೆಯ ಅತ್ಯುನ್ನತ ರೂಪವೇನೆಂದರೆ, ಸತ್ಯವಿಶ್ವಾಸಿಯು, ತನ್ನ ನಾಲಿಗೆಯಿಂದ ಯಾವ ಸತ್ಯದ ಸ್ವೀಕಾರವನ್ನು ಘೋಷಿಸಿರುವನೋ ಆ ಸತ್ಯವನ್ನು ತನ್ನ ಮನದಲ್ಲಿ ಆಳವಾಗಿ ಬೇರೂರಿಸಿರಬೇಕು ಮತ್ತು ತನ್ನ ವ್ಯಾವಹಾರಿಕ ಬದುಕನ್ನು ಸಂಪೂರ್ಣವಾಗಿ ಆ ಸತ್ಯದ ಆಧಾರದಲ್ಲೇ ರೂಪಿಸಿರಬೇಕು. ಕೇವಲ ಬಾಯಿಯಿಂದ ತಾನು ಸತ್ಯವಿಶ್ವಾಸಿಯೆಂದು ಘೋಷಿಸಿ, ಆ ವಿಶ್ವಾಸವನ್ನು ಮನದೊಳಗೆ ನೆಲೆಗೊಳಿಸದೆ ಹಾಗೂ ಅದರ ಪ್ರಕಾರ ತಮ್ಮ ಬದುಕನ್ನು ಸಂಸ್ಕರಿಸಿಕೊಳ್ಳದೆ ಇರುವವರನ್ನು ಪವಿತ್ರ ಕುರ್‌ಆನ್, ಕಪಟ ವಿಶ್ವಾಸಿಗಳೆಂದೂ ಸುಳ್ಳುಗಾರ ರೆಂದೂ ಕರೆದು ಅವರನ್ನು ಖಂಡಿಸಿದೆ.

"ಸಂದೇಶವಾಹಕರೇ, ಕಪಟವಿಶ್ವಾಸಿಗಳು ನಿಮ್ಮ ಬಳಿಗೆ ಬಂದಾಗ, ತಾವು ಖಂಡಿತ ಅಲ್ಲಾಹನ ಸಂದೇಶವಾಹಕರೆಂದು ನಾವು ಸಾಕ್ಷ್ಯ ವಹಿಸುತ್ತೇವೆ ಎಂದು ಹೇಳುತ್ತಾರೆ. ನೀವು ಖಂಡಿತವಾಗಿಯೂ ಅಲ್ಲಾಹನ ಸಂದೇಶವಾಹಕರೆಂದು ಅಲ್ಲಾಹನಿಗೆ ತಿಳಿದಿದೆ. ಆದರೆ ಈ ಕಪಟವಿಶ್ವಾಸಿಗಳು ಮಹಾ ಸುಳ್ಳುಗಾರರೆಂದು ಅಲ್ಲಾಹನು ಸಾಕ್ಷ್ಯ ವಹಿಸುತ್ತಾನೆ." (63:1)

## ವಚನ ಪಾಲನೆ

ವಚನ ಮತ್ತು ಕರಾರುಗಳ ಪಾಲನೆಗೆ ಇಸ್ಲಾಮ್ ಭಾರೀ ಮಹತ್ವ ಕೊಟ್ಟಿದೆ. ಸತ್ಯವಿಶ್ವಾಸಿಯು ಅಲ್ಲಾಹನ ಜೊತೆ ಅವನ ದಾಸ್ಯದ ಕರಾರು ಮಾಡಿದ್ದು ಆ ಕರಾರಿನ ಪಾಲನೆಯೇ ಇಸ್ಲಾಮಿನ ಪ್ರಕಾರ ಸಾಕ್ಷಾತ್ ಧರ್ಮವಾಗಿದೆ. ಈ ಕರಾರು ಎಷ್ಟು ಮಹತ್ವದ್ದೆಂದರೆ ಮನುಷ್ಯನು ತನ್ನ ಸರ್ವಸ್ವವನ್ನೂ ಬಲಿಕೊಡಬೇಕಾದರೆ ಬಲಿಗೊಟ್ಟು ಈ ಕರಾರನ್ನು ಕಾಪಾಡಬೇಕು. ನಿಜವಾದ ಸತ್ಯವಿಶ್ವಾಸಿಗಳು ಯಾರೆಂಬುದನ್ನು ವಿವರಿಸುತ್ತಾ ಪವಿತ್ರ ಕುರ್‌ಆನ್ ಹೀಗೆ ಹೇಳಿದೆ:

**"ಅಲ್ಲಾಹನೊಡನೆ ಮಾಡಿದ ಕರಾರನ್ನು ನಿಜವೆಂದು ಸಾಧಿಸಿ ತೋರಿಸಿದವರು ಸತ್ಯವಿಶ್ವಾಸ ಸ್ವೀಕಾರ ಮಾಡಿದವರಲ್ಲಿದ್ದಾರೆ. ಅವರಲ್ಲಿ ಕೆಲವರು ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದರು. ಇನ್ನು ಕೆಲವರು ಸಮಯ ಕಾಯುತ್ತಿದ್ದಾರೆ. ಅವರು ತಮ್ಮ ನಿಲುಮೆಯಲ್ಲಿ ಏನೂ ಬದಲಾವಣೆ ಮಾಡಲಿಲ್ಲ." (33:23**

ಅಲ್ಲಾಹನೊಂದಿಗೆ ದಾಸ್ಯದ ಕರಾರು ಮಾಡಿಕೊಂಡ ಬಳಿಕ ಅದನ್ನು ಮುರಿದು ಬಿಡುವುದು ಅತ್ಯಂತ ಅಪಾಯಕಾರಿ ಪಾಪಕೃತ್ಯವಾಗಿದೆ. ಯಹೂದಿಯರು ಈ ಕೃತ್ಯ ವೆಸಗಿದ್ದಕ್ಕಾಗಿ ಇಹ-ಪರಲೋಕಗಳಲ್ಲಿ ಅಲ್ಲಾಹನ ಅನುಗ್ರಹದಿಂದ ವಂಚಿತರಾಗಿ, ತಮ್ಮ ನೈಜ ಗುರಿಯಿಂದ ದೂರವೆಸೆಯಲ್ಪಟ್ಟರು.

**"ಅನಂತರ ಅವರು ತಮ್ಮ ಕರಾರನ್ನು ಮುರಿದ ಕಾರಣಕ್ಕಾಗಿಯೇ, ನಾವು ಅವರನ್ನು ನಮ್ಮ ಕೃಪೆಯಿಂದ ಬಹುದೂರ ಒಗೆದು ಬಿಟ್ಟೆವು ಮತ್ತು ಅವರ ಹೃದಯಗಳನ್ನು ಕಠಿಣಗೊಳಿಸಿದೆವು." (ಪವಿತ್ರ ಕುರ್‌ಆನ್, 5:13**

ಇದು ಅಲ್ಲಾಹನ ಜೊತೆ ಮಾಡುವ ವಚನ ಭ್ರಷ್ಟತೆಯ ದುಷ್ಪರಿಣಾಮವಾಯಿತು. ಇನ್ನು ಮನುಷ್ಯರ ಜೊತೆ ಮಾಡುವ ಕರಾರು ಮತ್ತು ಮನುಷ್ಯರಿಗೆ ಕೊಟ್ಟ ವಚನಗಳ ಪಾಲನೆಗೂ ಧರ್ಮದಲ್ಲಿ ಬಹಳಷ್ಟು ಮಹತ್ವವಿದೆ. ಪವಿತ್ರ ಕುರ್‌ಆನ್ ಒಂದೆಡೆ ಹೀಗೆಂದಿದೆ:

**"ನೀವು ಅಲ್ಲಾಹನೊಡನೆ ಕರಾರು ಮಾಡಿಕೊಂಡಿದ್ದರೆ ಅದನ್ನು ಪಾಲಿಸಿರಿ. ನೀವು ಅಲ್ಲಾಹನನ್ನು ನಿಮ್ಮ ಮೇಲೆ ಸಾಕ್ಷ್ಯ ನಿಲ್ಲಿಸಿಕೊಂಡು ಮಾಡಿದ ಪ್ರತಿಜ್ಞೆಗಳನ್ನು ಮುರಿಯ ಬೇಡಿರಿ. ನಿಶ್ಚಯವಾಗಿಯೂ ನಿಮ್ಮ ಸಕಲ ಕರ್ಮಗಳನ್ನೂ ಅಲ್ಲಾಹನು ತಿಳಿದಿರುತ್ತಾನೆ." (16:91**

ಅಂದರೆ ಎಲ್ಲ ಸ್ಥಿತಿಯಲ್ಲೂ ನೀವು ಮಾಡಿರುವ ಪ್ರಮಾಣಗಳನ್ನು, ಕರಾರುಗಳನ್ನು ಮತ್ತು ನೀವು ಕೊಟ್ಟ ವಚನಗಳನ್ನು ಪಾಲಿಸಿರಿ. ವಿಶೇಷವಾಗಿ ಅಲ್ಲಾಹನನ್ನು ಸಾಕ್ಷಿಯಾಗಿಟ್ಟು ಮತ್ತು ಅವನ ಹೆಸರಲ್ಲಿ ಪ್ರಮಾಣ ಮಾಡಿ ಯಾರಿಗಾದರೂ ವಚನ ಕೊಟ್ಟಿದ್ದರೆ ಅದನ್ನು ಮುರಿಯುವ ದುಸ್ಸಾಹಸವನ್ನೆಂದೂ ಮಾಡಬೇಡಿರಿ.

ಮನುಷ್ಯನು ಮಾಡಿರುವ ಒಂದು ಕರಾರು, ಅದು ಅಲ್ಲಾಹನ ಜೊತೆ ಮಾಡಿದ ಕರಾರಾಗಿರಲಿ ಅಥವಾ ತನ್ನ ಸಹಜೀವಿ ಮಾನವರ ಜೊತೆಗೆ ಮಾಡಿದ ಕರಾರು ಅಥವಾ ಅವರಿಗೆ ಕೊಟ್ಟ ವಚನವಾಗಿರಲಿ, ಪ್ರತಿಯೊಂದು ಕರಾರಿನ ಬಗ್ಗೆ ಅಲ್ಲಾಹನು ವಿಚಾರಣೆ ನಡೆಸಲಿರುವನು

"ವಚನವನ್ನು ಪಾಲಿಸಿರಿ. ನಿಶ್ಚಯವಾಗಿಯೂ ವಚನದ ಕುರಿತು- ನಿಮ್ಮನ್ನು ಶ್ನಿಸಲಾಗುವುದು." ಎಂದು ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ಎಚ್ಚರಿಸಿದೆ. (17:34)

## ಶ್ವಾಸಾರ್ಹತೆ

ಇಸ್ಲಾಮ್ ಧರ್ಮವು ನಮ್ಮಲ್ಲಿ ಕಾಣಬಯಸುವ ಇನ್ನೊಂದು ಪ್ರಮುಖ ಗುಣ ಶ್ವಾಸಾರ್ಹತೆಯಾಗಿದೆ. ನಮ್ಮ ಸಂಪೂರ್ಣ ಬದುಕು ಮತ್ತು ನಮಗೆ ಲಭ್ಯವಿರುವ ಎಲ್ಲ ವಲತ್ತುಗಳೂ ಅಲ್ಲಾಹನ ಕೊಡುಗೆಗಳಾಗಿದ್ದು ಅವನೇ ಅವೆಲ್ಲವುಗಳ ನೈಜ ಮಾಲಕ ಾಗಿರುವನು. ಅವೆಲ್ಲವನ್ನೂ ಅವನು ನಮಗೆ ವಿಶ್ವಸ್ಥ ಸೊತ್ತಿನ ರೂಪದಲ್ಲಿ ತಾತ್ಕಾಲಿಕವಾಗಿ ಹಿಸಿಕೊಟ್ಟಿರುವನು. ಆದ್ದರಿಂದ ಅವೆಲ್ಲವನ್ನೂ ಅವನಿಚ್ಛಿಸುವ ವಿಧಾನದಲ್ಲೇ ಬಳಸ ೇಕಾದುದು ಮನುಷ್ಯನ ಕರ್ತವ್ಯ. ಅವನು ಅವುಗಳನ್ನು ಯಾವ ರೀತಿ ಬಳಸಿದ್ದನೆಂಬ ಬಗ್ಗೆ ರಲೋಕದಲ್ಲಿ ಕೂಲಂಕಶ ವಿಚಾರಣೆ ನಡೆಯಲಿದೆ. ಅವನು ಅಲ್ಲಾಹನ ಇಚ್ಛೆ ನುಗುಣವಾಗಿಯೇ ಅವುಗಳನ್ನು ಬಳಸಿಕೊಂಡರೆ ಅಲ್ಲಾಹನು ಅವನನ್ನು ವಿಶ್ವಾಸಾರ್ಹನೆಂದು ರಿಗಣಿಸಿ ಪುರಸ್ಕರಿಸುವನು. ತದ್ವಿರುದ್ಧವಾಗಿ ಅವನು ಅವೆಲ್ಲವನ್ನು ತನ್ನ ಸ್ವೇಚ್ಛೆಯಂತೆ ಾಗೂ ಅಲ್ಲಾಹನ ಅಭೀಷ್ಟಗಳಿಗೆ ವಿರುದ್ಧವಾಗಿ ಬಳಸಿಕೊಂಡರೆ ಅವನು ಅಪ್ರಾಮಾಣಿಕ ಾಗೂ ವಿಶ್ವಾಸದ್ರೋಹಿ ಎನಿಸಿಕೊಳ್ಳುವನು ಮತ್ತು ಅದಕ್ಕಾಗಿ ಶಿಕ್ಷಿಸಲ್ಪಡುವನು.

ಇದು ಅಲ್ಲಾಹನ ವಿಶ್ವಸ್ಥ ವಸ್ತುಗಳ ಕುರಿತಾಯಿತು. ನಾವು ಸಮೂಹ ಜೀವಿ ಳೆಂದ ಮೇಲೆ ನಮ್ಮ ಸಹಜೀವಿಗಳೂ ನಮಗೆ ಅನೇಕ ವಸ್ತುಗಳನ್ನು ವಿಶ್ವಸ್ಥವಾಗಿ ೊಟ್ಟಿರುತ್ತಾರೆ. ನಮಗೆ ಕೆಲವು ಹೊಣೆಗಾರಿಕೆಗಳನ್ನು ವಹಿಸಿಕೊಟ್ಟಿರುತ್ತಾರೆ ಅಥವಾ ಮ್ಮ ಬಳಿ ಜನರ ಕೆಲವು ಗೌಪ್ಯ ಮತ್ತು ರಹಸ್ಯಗಳಿರುತ್ತವೆ. ಇವೆಲ್ಲವೂ ಅಮಾನತ್ ಥವಾ ವಿಶ್ವಸ್ಥ ಸೊತ್ತುಗಳಾಗಿದ್ದು ಅವುಗಳ ಪಾಲನೆ ಮತ್ತು ರಕ್ಷಣೆ ನಮ್ಮ ಕರ್ತವ್ಯ ಳಾಗಿವೆ. ಅಲ್ಲಾಹನ ವಿಶ್ವಸ್ಥ ಹೊಣೆಗಳಂತೆ ಈ ಹೊಣೆಗಳಲ್ಲೂ ಚ್ಯುತಿಯುಂಟು ಮಾಡುವುದು ಅಪರಾಧವಾಗಿದೆ. ಪವಿತ್ರ ಕುರ್‌ಆನ್ ಈ ಕುರಿತು ಹೀಗೆ ಆದೇಶಿಸಿದೆ:

"ಓ ಸತ್ಯವಿಶ್ವಾಸಿಗಳೇ, ತಿಳುವಳಿಕೆ ಇದ್ದೂ ಅಲ್ಲಾಹ್ ಮತ್ತು ರಸೂಲರೊಂದಿಗೆ ವಿಶ್ವಾಸಘಾತಕವೆಸಗಬೇಡಿರಿ ಮತ್ತು ನಿಮ್ಮ ಅಮಾನತ್ (ವಿಶ್ವಸ್ಥನಿಧಿ)ಗಳಲ್ಲಿ ವಿದ್ರೋಹ ವೆಸಗಬೇಡಿರಿ." (8:27)

ನೈಜ ಸತ್ಯವಿಶ್ವಾಸಿಗಳ ಗುಣ-ಶೇಷಗಳನ್ನು ವರ್ಣಿಸುತ್ತಾ ಪವಿತ್ರ ಕುರ್‌ಆನಿನಲ್ಲಿ ಹೀಗೆನ್ನಲಾಗಿದೆ:

"ತಮ್ಮ ವಿಶ್ವಸ್ಥ ಸೊತ್ತುಗಳನ್ನು ಹಾಗೂ ತಮ್ಮ ವಾಗ್ದಾನಗಳನ್ನು ಪಾಲಿಸುತ್ತಾರೆ." (23:8)

ಈ ಸಂದರ್ಭದಲ್ಲಿ ಪ್ರವಾದಿ ಮುಹಮ್ಮದ್(ಸ) ಕಪಟವಿಶ್ವಾಸಿಗಳು ಯಾರೆಂಬು ದನ್ನು ಗುರುತಿಸಲು ಸೂಚಿಸಿದ ಕೆಲವು ಮಾನದಂಡಗಳೂ ನಮ್ಮ ಗಮನದಲ್ಲಿರ ಬೇಕಾದುದು ಅಗತ್ಯ. ಪ್ರವಾದಿ(ಸ) ಹೇಳಿರುವರು;

"ನಾಲ್ಕು ಗುಣಗಳಿವೆ. ಒಬ್ಬ ವ್ಯಕ್ತಿಯಲ್ಲಿ ಈ ನಾಲ್ಕೂ ಗುಣಗಳು ಇದ್ದಲ್ಲಿ ಅವನು ಅಪ್ಪಟ ಕಪಟವಿಶ್ವಾಸಿ. ಇನ್ನು ಯಾರಲ್ಲಾದರೂ ಈ ಪೈಕಿ ಒಂದು ಗುಣ ಕಂಡು ಬಂದರೆ- ಅವನು ಅದನ್ನು ಬಿಟ್ಟು ಬಿಡುವವರೆಗೂ ಅವನಲ್ಲಿ ಕಪಟ ವಿಶ್ವಾಸದ ಒಂದು ಗುಣ ಇದೆಯೆಂದರ್ಥ. ಆ ಗುಣಗಳಾವುದೆಂದರೆ, ಒಬ್ಬನ ಬಳಿ ಒಂದು ವಸ್ತುವನ್ನು ವಿಶ್ವಸ್ಥವಾಗಿ ವಹಿಸಿಕೊಟ್ಟಿರುವಾಗ ಅವನು ಅದರಲ್ಲಿ ವಂಚನೆ (ವಿಶ್ವಾಸದ್ರೋಹ) ಮಾಡುವುದು. ಮಾತನಾಡುವಾಗ ಸುಳ್ಳು ಹೇಳುವುದು, ವಚನ ಕೊಟ್ಟರೆ ವಚನಭಂಗ ಮಾಡುವುದು, ಜಗಳವಾದಾಗ ಅಲ್ಲಾಹನ ಆಜ್ಞೋಲ್ಲಂಘನೆ (ಬಯ್ಗಾಟಕ್ಕೆ) ಇಳಿಯುವುದು." (ಬುಖಾರಿ, ಮುಸ್ಲಿಮ್)

ಪ್ರವಾದಿ ಮುಹಮ್ಮದ್‌ರ(ಸ) ಈ ಹೇಳಿಕೆಯಂತೆ ವಿಶ್ವಾಸದ್ರೋಹ, ವಚನಭಂಗ, ಸುಳ್ಳು ಮತ್ತು ಬಯ್ಗಾಟಗಳು ಮನುಷ್ಯನನ್ನು ಕಪಟವಿಶ್ವಾಸಿಯಾಗಿ ಮಾರ್ಪಡಿಸುವ ದುರ್ಗುಣಗಳಾಗಿವೆ. ಒಬ್ಬ ವ್ಯಕ್ತಿ ಬಾಯಿಯಲ್ಲಿ ತಾನು ಮುಸ್ಲಿಮನೆಂದು ಎಷ್ಟೇ ಹೇಳಿಕೊಂಡರೂ ಅವನು ಈ ಗುಣಗಳನ್ನು ತ್ಯಜಿಸುವ ತನಕ ಕಪಟಿಯೆಂದೇ ಪರಿಗಣಿಸಲ್ಪಡುವನು.

## ಸತ್ಯನಿಷ್ಠೆ

ವ್ಯವಹಾರದಲ್ಲಿ ಪ್ರಾಮಾಣಿಕತೆ ಮತ್ತು ಸತ್ಯನಿಷ್ಠೆಗೆ ಇಸ್ಲಾಮ್ ಮೂಲಭೂತ ಪ್ರಾಮುಖ್ಯತೆ ಕೊಟ್ಟಿದೆ. ಪ್ರಾಮಾಣಿಕ ಸತ್ಯವಿಶ್ವಾಸವುಳ್ಳ ಮುಸ್ಲಿಮನು ತನ್ನ ಎಲ್ಲ ವ್ಯವಹಾರಗಳಲ್ಲೂ ಸತ್ಯ ಮತ್ತು ಪ್ರಾಮಾಣಿಕತೆಗಳನ್ನು ಪಾಲಿಸುತ್ತಾನೆ. ಸ್ವತಃ ತನ್ನ ಕರ್ತವ್ಯಗಳನ್ನು ಅವನು ಕುಂದು-ಕೊರತೆಗಳಿಲ್ಲದೆ ಪ್ರಾಮಾಣಿಕವಾಗಿ ನಿರ್ವಹಿಸುತ್ತಾನೆ. ತಾನು ಇತರರಿಂದ ಕೆಲಸ ಮಾಡಿಸಿದರೆ ಅವರಿಗೆ ಅವರ ಕೆಲಸದ ಪ್ರತಿಫಲವನ್ನು, ಮಜೂರಿ ಅಥವಾ ವೇತನವನ್ನು ಬಹಳ ನ್ಯಾಯ ಪೂರ್ಣವಾಗಿ, ಯಾವುದೇ ವಿಳಂಬ ಇಲ್ಲದೆ ಪಾವತಿಸುತ್ತಾನೆ. ಮೋಸ-ವಂಚನೆಗಳ ಮೂಲಕ ಅವನು ಚಿಕ್ಕಾಸನ್ನೂ ಸಂಪಾದಿಸುವುದಿಲ್ಲ. ಇತರರ ಅಜ್ಞಾನ ಮತ್ತು ಅಸಹಾಯಕತೆಗಳಿಂದ ದುರ್ಲಾಭ ಪಡೆಯುವುದಿಲ್ಲ. ತನ್ನ ನ್ಯಾಯಬದ್ಧ ಹಕ್ಕಿಗಿಂತ ಹೆಚ್ಚಿನದನ್ನು ಗಳಿಸಲು ಪ್ರಯತ್ನಿಸುವುದಿಲ್ಲ. ಎಷ್ಟೇ ದೊಡ್ಡ ಲೌಕಿಕ ಲಾಭವಿದ್ದರೂ ತನ್ನ ಸತ್ಯವಿಶ್ವಾಸಕ್ಕೆ ಕುಂದುಂಟುಮಾಡುವ ಅಥವಾ ಇತರರಿಗೆ ಅನ್ಯಾಯವಾಗುವಂತಹ ಕೃತ್ಯಗಳಿಗೆ ಅವನು ಕೈ ಹಾಕುವುದಿಲ್ಲ. ಏಕೆಂದರೆ ಅಂತಹ ಕೃತ್ಯಗಳನ್ನೆಸಗುವವರು ಅಲ್ಲಾಹನ ದೃಷ್ಟಿಯಲ್ಲೂ ಜನರ ದೃಷ್ಟಿಯಲ್ಲೂ ನಿಕೃಷ್ಟ ಮಾನವರಾಗಿರುತ್ತಾರೆ ಎಂಬುದನ್ನು ಅವನು ಬಲ್ಲನು.

ಪವಿತ್ರ ಕುರ್‌ಆನ್ ಈ ರೀತಿ ಎಚ್ಚರಿಸಿದೆ:

"ಅಲ್ಲಾಹನ ಕರಾರನ್ನೂ ತಮ್ಮ ಪ್ರತಿಜ್ಞೆಗಳನ್ನೂ ಅಲ್ಪ ಬೆಲೆಗೆ ಮಾರಿದವರಿಗೆ ಪರಲೋಕದಲ್ಲಿ ಏನೂ ಪಾಲಿರುವುದಿಲ್ಲ. ಅಲ್ಲಾಹನು ಪುನರುತ್ಥಾನ ದಿನ ಅವರೊಡನೆ ಮಾತಾಡಲಿಕ್ಕೂ ಇಲ್ಲ; ಅವರ ಕಡೆ ನೋಡಲಿಕ್ಕೂ ಇಲ್ಲ ಮತ್ತು ಅವರನ್ನು ಶುದ್ಧೀಕರಿಸಲಿಕ್ಕೂ ಇಲ್ಲ. ಅವರಿಗೆ ಕಠಿಣ ವೇದನಾಯುಕ್ತ ಯಾತನೆಯಿದೆ." (3:77)

ವ್ಯವಹಾರದಲ್ಲಿ ಮೋಸ, ವಂಚನೆಗಳನ್ನು ಮಾಡುವುದು ಕೇವಲ ಸತ್ಯಧಿಕ್ಕಾರಿಗಳಿಗೆ ಭೂಷಣವಾದ ಗುಣವೆಂದು ಅವನಿಗೆ ತಿಳಿದಿರುವುದರಿಂದ ಅವನು ಅವುಗಳಿಂದ ಸಂಪೂರ್ಣ ದೂರವಿರುತ್ತಾನೆ.

**"ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ. ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ ಮತ್ತು ಅಳತೆ ಮಾಡಿ ಅಥವಾ ತೂಕ ಮಾಡಿ (ಜನರಿಗೆ) ಕೊಡುವಾಗ ಕಡಿಮೆ ಕೊಡುತ್ತಾರೆ. ಇವರನ್ನು ಎಬ್ಬಿಸಿ ತರಲಾಗು ವುದೆಂದು ಇವರು ಗ್ರಹಿಸುವುದಿಲ್ಲವೇ? ಒಂದು ಮಹಾದಿನದಂದು- (ಅದು) ಎಲ್ಲಾ ಜನರೂ ಸರ್ವಲೋಕಗಳ ಪಾಲಕ ಪ್ರಭುವಿನ ಮುಂದೆ ನಿಲ್ಲುವ ದಿನವಾಗಿದೆ."**

**(ಪವಿತ್ರ ಕುರ್‌ಆನ್, 83:1-6)**

ನಿಜವಾಗಿ ಈ ವಂಚನೆಯು, ಪರಲೋಕದ ವಿಚಾರಣೆಯ ಪ್ರಜ್ಞೆ ಇಲ್ಲದಿರು ವುದರ ಪರಿಣಾಮವ್ವಾಗಿದೆ. ಪರಲೋಕದಲ್ಲಿ ಅಲ್ಲಾಹನ ವಿಚಾರಣೆಯನ್ನು ಎದುರಿಸ ಬೇಕಾದೀತೆಂಬ ಪ್ರಜ್ಞೆಯುಳ್ಳ ಸತ್ಯವಿಶ್ವಾಸಿಯು ಈ ವಂಚನೆಯ ಗುಣದಿಂದ ಮತ್ತು ಎಲ್ಲಾ ಬಗೆಯ ಅಕ್ರಮಗಳಿಂದ ಮುಕ್ತನಾಗಿರುತ್ತಾನೆ. ಅವನು ಹೆಚ್ಚೆಹೆಚ್ಚಿಗೂ ತನ್ನ ಸೃಷ್ಟಿಕರ್ತನ ಆದೇಶಗಳನ್ನು ಪಾಲಿಸುತ್ತಾನೆ. ಅವನು ತನ್ನ ಸೃಷ್ಟಿಕರ್ತನ ಈ ಆದೇಶವನ್ನು ಸದಾ ನೆನಪಿಟ್ಟು ಅನುಸರಿಸುತ್ತಾನೆ:

**"ಅಳತೆ ಮಾಡಿ ಕೊಡುವಾಗ ಪೂರ್ಣ ತುಂಬಿಸಿ ಕೊಡಿರಿ. ತೂಗುವಾಗ ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಇದು ಒಳ್ಳೆಯ ಕ್ರಮ ಮತ್ತು ಪರಿಣಾಮದ ದೃಷ್ಟಿಯಿಂದಲೂ ಇದುವೇ ಉತ್ತಮ."** **(ಪವಿತ್ರ ಕುರ್‌ಆನ್, 17:35)**

ವ್ಯಾಪಾರದಲ್ಲಿ ಪ್ರಾಮಾಣಿಕತೆಯನ್ನು ಪಾಲಿಸುವ ವರ್ತಕನನ್ನು ಪ್ರವಾದಿ(ಸ) ಬಹಳಷ್ಟು ಶ್ಲಾಘಿಸಿರುವರು:

"ಸತ್ಯವಂತ ಮತ್ತು ಪ್ರಾಮಾಣಿಕ ವ್ಯಾಪಾರಿಯು ಪರಲೋಕದಲ್ಲಿ ಪ್ರವಾದಿಗಳು, ಸಿದ್ದೀಕ್‌ಗಳು ಮತ್ತು ಶಹೀದ್‌ಗಳ ಜೊತೆಗಿರುವನು." (ತಿರ್ಮಿದಿ, ಇಬ್ನುಮಾಜಃ)

ಯಾರೂ ಇನ್ನೊಬ್ಬರ ಸೊತ್ತು-ಸಂಪತ್ತುಗಳನ್ನು ಅಕ್ರಮ ವಿಧಾನಗಳಿಂದ ಕಬಳಿಸ ಬಾರದೆಂದು ಪವಿತ್ರ ಕುರ್‌ಆನಿನಲ್ಲಿ ಆದೇಶಿಸಲಾಗಿದೆ. ತನ್ನದಲ್ಲದ ಹಕ್ಕನ್ನು ತನ್ನದಾಗಿಸಿ ಕೊಂಡು ಬೇರೊಬ್ಬನನ್ನು ವಂಚಿಸಲಿಕ್ಕಾಗಿ ಅಧಿಕಾರಿಗಳಿಗೆ ಲಂಚ ತಿನ್ನಿಸುವುದನ್ನು ಮತ್ತಿತರ ಅಕ್ರಮಗಳನ್ನು ಕೂಡಾ ಪವಿತ್ರ ಕುರ್‌ಆನ್ ವಿರೋಧಿಸಿದೆ:

**"ನೀವು ನಿಮ್ಮ ಸಂಪತ್ತನ್ನು ಪರಸ್ಪರ ಅನುಚಿತ ರೀತಿಯಿಂದ ಕಬಳಿಸಬಾರದು ಮತ್ತು ನಿಮಗೆ ಇತರರ ಸಂಪತ್ತಿನ ಒಂದಂಶವನ್ನು ಉದ್ದೇಶಪೂರ್ವಕವಾಗಿ ಅಕ್ರಮ ರೂಪದಿಂದ ಕಬಳಿಸುವ ಸಂದರ್ಭ ಸಿಗುವಂತೆ ಅವುಗಳನ್ನು ಅಧಿಕಾರಿಗಳ ಮುಂದೆ ಸಮರ್ಪಿಸಬಾರದು."** **(2:188)**

ಸತ್ಯವಿಶ್ವಾಸಿಯು ಪ್ರತಿಯೊಂದು ವಿಷಯದಲ್ಲಿ ದೇವನಿಶ್ಚಿತ ನಿಯಮಗಳನ್ನು ಸೂಕ್ಷ್ಮವಾಗಿ ಪಾಲಿಸಲು ಪ್ರಯತ್ನಿಸುತ್ತಾನೆ. ಕೇವಲ ಧರ್ಮಸಮ್ಮತವಾದ ಆದಾಯದಲ್ಲೇ ಅವನು ತೃಪ್ತಿಪಡುತ್ತಾನೆ. ಧರ್ಮಬಾಹಿರ ಅಥವಾ ಹರಾಮ್ ಆದಾಯವನ್ನು ಅವನು ಕಣ್ಣೆತ್ತಿಯೂ ನೋಡುವುದಿಲ್ಲ. ಅವನು ಅವುಗಳನ್ನು ಮಲಿನ ಮತ್ತು ಹಾನಿಕಾರಕವೆಂದೇ ಪರಿಗಣಿಸುತ್ತಾನೆ. ಅಂತಹ ಅಕ್ರಮ ಆದಾಯವನ್ನು ಅವನು ಸಂಪೂರ್ಣ ವರ್ಜಿಸುತ್ತಾನೆ ಪ್ರವಾದಿವರ್ಯರು(ಸ) ಅಕ್ರಮ ಆದಾಯದ ವಿರುದ್ಧ ಉಗ್ರ ಎಚ್ಚರಿಕೆ ಕೊಟ್ಟಿರುವರು:

ಹಝ್ರತ್ ಅಬೂಹುರೈರಾ(ರ) ಉಲ್ಲೇಖಿಸಿರುವಂತೆ ಪ್ರವಾದಿ(ಸ) ಹೀಗೆ ಹೇಳಿರುವರು

"ಅಲ್ಲಾಹನು ಪಾವನನು. ಅವನು ಶುದ್ಧ ವಸ್ತುಗಳನ್ನು ಮಾತ್ರವೇ ಸ್ವೀಕರಿಸುವನು. ಅವನು ತನ್ನ ಸಂದೇಶವಾಹಕರಿಗೆ ಕೊಟ್ಟ ಆದೇಶವನ್ನೇ ಎಲ್ಲ ಸತ್ಯವಿಶ್ವಾಸಿಗಳಿಗೂ ಕೊಟ್ಟಿರುವನು. ಸಂದೇಶವಾಹಕರೇ! ಶುದ್ಧ ವಸ್ತುಗಳನ್ನೇ ಭಕ್ಷಿಸಿರಿ ಮತ್ತು ಸತ್ಕರ್ಮಗಳನ್ನು ಮಾಡಿರಿ ಎಂದು ಅವನು ಅಪ್ಪಣೆ ಕೊಟ್ಟಿರುವನು ಮತ್ತು ಅವನು "ಸತ್ಯವಿಶ್ವಾಸಿಗಳೇ, ನಾವು ನಿಮಗೆ ದಯಪಾಲಿಸಿದ್ದರಲ್ಲಿ ಶುದ್ಧ ವಸ್ತುಗಳನ್ನೇ ಭಕ್ಷಿಸಿರಿ" ಎಂದು ಆದೇಶಿಸಿರುವನು. ಬಳಿಕ ಪ್ರವಾದಿವರ್ಯರು(ಸ) ಒಬ್ಬ ವ್ಯಕ್ತಿಯ ಬಗ್ಗೆ ಪ್ರಸ್ತಾಪಿಸಿದರು. "ಆ ವ್ಯಕ್ತಿ ಬಹಳ ದೀರ್ಘ ಪ್ರಯಾಣ ಮಾಡುತ್ತಾನೆ ಮತ್ತು ಬಾನಿನೆಡೆಗೆ ಕೈ ಎತ್ತಿ 'ಒಡೆಯಾ!' ಎನ್ನುತ್ತಾ ಪ್ರಾರ್ಥಿಸುತ್ತಾನೆ. ಆದರೆ ಅವನ ಭಕ್ಷ್ಯ ಹರಾಮ್ ಆಗಿರುತ್ತದೆ. ಅವನ ಪಾನೀಯ ಹರಾಮ್ ಆಗಿರುತ್ತದೆ. ಅವನ ವಸ್ತ್ರ ಹರಾಮ್ ಆಗಿರುತ್ತದೆ ಮತ್ತು ಅದರಲ್ಲೆಲ್ಲಾ ಹರಾಮ್ ಮಿಶ್ರಿತವಾಗಿರುತ್ತದೆ. ಹೀಗಿರುತ್ತಾ ಅವನ ಪ್ರಾರ್ಥನೆ ಸ್ವೀಕೃತವಾಗುವುದು ಹೇಗೆ?"

(ಮುಸ್ಲಿಮ್)

ಒಬ್ಬ ವ್ಯಕ್ತಿ ಎಷ್ಟು ದೀನನಾಗಿ ಪ್ರಾರ್ಥಿಸಿದರೂ ಅವನ ಜೀವನಾಧಾರ ಮತ್ತು ಆದಾಯಗಳೆಲ್ಲ ನಿಷಿದ್ಧ ಮೂಲಗಳಿಂದಾಗಿದ್ದರೆ ಅವನ ಪ್ರಾರ್ಥನೆಗಳು ಸ್ವೀಕಾರಾರ್ಹ ವಾಗುವುದಿಲ್ಲ ಎಂದು ಇದರಿಂದ ವ್ಯಕ್ತವಾಗುತ್ತದೆ.

"ನಿಷಿದ್ಧ ಆಹಾರದಿಂದ ಪೋಷಿಸಲ್ಪಟ್ಟ ಮಾಂಸವು(ಶರೀರವು) ಸ್ವರ್ಗವನ್ನು ಪ್ರವೇಶಿಸಲಾರದು. ನಿಷಿದ್ಧ ಆಹಾರದಿಂದ ಪೋಷಿಸಲ್ಪಟ್ಟ ಮಾಂಸ ನರಕ ತಕ್ಕುದಾಗಿದೆ" ಎಂದು ಪ್ರವಾದಿವರ್ಯರು(ಸ) ಹೇಳಿರುವರು. (ಅಹ್ಮದ್, ದಾರಿಮಿ, ಬೈಹಕಿ)

ಸತ್ಯವಿಶ್ವಾಸಿಯು ಹರಾಮ್ ವಸ್ತುಗಳಿಂದ ದೂರವಿರುವುದು ಮಾತ್ರವಲ್ಲದೆ, ಹರಾಮ್ ಆಗಿದೆಯೋ ಅಥವಾ ಹಲಾಲ್ ಆಗಿದೆಯೋ ಎಂಬ ಸಂದೇಹವಿರುವಂತಹ ವಸ್ತುಗಳಿಂದಲೂ ದೂರವಿರುತ್ತಾನೆ. ಈ ಕುರಿತು ಪ್ರವಾದಿ ಮುಹಮ್ಮದ್‌ರ(ಸ) ಈ ವಚನವು ಬಹಳ ಗಮನಾರ್ಹವಾಗಿದೆ:

"ಹಲಾಲ್ ಯಾವುದೆಂಬುದು ಸ್ಪಷ್ಟವಿದೆ. ಹರಾಮ್ ಯಾವುದೆಂಬುದು ಸ್ಪಷ್ಟವಿದೆ. ಇವೆರಡರ ಮಧ್ಯೆ ಕೆಲವು ಸಂಶಯಾಸ್ಪದ ವಸ್ತುಗಳಿವೆ. ಅವುಗಳ ಕುರಿತು ಅನೇಕರಿಗೆ ತಿಳಿದಿರುವುದಿಲ್ಲ. ಯಾರು ಈ ಸಂಶಯಾಸ್ಪದ ವಸ್ತುಗಳಿಂದ ದೂರವುಳಿಯುವನೋ ಅವನು

ನ್ನ ಧರ್ಮವನ್ನೂ ತನ್ನ ಮಾನವನ್ನೂ ರಕ್ಷಿಸಿಕೊಂಡನು. ಯಾರು ಈ ಸಂಶಯಾಸ್ಪದ ಸ್ತುಗಳಿಗೆ ಕೈ ಹಾಕಿದನೋ ಅವನು ಹರಾಮ್‌ಗೆ ಕೈ ಹಾಕಿದನು. ಪ್ರಾಣಿಗಳನ್ನು ಮೇಯಿಸು ವನು ನಿಷಿದ್ಧ ಸ್ಥಳದ ಅಕ್ಕಪಕ್ಕದಲ್ಲೇ ಮೇಯಿಸತೊಡಗಿದರೆ ಅವನು ನಿಷಿದ್ಧ ಸ್ಥಳಗಳಲ್ಲೂ ವುಗಳನ್ನು ಮೇಯಿಸುವನು ಎಂದರ್ಥ. ಕೇಳಿರಿ! ಪ್ರತಿಯೊಬ್ಬ ಅರಸನಿಗೂ ಒಂದು ಮೇಯಿಸುವ ಸ್ಥಳವಿರುತ್ತದೆ. ಕೇಳಿರಿ! ಅಲ್ಲಾಹನು ನಿಷೇಧಿಸಿರುವ ಕರ್ಮಗಳೇ ಅಲ್ಲಾಹನ ಷಿದ್ಧ ಮೇಯಿಸುವ ಸ್ಥಳವಾಗಿದೆ." (ಬುಖಾರಿ, ಮುಸ್ಲಿಮ್)

## ಲಜ್ಜೆ

ಲಜ್ಜೆ ಎಂಬುದು ಇಸ್ಲಾಮ್ ಧರ್ಮದ ಪ್ರಧಾನ ಶಿಕ್ಷಣಗಳಲ್ಲೊಂದಾಗಿದೆ. ಲಜ್ಜೆ ಮನುಷ್ಯನನ್ನು ಅಶ್ಲೀಲ ಮತ್ತು ದುಷ್ಟ ಕೃತ್ಯಗಳಿಂದ ರಕ್ಷಿಸುವ ಅಸ್ತ್ರವಾಗಿದೆ. ಪವಿತ್ರ ಖುರ್‌ಆನಿನಲ್ಲಿ ಇಸ್ಲಾಮಿನ ಕೆಲವು ಪ್ರಮುಖ ಆದೇಶಗಳನ್ನು ಒಂದೆಡೆ ಈ ರೀತಿ ಮುಂದಿಡಲಾಗಿದೆ:

"ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯದ ಆಜ್ಞೆ ನೀಡುತ್ತಾನೆ ಮತ್ತು ಅಶ್ಲೀಲ ಕಾರ್ಯ, ದುಷ್ಕೃತ್ಯ, ಅಕ್ರಮ, ಅತ್ಯಾಚಾರಗಳನ್ನು ನಿಷೇಧಿಸು ತ್ತಾನೆ. ನೀವು ಜಾಗ್ರತರಾಗಲಿಕ್ಕಾಗಿ ಅವನು ನಿಮಗೆ ಉಪದೇಶ ನೀಡುತ್ತಾನೆ." (16:90)

ಈ ವಾಕ್ಯದಲ್ಲಿ ಮನುಷ್ಯರಿಗೆ ತಮ್ಮ ಚಾರಿತ್ರ್ಯದಲ್ಲಿ 3 ಗುಣಗಳನ್ನು ಅವಶ್ಯವಾಗಿ ರೂಢಿಸಿಕೊಳ್ಳುವಂತೆ ಆದೇಶಿಸಲಾಗಿದೆ. 1) ನ್ಯಾಯ 2) ವಿಶೇಷ ಸೌಜನ್ಯ 3) ಬಂಧುಗಳಿಗೆ ದಾನ ಅಥವಾ ಅವರ ಬಗ್ಗೆ ಔದಾರ್ಯ. ಜೊತೆಗೆ 3 ಗುಣಗಳಿಂದ ದೂರವಿರುವಂತೆಯೂ ಅವರಿಗೆ ಆದೇಶಿಸಲಾಗಿದೆ. 1) ಅಶ್ಲೀಲತೆ 2) ದುಷ್ಟತೆ 3) ಅಕ್ರಮ ಮತ್ತು ಮರ್ದನ.

ಪ್ರವಾದಿ ಮುಹಮ್ಮದ್(ಸ) ಹೀಗೆ ಹೇಳಿರುವರು:

"ಲಜ್ಜೆಯೆಂಬುದು ಅಡಿಯಿಂದ ಮುಡಿತನಕ (ಸಂಪೂರ್ಣ) ಒಳಿತೇ ಆಗಿದೆ."

(ಬುಖಾರಿ, ಮುಸ್ಲಿಮ್)

ಲಜ್ಜೆ ಸ್ವತಃ ಒಳಿತಾಗಿರುವ ಜೊತೆಗೇ, ಇತರ ಅನೇಕ ಒಳಿತುಗಳಿಗೆ ಜನ್ಮ ಕೊಡುವ ಸಾಮರ್ಥ್ಯವನ್ನೂ ಹೊಂದಿದೆ. ಪ್ರವಾದಿ(ಸ) ಹೇಳುತ್ತಾರೆ:

"ಲಜ್ಜೆಯು ಒಳಿತನ್ನಲ್ಲದೆ ಬೇರೇನನ್ನೂ ಕೊಡುವುದಿಲ್ಲ." (ಬುಖಾರಿ, ಮುಸ್ಲಿಮ್)

ಲಜ್ಜೆಯು ಒಳಿತಿನ ಬುಗ್ಗೆಯಾಗಿರುವಂತೆ, ನಿರ್ಲಜ್ಜೆಯು ಕೆಡುಕುಗಳ ಬುಗ್ಗೆಯಾಗಿದೆ. ಲಜ್ಜೆ ಇಲ್ಲದ ಮನುಷ್ಯನು ಯಾವ ಕೆಡುಕನ್ನೂ ಎಸಗಲು ಹೇಸುವುದಿಲ್ಲ. ಈ ಕುರಿತು ಪ್ರವಾದಿ(ಸ) ಹೀಗೆ ಹೇಳಿರುವರು:

"ಈ ಹಿಂದಿನ ಪ್ರವಾದಿಗಳಿಂದ ಜನರು ಕಲಿತ ಅನೇಕ ಬೋಧನೆಗಳ ಪೈಕಿ - ನಿಮಗೆ ಲಜ್ಜೆ ಇಲ್ಲದಿದ್ದರೆ ನೀವೇನು ಬೇಕಾದರೂ ಮಾಡಿರಿ - ಎಂಬುದೂ ಒಂದು." (ಬುಖಾರಿ)

ಇಸ್ಲಾಮ್ ಧರ್ಮವು ವಿರೋಧಿಸಿರುವಂತಹ ಅಶ್ಲೀಲ ಕೃತ್ಯಗಳ ಪೈಕಿ ವ್ಯಭಿಚಾರವು ಅತಿದೊಡ್ಡ ಅಶ್ಲೀಲ ಕೃತ್ಯವಾಗಿದೆ. ವ್ಯಭಿಚಾರವನ್ನು ಅತ್ಯುಗ್ರವಾಗಿ ವಿರೋಧಿಸುವ ಇಸ್ಲಾಮ್

ಧರ್ಮವು, ಅದನ್ನೆಸಗುವವರಿಗೆ ಅತ್ಯುಗ್ರ ಶಿಕ್ಷೆಯನ್ನೂ ನಿಶ್ಚಯಿಸಿದೆ. ಪವಿತ್ರ ಕುರ್‌ಆನಿನಲ್ಲಿ ವ್ಯಭಿಚಾರದ ವಿರುದ್ಧ ಈ ರೀತಿ ಎಚ್ಚರಿಸಲಾಗಿದೆ:

"ವ್ಯಭಿಚಾರದ ಹತ್ತಿರವೂ ಸುಳಿಯಬೇಡಿರಿ. ಅದು ಅತಿ ಹೀನ ಕಾರ್ಯ ಮತ್ತು ಅತ್ಯಂತ ಕೆಟ್ಟ ಮಾರ್ಗ." (17:32

ವ್ಯಭಿಚಾರದ ವಿರುದ್ಧ ಕೈಗೊಳ್ಳಬೇಕಾದ ಕ್ರಮಗಳ ಕುರಿತು ಪವಿತ್ರ ಕುರ್‌ಆನ ಸಂಕ್ಷಿಪ್ತವಾಗಿ ಹೀಗೆ ಹೇಳಿದೆ:

"ವ್ಯಭಿಚಾರಿ ಮತ್ತು ವ್ಯಭಿಚಾರಿಣಿ ಇವರಿಬ್ಬರಲ್ಲಿ ಪ್ರತಿಯೊಬ್ಬರಿಗೂ ನೂರ ಛಡಿಯೇಟು ಕೊಡಿರಿ. ನೀವು ಅಲ್ಲಾಹನ ಹಾಗೂ ಅಂತಿಮ ದಿವಸದ ಮೇಲೆ ವಿಶ್ವಾ ವಿರಿಸುತ್ತೀರಾದರೆ ಅಲ್ಲಾಹನ ಧರ್ಮದ ವಿಷಯದಲ್ಲಿ ಅವರ ಮೇಲಿನ ಕನಿಕರ ನಿಮ್ಮನ್ನು ತಡೆಯದಿರಲಿ. ಅವರಿಗೆ ಶಿಕ್ಷೆ ಕೊಡುವಾಗ ಸತ್ಯವಿಶ್ವಾಸಿಗಳ ಒಂದು ಸಮೂ ಅಲ್ಲಿ ಉಪಸ್ಥಿತವಿರಲಿ.." (24:2

ಪ್ರವಾದಿ ಮುಹಮ್ಮದ್(ಸ), ವ್ಯಭಿಚಾರದ ಕುರಿತು ಇಸ್ಲಾಮಿನ ನಿಯಮಗಳನು ಇನ್ನಷ್ಟು ವಿವರವಾಗಿ ತಿಳಿಸಿದ್ದು, ವಿವಾಹಿತ ಸ್ತ್ರೀ-ಪುರುಷರು ವ್ಯಭಿಚಾರವೆಸಗಿದರೆ ಅವರನು ಕಲ್ಲೆಸೆದು ಕೊಲ್ಲಬೇಕೆಂದು ಆದೇಶಿಸಿರುವರು. ವ್ಯಭಿಚಾರದಂತೆ ಸಲಿಂಗ ರತಿಯನ್ನು ಕೂಡ ಇಸ್ಲಾಮ್ ಧರ್ಮವು ಉಗ್ರವಾಗಿ ವಿರೋಧಿಸಿದೆ. ಈ ಕುರಿತು ಒಂದು ಪ್ರವಾದಿ ವಚನ ಹೀಗಿದ

"ಯಾರಾದರೂ ಸಲಿಂಗರತಿಯಲ್ಲಿ ತೊಡಗಿರುವುದನ್ನು ನೀವು ಕಂಡರೆ ಅವರನು ವಧಿಸಿಬಿಡಿರಿ." (ತಿರ್ಮಿದಿ, ಇಬ್ನುಮಾಜ

ಇಸ್ಲಾಮ್ ವ್ಯಭಿಚಾರವನ್ನು ನಿಷೇಧಿಸುವಾಗ ವ್ಯಭಿಚಾರದ ಪ್ರೇರಣೆ ಕೊಡು ಇತರ ವಸ್ತುಗಳನ್ನೂ ನಿಷೇಧಿಸಿದೆ. ಅಶ್ಲೀಲ ಮಾತುಕತೆ, ಕಾಮುಕ ದೃಷ್ಟಿ, ಕಾಮಪ್ರೇರಿ ಸ್ಪರ್ಶ ಮತ್ತು ಕಾಮಪ್ರೇರಿತ ಚಟುವಟಿಕೆಗಳನ್ನೂ ಅದು ವಿರೋಧಿಸಿದೆ.

"ಕೆಟ್ಟ ದೃಷ್ಟಿಯಿಂದ ನೋಡುವುದು ಕಣ್ಣಿನ ವ್ಯಭಿಚಾರವಾಗಿದೆ. (ಕಾಮ ಪ್ರೇರಿ ಶಬ್ದವನ್ನು) ಆಲಿಸುವುದು ಕಿವಿಯ ವ್ಯಭಿಚಾರವಾಗಿದೆ. (ಕಾಮಪ್ರೇರಿತ) ಮಾತು ನಾಲಗೆಯ ವ್ಯಭಿಚಾರವಾಗಿದೆ. (ಕಾಮಪ್ರೇರಿತ) ಮುನ್ನಡೆಯು ಕಾಲಿನ ವ್ಯಭಿಚಾರವಾಗಿದೆ. ಮನಸ್ಸು ಆಶಿಸುತ್ತಾ ಅರಸುತ್ತಾ ಇರುತ್ತದೆ. ಆ ಬಳಿಕ ಗುಪ್ತಾಂಗವು ಒಂದೋ ಅದನ್ನು ಅಂಗೀಕರಿಸುತ್ತ ಇಲ್ಲವೇ ತಿರಸ್ಕರಿಸುತ್ತದೆ" ಎಂದು ಪ್ರವಾದಿ(ಸ) ಹೇಳಿರುವರು. (ಮುಸ್ಲಿಮ್

ಸಮಾಜದಲ್ಲಿ ಅಶ್ಲೀಲ ವಾತಾವರಣವನ್ನು ಸಹಿಸುವುದು ಅಥವಾ ಅಂತಹ ವಾತಾವರ ವನ್ನು ಬೆಳೆಯಲು ಬಿಡುವುದು ಕೂಡಾ ಇಸ್ಲಾಮಿನ ದೃಷ್ಟಿಯಲ್ಲಿ ಒಂದು ಅಪರಾಧವಾಗಿದೆ ಪವಿತ್ರ ಕುರ್‌ಆನ್ ಈ ಕುರಿತು ಹೀಗೆಂದಿದೆ:

"ಸತ್ಯವಿಶ್ವಾಸ ಸ್ವೀಕರಿಸಿಕೊಂಡವರ ಸಮೂಹದಲ್ಲಿ ಅಶ್ಲೀಲತೆ ಹರಡಬೇಕೆಂದ ಬಯಸುವವರು ಇಹಲೋಕದಲ್ಲೂ ಪರಲೋಕದಲ್ಲೂ ವೇದನಾಯುಕ್ತ ಶಿಕ್ಷೆಗೆ ಅರ್ಹ ರಾಗಿದ್ದಾರೆ. ಅಲ್ಲಾಹನು ಬಲ್ಲವನು; ನೀವು ಬಲ್ಲವರಲ್ಲ;" (25:19

ವ್ಯಭಿಚಾರ ಪಾಪವಾಗಿರುವಂತೆ, ಆಧಾರವಿಲ್ಲದೆ ಇನ್ನೊಬ್ಬರ ಮೇಲೆ ವ್ಯಭಿಚಾರದ ರೋಪ ಹೊರಿಸುವುದೂ ಪಾಪವಾಗಿದೆ. ವಿಶೇಷವಾಗಿ ಸುಶೀಲ ಮಹಿಳೆಯರ ಮೇಲೆ ್ಯಭಿಚಾರದ ಅಪವಾದ ಹೊರಿಸುವುದಂತೂ ಘೋರ ಅಪರಾಧವಾಗಿದೆ. ಈ ಕುರಿತು ವಿತ್ರ ಕುರ್‌ಆನ್ ಹೀಗೆ ಹೇಳಿದೆ:

"ಯಾರು ಸುಶೀಲೆಯರ ಮೇಲೆ ಆರೋಪ ಹೊರಿಸುತ್ತಾರೋ, ಆ ಬಳಿಕ ನಾಲ್ವರು ಾಕ್ಷಿದಾರರನ್ನು ತರುವುದಿಲ್ಲವೋ ಅವರಿಗೆ ಎಂಭತ್ತು ಛಡಿಯೇಟು ಕೊಡಿರಿ ಮತ್ತು ಅವರ ಾಕ್ಷ್ಯವನ್ನು ಎಂದಿಗೂ ಸ್ವೀಕರಿಸಬೇಡಿರಿ. ಅವರು ಸ್ವಯಂ ಕರ್ಮಭ್ರಷ್ಟರು." (24:4)

ಪ್ರಖ್ಯಾತ ಸಹಾಬಿ ಹರ್ಝ್ರತ್ ಅಬೂಹುರೈರಾ(ರ) ಉಲ್ಲೇಖಿಸಿರುವಂತೆ ಒಮ್ಮೆ ್ರವಾದಿ(ಸ) "ಏಳು ವಿನಾಶಕಾರಿ ಮಹಾಪಾಪಗಳಿಂದ ದೂರವಿರಿ" ಎಂದು ಆದೇಶಿಸಿದರು. ಅವರ ಸಂಗಾತಿಗಳು, "ಸಂದೇಶವಾಹಕರೇ ಆ ಸಪ್ತ ಮಹಾಪಾಪಗಳು ಯಾವುವು?" ಎಂದು ್ರಶ್ನಿಸಿದರು: ಆಗ ಪ್ರವಾದಿ(ಸ) ಹೀಗೆ ಉತ್ತರಿಸಿದರು:

"ಬಹುದೇವಾರಾಧನೆ, ಮಾಟ ಮಂತ್ರ ಮಾಡುವುದು, ಅಲ್ಲಾಹನು ನಿಷಿದ್ಧ ೊಳಿಸಿರುವ ಜೀವವನ್ನು ಅನ್ಯಾಯವಾಗಿ ವಧಿಸುವುದು, ಬಡ್ಡಿ ತಿನ್ನುವುದು, ಅನಾಥನ ೊತ್ತನ್ನು ಕಬಳಿಸುವುದು, ಯುದ್ಧದ ವೇಳೆ ಬೆನ್ನು ತಿರುಗಿಸಿ ಓಡುವುದು ಮತ್ತು ುಗ್ಧರೂ ಸುಶೀಲರೂ ಆದ ಸತ್ಯವಿಶ್ವಾಸಿ ಸ್ತ್ರೀಯರ ಮೇಲೆ ವ್ಯಭಿಚಾರದ ಆರೋಪ ೊರಿಸುವುದು." (ಬುಖಾರಿ, ಮುಸ್ಲಿಮ್)

## ವಿನಯಶೀಲತೆ

ಇಸ್ಲಾಮ್ ಧರ್ಮವು ಮನುಷ್ಯನಿಗೆ ಕಲಿಸುವ ಸದ್ಗುಣಗಳ ಪೈಕಿ ಮತ್ತೊಂದು ್ರಮುಖ ಸದ್ಗುಣವೇ ವಿನಯಶೀಲತೆ.

ಪವಿತ್ರ ಕುರ್‌ಆನ್, ವಿನಯಶೀಲತೆಗೆ ವಿರುದ್ಧವಾದ ಅಹಂಕಾರದ ಗುಣವನ್ನು ್ಶೈತಾನನ ಗುಣವೆಂದು ಗುರುತಿಸಿ ಅದನ್ನು ಖಂಡಿಸಿದೆ.

"ಆದರೆ ಇಬ್‌ಲೀಸನು ತನ್ನ ದೊಡ್ಡಸ್ತಿಕೆಯ ಅಹಂಭಾವ ಪ್ರಕಟಿಸಿದನು ಮತ್ತು ಅವನು ಸತ್ಯನಿಷೇಧಿಗಳಲ್ಲಾಗಿ ಬಿಟ್ಟನು." (38:74)

ಅಂದರೆ ಶೈತಾನನು ದೇವಾದೇಶದಂತೆ ಆದಮರೆದುರು(ಅ) ಸಾಷ್ಟಾಂಗವೆರಗಲು ನಿರಾಕರಿಸಿದನು. ಏಕೆಂದರೆ ತಾನು ಆದಮರಿಗಿಂತ(ಅ) ಮೇಲ್ಪಟ್ಟವನೆಂದು ಅವನು ಭಾವಿಸಿದ್ದನು. ಈ ರೀತಿ ಅವನು ಅಹಂಕಾರ ಮತ್ತು ದೊಡ್ಡಸ್ಥಿಕೆಯ ವರ್ತನೆ ತೋರಿ ಕಾಫಿರನಾಗಿ ಬಿಟ್ಟನು.

ಅಹಂಕಾರವು ಶೈತಾನನ ಪಥಭ್ರಷ್ಟತೆಗೆ ಕಾರಣವಾಯಿತೆಂದು ಇಲ್ಲಿ ಹೇಳಲಾಗಿದೆ. ಪವಿತ್ರ ಕುರ್‌ಆನಿನ ಇತರೆಡೆಗಳಲ್ಲಿ ಬೇರೆಬೇರೆ ಕಾಲದ ಸತ್ಯಧಿಕ್ಕಾರಿಗಳ ಪಥಭ್ರಷ್ಟತೆಗೂ ಅಹಂಕಾರವೇ ಕಾರಣವಾಗಿತ್ತೆಂದೂ ಸೂಚಿಸಲಾಗಿದೆ. ಧನ ಮತ್ತು ಅಧಿಕಾರದ ಅಮಲಿನಲ್ಲಿ ಮತ್ತರಾಗಿದ್ದ ಜನರೇ ಎಲ್ಲ ಕಾಲಗಳಲ್ಲೂ ಸತ್ಯವನ್ನು ಧಿಕ್ಕರಿಸುವವರ

ಪೈಕಿ ಮುಂಚೂಣಿಯಲ್ಲಿದ್ದರು. ಅಲ್ಲಾಹ್ ಮತ್ತವನ ಸಂದೇಶವಾಹಕರ ಆಜ್ಞಾಪಾಲನೆ ಮಾಡುವುದು ತಮ್ಮ ಘನತೆಗೆ ಕುಂದೆಂದು ಅವರು ಭಾವಿಸಿಕೊಂಡಿದ್ದರು. ಪವಿತ್ರ ಕುರ್‌ಆನಿನಲ್ಲಿ ಅನೇಕ ಸಂದರ್ಭಗಳಲ್ಲಿ ಇಂತಹ ಅಹಂಭಾವವನ್ನು ಹೆಸರಿಸಿ ಖಂಡಿಸಲಾಗಿದೆ ಹಾಗೂ ಅದರ ವಿರುದ್ಧ ಉಗ್ರ ಎಚ್ಚರಿಕೆಗಳನ್ನು ಕೊಡಲಾಗಿದೆ.

**"ನಮ್ಮ ವಚನಗಳನ್ನು ಸುಳ್ಳಾಗಿಸಿದವರಿಗೆ ಮತ್ತು ಅವುಗಳ ವಿರುದ್ಧ ಉದ್ಧಟತನ ತೋರಿದವರಿಗೆ ಗಗನ ದ್ವಾರಗಳು ಎಷ್ಟು ಮಾತ್ರಕ್ಕೂ ತೆರೆಯಲ್ಪಡಲಾರವು ಎಂಬುದನ್ನು ಖಾತ್ರಿಯಾಗಿ ತಿಳಿದುಕೊಳ್ಳಿರಿ. ಅವರ ಸ್ವರ್ಗ ಪ್ರವೇಶವು ಸೂಜಿಯ ರಂಧ್ರದೊಳಗೆ ಒಂಟೆ ಪ್ರವೇಶಿಸುವಷ್ಟೇ ಅಸಂಭವ. ಅಪರಾಧಿಗಳಿಗೆ ನಮ್ಮಲ್ಲಿ ಇಂತಹ ಪ್ರತಿಫಲವೇ ಸಿಗುತ್ತದೆ.' (7:40)**

ಇನ್ನೊಂದೆಡೆ ಹೀಗೆ ಹೇಳಲಾಗಿದೆ:

**"ಅಲ್ಲಾಹನು ಆತ್ಮಪ್ರಶಂಸಕರನ್ನು ಮತ್ತು ದುರಭಿಮಾನಿಗಳನ್ನು ಮೆಚ್ಚುವುದಿಲ್ಲ.' (57:23)**

ಲೋಕದಲ್ಲಿ ಯಾರಾದರೂ ಬಡ ಜನರು ಅಲ್ಲಾಹನ ಸಂದೇಶವಾಹಕರ ಸತ್ಯಾಹ್ವಾನಕ್ಕೆ ಓಗೊಟ್ಟು ಸತ್ಯವನ್ನು ಸ್ವೀಕರಿಸಿದರೆ ಆ ಅಹಂಕಾರಿಗಳು ಅವರನ್ನು ತಾತ್ಸಾರದ ದೃಷ್ಟಿಯಿಂದ ನೋಡುತ್ತಿದ್ದರು. ಅವರು "ಈ ದರಿದ್ರ ಜನರನ್ನು ನಿಮ್ಮ ಹತ್ತಿರದಿಂದ ತೊಲಗಿಸಿಬಿಡಿರಿ. ಆಗ ನಾವು ನಿಮ್ಮ ಬಳಿಗೆ ಬರುವೆವು" ಎಂದು ಪ್ರವಾದಿಗಳೊಡನೆ ಹೇಳುತ್ತಿದ್ದರು. ಇದಕ್ಕೆ ಪ್ರತಿಕ್ರಿಯೆಯಾಗಿ ಅಲ್ಲಾಹನು ಪ್ರವಾದಿಗಳೊಡನೆ ಹೇಳುತ್ತಾನೆ:

**"ಯಾರು ತಮ್ಮ ಪ್ರಭುವನ್ನು ಸಂಜೆ ಮುಂಜಾನೆಗಳಲ್ಲಿ ಪ್ರಾರ್ಥಿಸುತ್ತಾರೋ ಹಾಗೂ ಅವನ ಸಂಪ್ರೀತಿಯನ್ನರಸುತ್ತಿರುತ್ತಾರೋ ಅವರನ್ನು ನಿಮ್ಮಿಂದ ದೂರಕ್ಕೆ ಅಟ್ಟಬೇಡಿರಿ." (ಪವಿತ್ರ ಕುರ್‌ಆನ್, 6:52)**

ಅಂದರೆ, ಯಾರ ಬಳಿ ಅಲ್ಲಾಹನ ದಾಸ್ಯ ಮತ್ತು ಅವನ ಸಂಪ್ರೀತಿಯ ಸಂಪತ್ತು ಇದೆಯೋ ಅವರಿಗೆ ಬೇರಾವುದೇ ಸಂಪತ್ತಿನ ಅಗತ್ಯವಿಲ್ಲ. ಅವರಿಗೆ ಈ ಸಂಪತ್ತೇ ಧಾರಾಳ ಸಾಕು, ಈ ಸಂಪತ್ತಿನಿಂದಾಗಿ ಅವರೇ ಪ್ರವಾದಿಗಳ ಸಾಮೀಪ್ಯಕ್ಕೆ ಅರ್ಹರಾಗಿರುವರು.

ಅಲ್ಲಾಹನೆದುರು ಹಾಗೂ ಅವನ ದಾಸರೆದುರು ಅಹಂಕಾರ ತೋರುವ ಗುಣವು ಒಂದು ಭೀಕರ ರೋಗವಾಗಿದೆ. ಅದು ಇನ್ನೂ ಅನೇಕ ರೋಗಗಳಿಗೆ ಜನ್ಮ ಕೊಡುತ್ತದೆ. ಈ ಗುಣ ಮನುಷ್ಯನ ಇಹ-ಪರ ಎರಡನ್ನೂ ನಾಶಗೊಳಿಸುವಷ್ಟು ವಿನಾಶಕಾರಿಯಾಗಿದೆ. ಈ ಕುರಿತು ಪ್ರವಾದಿ ಮುಹಮ್ಮದ್‌ರ(ಸ) ವಚನವೊಂದು ಗಮನಾರ್ಹವಾಗಿದೆ:

"ಒಬ್ಬ ವ್ಯಕ್ತಿಯ ಮನದಲ್ಲಿ ಒಂದು ಕಾಳಿನಷ್ಟಾದರೂ ಅಹಂಭಾವವಿದ್ದರೆ ಅವನು ಸ್ವರ್ಗವನ್ನು ಪ್ರವೇಶಿಸಲಾರನು."

ಪ್ರವಾದಿ(ಸ) ಹೀಗೆ ಹೇಳಿದಾಗ ಒಬ್ಬರು "ತನ್ನ ವಸ್ತ್ರಗಳು ಮತ್ತು ತನ್ನ ಪಾದರಕ್ಷೆಗಳು ಉತ್ತಮವಾಗಿರಬೇಕು ಎಂದು ಮನುಷ್ಯನು ಅಪೇಕ್ಷಿಸುತ್ತಾನೆ. (ಇದು ಕೂಡಾ ಅಹಂಭಾವವೆನಿಸುವುದೇ?)" ಆಗ ಪ್ರವಾದಿ(ಸ) ಹೇಳಿದರು:

"ಇಲ್ಲ, ಅಲ್ಲಾಹನು ಸುಂದರನಾಗಿರುವನು ಮತ್ತು ಸೌಂದರ್ಯವನ್ನು ಅವನು ಚ್ಚುತ್ತಾನೆ. ನಿಜವಾಗಿ ಸತ್ಯದೆದುರು ದೊಡ್ಡಸ್ತಿಕೆ ತೋರಿಸುವುದು ಮತ್ತು ಜನರನ್ನು ಳಾಗಿ ಕಾಣುವುದೇ ಅಹಂಭಾವವಾಗಿದೆ." (ಮುಸ್ಲಿಮ್)

ಇನ್ನೊಂದು ಸಂದರ್ಭದಲ್ಲಿ ಪ್ರವಾದಿ(ಸ) ಹೀಗೆ ಹೇಳಿರುವರು:

"ಅಲ್ಲಾಹನು ಹೇಳುತ್ತಾನೆ: ದೊಡ್ಡಸ್ತಿಕೆ ಮತ್ತು ಹಿರಿಮೆಯು ತನ್ನ ಮೇಲ್ವಸ್ತ್ರವಾಗಿದೆ. ನತೆಯು ನನ್ನ ಕೆಳವಸ್ತ್ರವಾಗಿದೆ. ಯಾರಾದರೂ ಇವುಗಳನ್ನು ನನ್ನಿಂದ ಕಿತ್ತುಕೊಳ್ಳಲು ಯಸಿದರೆ ನಾನು ಅವನನ್ನು ನರಕಕ್ಕೆ ಎಸೆಯುವೆನು." (ಮುಸ್ಲಿಮ್)

ಅಂದರೆ ಹಿರಿಮೆ, ದೊಡ್ಡಸ್ತಿಗಳೆಲ್ಲಾ ಕೇವಲ ಅಲ್ಲಾಹನಿಗೆ ಮೀಸಲು, ಅವೆಲ್ಲಾ ವನಿಗೆ ಮಾತ್ರ ಭೂಷಣ. ಎಲ್ಲ ವಿಷಯಗಳಲ್ಲೂ ಅಲ್ಲಾಹನನ್ನೇ ಅವಲಂಬಿಸಿರುವ ತ್ತು ಎಲ್ಲವನ್ನೂ ಅವನಿಂದಲೇ ಪಡೆಯುವ ಮನುಷ್ಯನಿಗೆ ಅದು ಭೂಷನವಲ್ಲ. ಲ್ಲಾಹನ ವಿಷಯದಲ್ಲಿ ಮನುಷ್ಯನು ಅಹಂಕಾರ ತೋರಿದರೆ ಅವನು ತನ್ನ ದಾಸ್ಯದ ೀರೆಗಳನ್ನು ಉಲ್ಲಂಘಿಸಿದಂತಾಗುತ್ತದೆ. ಇನ್ನು ಮನುಷ್ಯರೆದುರು ಅವನು ಅಹಂಕಾರ ೀರಿದರೆ ಮಾನವತೆಯ ಸೀಮೆಗಳನ್ನು ಮುರಿದಂತಾಗುತ್ತದೆ. ಆದ್ದರಿಂದಲೇ ಸತ್ಯವಿಶ್ವಾಸಿ ಸನು ಅಲ್ಲಾಹನೆದುರೂ ಅಹಂಕಾರ ತೋರುವುದಿಲ್ಲ, ತನ್ನಂತಹ ದಾಸರೆದುರೂ ೊಡ್ಡಸ್ತಿಕೆ ತೋರಿಸುವುದಿಲ್ಲ. ತಾನು ಅಲ್ಲಾಹನ ಕೃಪೆಯನ್ನು ಅವಲಂಬಿಸಿರುವ ಮತ್ತು ನಾ ಅವನ ನಿಯಂತ್ರಣದಲ್ಲಿರುವ ಅವನ ದಾಸನೆಂಬ ಪ್ರಜ್ಞೆ ಅವನಲ್ಲಿ ಯಾವಾಗಲೂ ಗೃತವಾಗಿರುತ್ತದೆ. ತನ್ನ ಬಳಿ ಇರುವುದೆಲ್ಲವೂ ಅಲ್ಲಾಹನದೇ, ತಾನಿಚ್ಛಿಸಿದಾಗ ಅವನು ವೆಲ್ಲವನ್ನೂ ತನ್ನಿಂದ ಕಿತ್ತುಕೊಳ್ಳಬಲ್ಲನು. ಆದ್ದರಿಂದ ತನ್ನ ಬಳಿ ಇರುವ ಯಾವುದೇ ಸ್ತುವಿನ ಬಗ್ಗೆ ತಾನು ದುರಭಿಮಾನಪಡುವುದು ಅರ್ಥಹೀನ. ತನ್ನ ಬಳಿ ಏನಿದ್ದರೂ ವೆಲ್ಲಾ ಕೇವಲ ಪರೀಕ್ಷಾ ಸಾಧನಗಳು. ಅವುಗಳ ಬಗ್ಗೆ ಕೃತಜ್ಞನಾಗುವ ಬದಲು ನು ದುರಹಂಕಾರ ತೋರಿಸಿದರೆ ಈ ಪರೀಕ್ಷೆಯಲ್ಲಿ ತಾನು ಸೋತಂತಾಗುತ್ತದೆ ತ್ತು ಅದಕ್ಕೆ ಶಿಕ್ಷೆಯಾಗಿ ನರಕಾಗ್ನಿಗೆ ತುತ್ತಾಗಬೇಕಾಗುತ್ತದೆ ಎಂಬ ತಿಳುವಳಿಕೆ ತ್ಯವಿಶ್ವಾಸಿಗಿರುತ್ತದೆ. ಆದ್ದರಿಂದಲೇ ಸತ್ಯ ವಿಶ್ವಾಸಿಗೆ ಹೆಚ್ಚೆಚ್ಚು ಧನ, ಅಧಿಕಾರಗಳು ಪ್ರಾಪ್ತವಾಗುತ್ತಾ ಹೋದಂತೆಲ್ಲಾ ಅವನಲ್ಲಿ ಅಹಂಕಾರದ ಬದಲು, ದೈನ್ಯತೆ, ವಿನಯ ತ್ತು ಕೃತಜ್ಞತಾಭಾವವು ಹೆಚ್ಚುತ್ತಾ ಹೋಗುತ್ತದೆ. ಅವನು ಹೆಚ್ಚೆಚ್ಚು ದೈನ್ಯತೆ ೊಂದಿಗೆ ಅಲ್ಲಾಹನೆದುರು ಬಾಗುತ್ತಾನೆ. ಅವನ ಈ ದೈನ್ಯತೆ ಮತ್ತು ವಿನಯಗಳು ೇವಲ ತೋರಿಕೆಗಾಗಿರದೆ ಅವು ಅತ್ಯಂತ ಪ್ರಾಮಾಣಿಕ ಹಾಗೂ ಮನಃಪೂರ್ವಕವಾಗಿರು ್ತದೆ. ಈ ವಿನಯಶೀಲತೆಯ ಕಾರಣ ಅವನು ಅಲ್ಲಾಹನ ದೃಷ್ಟಿಯಲ್ಲಂತೂ ೌರವಾನ್ವಿತನಾಗಿಯೇ ಬಿಡುತ್ತಾನೆ. ಇತ್ತ ಮಾನವರ ದೃಷ್ಟಿಯಲ್ಲೂ ಅವನು ಣ್ಣವನಾಗುವುದಿಲ್ಲ. ಅವರ ದೃಷ್ಟಿಯಲ್ಲೂ ಅವನು ಉನ್ನತನೇ ಆಗುತ್ತಾನೆ.

ಪ್ರವಾದಿ(ಸ) ಹೇಳುತ್ತಾರೆ:

"ದಾನದಿಂದ ಸಂಪತ್ತು ಕ್ಷಯಿಸುವುದಿಲ್ಲ. ಕ್ಷಮಾಶೀಲತೆಯ ಕಾರಣ ಅಲ್ಲಾಹ
ತನ್ನ ದಾಸನ ಗೌರವವನ್ನು ಇನ್ನಷ್ಟು ಹೆಚ್ಚಿಸುತ್ತಾನೆ. ಯಾರು ಅಲ್ಲಾಹನಿಗಾಗಿ ವಿನ
ತೋರುವವರೋ ಅವರನ್ನು ಅಲ್ಲಾಹನು ಮತ್ತಷ್ಟು ಉನ್ನತಗೊಳಿಸದೆ ಇರುವುದಿಲ್ಲ."
(ಮುಸ್ಲಿಮ

## ಸೌಮ್ಯತೆ

ಇಸ್ಲಾಮ್ ಮನುಷ್ಯನಲ್ಲಿ ಕಾಣಬಯಸುವ ಇನ್ನೊಂದು ಪ್ರಮುಖ ಗುಣವೆಂದ
ಸೌಮ್ಯತೆ. ಪವಿತ್ರ ಕುರ್‌ಆನಿನಲ್ಲಿ ಪ್ರವಾದಿವರ್ಯರನ್ನುದ್ದೇಶಿಸಿ(ಸ) ಹೀಗೆ ಹೇಳಲಾಗಿದೆ:

**"ನೀವು ಇವರ ಪಾಲಿಗೆ ಅತ್ಯಂತ ಸೌಮ್ಯ ಸ್ವಭಾವಿಯಾಗಿರುವುದು ಅಲ್ಲಾಹ
ಮಹಾ ಕೃಪೆಯಾಗಿದೆ. ನೀವು ಕಠಿಣ ಸ್ವಭಾವಿ ಮತ್ತು ಕಲ್ಲೆದೆಯವರಾಗಿರುತ್ತಿದ್ದ
ಇವರೆಲ್ಲರೂ ನಿಮ್ಮ ಸುತ್ತಮುತ್ತಲಿನಿಂದ ಚದರಿ ಹೋಗುತ್ತಿದ್ದರು." (3-15**

ಒರಟುತನವು ಪ್ರವಾದಿಗಳಿಗೇ ಭೂಷಣವಲ್ಲವೆಂದ ಮೇಲೆ ಇತರರಿಗೆ ಅದ
ಭೂಷಣವೆನಿಸಲು ಸಾಧ್ಯವೇ? ಒಮ್ಮೆ ಪ್ರವಾದಿ(ಸ) ಹೇಳಿದರು:

"ಅಲ್ಲಾಹನು ಸೌಮ್ಯನು. ಅವನು ಸೌಮ್ಯತೆಯನ್ನು ಪ್ರೀತಿಸುತ್ತಾನೆ. ಕಠಿಣ ಸ್ವಭಾವ
ಅಥವಾ(ಅಂತಹ) ಇನ್ನಾವುದೇ ಗುಣಕ್ಕೆ ಕೊಡದಂತಹ ಪ್ರತಿಫಲವನ್ನು ಅವನು ಸೌಮ್ಯತೆ
ಕೊಡುತ್ತಾನೆ." (ಮುಸ್ಲಿಮ್

ಸರ್ವಶಕ್ತನೂ ಸಾರ್ವಭೌಮನೂ ಆಗಿರುವ ಅಲ್ಲಾಹನೇ ತನಗಾಗಿಯೂ ಇತರ
ಗಾಗಿಯೂ ಸೌಮ್ಯತೆಯನ್ನೇ ಮೆಚ್ಚುತ್ತಿರುವಾಗ, ಸಾಮಾನ್ಯ ದಾಸರು ಸೌಮ್ಯತೆಯನ್ನು ಬಿಟ
ಒರಟುತನವನ್ನು ಬೆಳೆಸಿಕೊಳ್ಳುವುದು ಖಂಡಿತ ಅರ್ಥಹೀನ. ಪ್ರವಾದಿ(ಸ) ಹೇಳಿರುವರು:

"ಯಾರ ಬಳಿ ಸೌಮ್ಯತೆ ಇಲ್ಲವೋ ಅವನ ಬಳಿ ಒಳಿತಿಲ್ಲ."

## ಕ್ಷಮಾಶೀಲತೆ

ಕೋಪವನ್ನು ನಿಯಂತ್ರಿಸಬೇಕೆಂಬುದು ಮತ್ತು ಜನರ ತಪ್ಪುಗಳನ್ನು ಕ್ಷಮಿ
ಬೇಕೆಂಬುದು ಇಸ್ಲಾಮ್ ಧರ್ಮವು ಅಪೇಕ್ಷಿಸುವ ಮತ್ತೊಂದು ಮಹತ್ವದ ಸದ್ಗು
ವಾಗಿದೆ. ಪವಿತ್ರ ಕುರ್‌ಆನಿನಲ್ಲಿ ಸ್ವರ್ಗಕ್ಕೆ ಅರ್ಹರಾದ ಸತ್ಯವಿಶ್ವಾಸಿಗಳ ಗು
ವರ್ಣನೆಯನ್ನು ಈ ರೀತಿ ಮಾಡಲಾಗಿದೆ:

**"ಅವರು ಸ್ಥಿತಿವಂತರಾಗಿರುವಾಗಲೂ ದುಸ್ಥಿತಿಯಲ್ಲಿರುವಾಗಲೂ ತಮ್ಮ
ಸಂಪತ್ತನ್ನು ಖರ್ಚು ಮಾಡುತ್ತಾರೆ, ಕೋಪವನ್ನು ನುಂಗಿಕೊಳ್ಳುತ್ತಾರೆ ಮತ್ತು ಇತರ
ಅಪರಾಧಗಳನ್ನು ಕ್ಷಮಿಸುತ್ತಾರೆ. ಇಂತಹ ಸಜ್ಜನರು ಅಲ್ಲಾಹನಿಗೆ ಅತ್ಯಂ
ಮೆಚ್ಚುಗೆಯವರು." (3:34**

ಅಲ್ಲಾಹನ ಮಾರ್ಗದಲ್ಲಿ ವ್ಯಯಿಸುವುದು, ಕೋಪವನ್ನು ನಿಯಂತ್ರಿಸುವುದು ಮತ್ತು
ಕ್ಷಮಾಶೀಲತೆ - ಈ ಗುಣಗಳು ಮನುಷ್ಯನನ್ನು ಸ್ವರ್ಗಕ್ಕೆ ಅರ್ಹನಾಗಿ ಮಾಡುತ್ತವೆ. ಪವಿತ್ರ

ರ್‌ಆನಿನಲ್ಲಿ ಒಂದೆಡೆ ಪ್ರತ್ಯಕ್ಷವಾಗಿ ಪ್ರವಾದಿ ಮುಹಮ್ಮದ್‌ರನ್ನುದ್ದೇಶಿಸಿ(ಸ) ಮತ್ತು ರೋಕ್ಷವಾಗಿ ಸಂಪೂರ್ಣ ಮುಸ್ಲಿಮ್ ಸಮುದಾಯವನ್ನುದ್ದೇಶಿಸಿ ಹೀಗೆ ಹೇಳಲಾಗಿದೆ:

**"ಓ ಪೈಗಂಬರರೇ, ಕ್ಷಮಾಶೀಲರಾಗಿರಿ. ಸರ್ವವಿದಿತ ಒಳಿತುಗಳನ್ನು ಬೋಧಿಸಿರಿ ುತ್ತು ತಿಳಿಗೇಡಿಗಳೊಡನೆ ಜಗಳಾಡಬೇಡಿರಿ. ಶೈತಾನನು ನಿಮ್ಮನ್ನೆಂದಾದರೂ ಚೋದಿಸಿದರೆ ಅಲ್ಲಾಹನ ಅಭಯ ಯಾಚಿಸಿರಿ. ಅವನು ಸಕಲವನ್ನೂ ಆಲಿಸುವವನೂ ರಿಯುವವನೂ ಆಗಿರುತ್ತಾನೆ." (7:199-200)**

ಅಂದರೆ ಕೋಪವೆಂಬುದು ಶೈತಾನನ ಅಸ್ತ್ರವಾಗಿದೆ. ಅದನ್ನು ಹತ್ತಿರ ಸುಳಿಯಲಿಕ್ಕೂ ಡಬಾರದು. ಏನಾದರೂ ಪ್ರಚೋದನೆ ಉಂಟಾದರೂ ಅಲ್ಲಾಹನ ಸಹಾಯ ಪಡೆದು ದರಿಂದ ಮುಕ್ತರಾಗಬೇಕು. ವಿರೋಧಿಗಳನ್ನೂ ಗರಿಷ್ಠ ಮಟ್ಟದಲ್ಲಿ ಕ್ಷಮಿಸಬೇಕು. ಸ್ಲಾಮ್ ಧರ್ಮವಂತೂ ನಮ್ಮೊಡನೆ ಕೆಟ್ಟ ರೀತಿಯಲ್ಲಿ ವರ್ತಿಸುವವರ ಜೊತೆಗೂ ನಾವು ುತ್ತಮವಾಗಿ ವರ್ತಿಸಬೇಕೆಂದೇ ನಮಗೆ ಆದೇಶಿಸುತ್ತದೆ. ಉದಾ:

**"ಸಂದೇಶವಾಹಕರೇ, ಒಳಿತು ಮತ್ತು ಕೆಡುಕು ಸರಿಸಮಾನವಲ್ಲ. ನೀವು ಕೆಡುಕನ್ನು ತ್ಯುತ್ತಮ ಒಳಿತಿನ ಮೂಲಕ ದೂರೀಕರಿಸಿರಿ. ನಿಮ್ಮೊಂದಿಗೆ ಹಗೆತನ ಕಟ್ಟಿಕೊಂಡವನು ನಿಮ್ಮ ಪ್ತ ಮಿತ್ರನಾಗಿ ಬಿಡುವುದನ್ನು ನೀವು ಕಾಣುವಿರಿ." (ಪವಿತ್ರ ಕುರ್‌ಆನ್, 41:34)**

ಕೋಪವೆಂಬುದು ಒಂದು ವ್ಯಾಧಿ ಮತ್ತು ಒಂದು ದೌರ್ಬಲ್ಯವಾಗಿದೆ. ಕೋಪ ಲ್ಲಿರುವಾಗ ಮನುಷ್ಯನಿಗೆ ತಾನೇನು ಮಾಡುತ್ತಿದ್ದೇನೆ ಎಂಬುದರ ಪರಿವೆಯೂ ರುವುದಿಲ್ಲ. ಅವನು ಬುದ್ಧಿ ಆಗ ಮಂದಗೊಂಡಿರುತ್ತದೆ. ಸಾಮಾನ್ಯ ಸ್ಥಿತಿಯಲ್ಲಿ ಾಡಲು ನಾಚಿಕೆ ಪಡುವ ಅನೇಕ ಕೆಲಸಗಳನ್ನು ಅವನು ಕೋಪದ ಭರದಲ್ಲಿ ಮಾಡಿ ಡುತ್ತಾನೆ. ಅದೆಷ್ಟೋ ಮಂದಿ ಕೋಪದ ಭರದಲ್ಲಿ ತಮ್ಮ ಇಹ-ಪರಗಳೆರಡಕ್ಕೂ ನಾಶಕಾರಿಯಾದ ಅನೇಕ ಕೃತ್ಯಗಳನ್ನು ಮಾಡಿ ಬಿಟ್ಟದ್ದುಂಟು. ಆದ್ದರಿಂದ ಕೋಪದ ಮೇಲೆ ನಿಯಂತ್ರಣ ಅತ್ಯಗತ್ಯ.

ಹಝ್ರತ್ ಅಬೂಹುರೈರಾ(ರ) ಉಲ್ಲೇಖಿಸಿರುವಂತೆ ಒಮ್ಮೆ ಒಬ್ಬ ವ್ಯಕ್ತಿ ಪ್ರವಾದಿ ಮುಹಮ್ಮದ್‌ರ(ಸ) ಬಳಿ ಬಂದು "ನನಗೆ ಬೋಧಿಸಿರಿ" ಎಂದು ಹೇಳಿದನು. ಪ್ರವಾದಿ(ಸ) ಹೇಳಿದರು. "ನೀನು ಕೋಪಿಸಬೇಡ."

ಆ ವ್ಯಕ್ತಿ ಮತ್ತೆ ಮತ್ತೆ"ನನಗೆ ಬೋಧಿಸಿರಿ" ಎಂದು ಹೇಳಿದನು. ಪ್ರವಾದಿ(ಸ) ಮತ್ತೆ ಮತ್ತೆ "ಕೋಪಿಸಬೇಡ" ಎಂದುತ್ತರಿಸಿದರು. (ಬುಖಾರಿ)

ಕೋಪ ಬಂದಾಗ ಅದನ್ನು ನಿಯಂತ್ರಿಸುವುದು ದೌರ್ಬಲ್ಯದ ಸಂಕೇತವಲ್ಲ. ನಿಜವಾಗಿ ಅದು ಶಕ್ತಿ, ಸಾಮರ್ಥ್ಯ ಮತ್ತು ಧೈರ್ಯದ ಸಂಕೇತವಾಗಿದೆ. ಪ್ರವಾದಿ(ಸ) ಹೇಳಿರುವರು:

"(ಕುಸ್ತಿಯಲ್ಲಿ ) ಜನರನ್ನು ಕೆಡವಿ ಹಾಕುವವನು ಶಕ್ತಿಶಾಲಿಯಲ್ಲ. ಕೋಪ ಬಂದಾಗ ನ್ನ ಮೇಲೆ ತಾನೇ ನಿಯಂತ್ರಣ ಸಾಧಿಸುವವನೇ ಶಕ್ತಿಶಾಲಿ." (ಬುಖಾರಿ, ಮುಸ್ಲಿಮ್)

ಕೋಪವನ್ನು ನಿಯಂತ್ರಿಸಲು ಪ್ರವಾದಿ(ಸ) ಕೆಲವು ಉಪಯುಕ್ತ ಉಪಾಯಗಳನ್ನು ಹೇಳಿಕೊಟ್ಟಿರುವರು:

"ಕೋಪವೆಂಬುದು ಶೈತಾನನಿಂದಾಗಿದೆ. ಶೈತಾನನನ್ನು ಅಗ್ನಿಯಿಂದ ಸೃಷ್ಟಿಸಲಾಗಿ ಅಗ್ನಿಯನ್ನು ನೀರಿನಿಂದ ನಂದಿಸಲಾಗುತ್ತದೆ. ಆದ್ದರಿಂದ ನಿಮ್ಮಲ್ಲಾರಿಗಾದರೂ ಕೋ ಬಂದರೆ ಅವನು ವುಝೂ(ಅಂಗಸ್ನಾನ) ಮಾಡಲಿ." (ಅಬೂದಾವೂದ

"ನಿಮ್ಮಲ್ಲಾರಿಗಾದರೂ ಕೋಪ ಬಂದಾಗ, ಅವನು ನಿಂತುಕೊಂಡಿದ್ದರೆ ಕುಳಿ ಕೊಳ್ಳಲಿ. ಈ ರೀತಿ ಅವನ ಕೋಪ ತಣಿದರೆ ಸರಿ. ಇಲ್ಲವಾದರೆ ಅವನು ಮಲಗಿ ಬಿಡಲಿ (ತಿರ್ಮಿದಿ, ಅಹ್ಮದ

## ಕೃತಜ್ಞತಾಭಾವ

ಕೃತಜ್ಞತಾಭಾವಕ್ಕೆ ಇಸ್ಲಾಮ್ ಧರ್ಮ ಬಹಳಷ್ಟು ಮಹತ್ವ ಕೊಟ್ಟಿದೆ. ಮನುಷ್ಯ ತನಗೆ ಉಪಕಾರ ಮಾಡಿದವನನ್ನು ಗುರುತಿಸಿ, ಅವನ ಉಪಕಾರವನ್ನು ಮನಸಾ ಅಂಗೀಕರಿಸಿ, ತನ್ನ ಮಾತಿನಿಂದಲೂ ಕೃತಿಯಿಂದಲೂ ತಾನು ಅವನಿಗೆ ಋಣಿಯಾಗಿದ್ದ ನೆಂಬುದನ್ನು ಪ್ರದರ್ಶಿಸುವುದೇ ಕೃತಜ್ಞತಾಭಾವದ ತಾತ್ಪರ್ಯ.

ಅಲ್ಲಾಹನೇ ಮನುಷ್ಯನ ಮತ್ತು ಸಕಲ ಸೃಷ್ಟಿಗಳ ನೈಜ ಹಾಗೂ ಪರಮ ಉಪಕಾ ಮನುಷ್ಯನ ಬಳಿ ಜೀವನ, ಶಕ್ತಿ, ಸಾಮರ್ಥ್ಯಗಳು, ಪ್ರತಿಭೆಗಳು, ಸವಲತ್ತುಗಳು ಹೀ ಬೇರೆ ಬೇರೆ ಹೆಸರಿನ ಏನೆಲ್ಲ ವಸ್ತುಗಳಿವೆಯೋ ಅವೆಲ್ಲವೂ ಅಲ್ಲಾಹನ ಕೊಡುಗೆಗಳ ಯಾವುದೇ ವಸ್ತುವಿನ ಬಗ್ಗೆ ಮನುಷ್ಯನು ಅದು ಅಲ್ಲಾಹನದಲ್ಲ ಎಂದು ಹೇಳುವಂತಿಲ್ಲ ಮನುಷ್ಯನಿಗೆ ಅಲ್ಲಾಹನು ನೀಡಿರುವ ಕೊಡುಗೆಗಳೂ ಅನುಗ್ರಹಗಳೂ ಎಷ್ಟು ಅಪಾ ವೆಂದರೆ ಮನುಷ್ಯನಿಗೆ ಅವುಗಳನ್ನು ಎಣಿಸಲು ಸಾಧ್ಯವಿಲ್ಲ. ಪವಿತ್ರ ಕುರ್‌ಆನ್ ಹೇಳುತ್ತ

**"ನೀವು ಅಲ್ಲಾಹನ 'ಕೊಡುಗೆ'ಗಳನ್ನು ಎಣಿಕೆ ಮಾಡಲಿಚ್ಛಿಸಿದರೆ ಮಾಡಲಾರಿರಿ."** **(14:34**

ಮನುಷ್ಯನಲ್ಲಿ ಮನುಷ್ಯತ್ವ, ಸೌಜನ್ಯ ಮತ್ತು ಸಭ್ಯತೆಯೆಂಬುದು ಇದ್ದರೆ ಅವನ ಪ್ರಥಮ ವಾಗಿ ತನ್ನ ಆ ನೈಜ ಉಪಕಾರಿಯನ್ನು ಗುರುತಿಸಬೇಕು. ಅವನು ಮನಸ್ಸು ಆತ ಬಗ್ಗೆ ಪ್ರೀತಿ, ಆದರ ಮತ್ತು ಕೃತಜ್ಞತಾಭಾವದಿಂದ ತುಂಬಿ ತುಳುಕಬೇಕು. ಈ ಋಣ ಪ್ರಜ್ಞೆಯ ಪರಿಣಾಮವಾಗಿ ಅವನು ಆ ಪರಮೋಪಕಾರಿಯು ತನಗೆ ದಯಪಾಲಿಸಿರುವ ತನ್ನ ಜೀವನವನ ಹಾಗೂ ತನ್ನ ಸರ್ವಸ್ವವನ್ನೂ ಅವನದೇ ಮಾರ್ಗದಲ್ಲಿ ವಿನಿಯೋಗಿಸಬೇಕು. ಅವುಗಳನ ತನ್ನಿಚ್ಛೆಯಂತೆ ಬಳಸುವ ಬದಲು ಅವನ ಇಚ್ಛೆಯ ಪ್ರಕಾರ ಮತ್ತು ಅವನ ಮೆಚ್ಚುಗೆಯ ವಿಧಾನದಲ್ಲಿ ಬಳಸಬೇಕು. ಇದುವೇ ಮನುಷ್ಯನು ಅಲ್ಲಾಹನ ಅಪಾರ ಉಪಕಾರಗಳಿಗೆ ಕೃತಜ್ಞ ಸಲ್ಲಿಸಲಿಕ್ಕಿರುವ ಏಕಮಾತ್ರ ಮಾರ್ಗ. ಏಕೆಂದರೆ ಅಲ್ಲಾಹನ ಉಪಕಾರಗಳಿಗೆ ಪ್ರತಿಯಾ ಅವನಿಗೇನಾದರೂ ಪ್ರತ್ಯುಪಕಾರ ಮಾಡೋಣವೆಂದರೆ ಮನುಷ್ಯನ ಬಳಿ ತನ್ನ ಸ್ವಂತದ್ದೆ ಬಹುದಾದ ಯಾವ ವಸ್ತುವೂ ಇಲ್ಲ. ಅಲ್ಲಾಹನಿಗೆ ಅದರ ಅಗತ್ಯವೂ ಇಲ್ಲ.

ಪವಿತ್ರ ಕುರ್‌ಆನಿನ ಆರಂಭವೇ ಈ ಉಪಕಾರ ಸ್ಮರಣೆಯೊಂದಿಗೆ ಮತ್ತು ಉಪಕಾರಿಯ ಉಪಕಾರವನ್ನು ಮನ್ನಿಸುತ್ತಾ ಅವನ ಗುಣಗಾನ ಮಾಡುವುದರೊಂದಿಗೆ ಆಗುತ್ತದೆ.

"ಅಲ್ಲಾಹನಿಗೇ ಸರ್ವಸ್ತುತಿ. ಅವನು ಸಕಲ ವಿಶ್ವದ ಪ್ರಭು. ಪರಮ ದಯಾಳು, ುಣಾನಿಧಿ." (1:2-3)

ನಮ್ಮ ಮನದಲ್ಲಿ, ನಾವು ಅಲ್ಲಾಹನ ದಾಸರು ಮತ್ತು ಅವನಿಂದ ಉಪಕೃತರು ಎಂಬ ಾವನೆ ಸದಾ ಹಸಿರಾಗಿದ್ದು ನಮ್ಮ ಮನಸ್ಸಿನಲ್ಲಿ ಅವನ ಬಗ್ಗೆ ಕೃತಜ್ಞತಾಭಾವ ಮತ್ತು ನ್ಯತೆಯು ಸದಾ ನೆಲೆಸುವಂತಾಗಲಿಕ್ಕಾಗಿ ಈ ಪ್ರಥಮ ಅಧ್ಯಾಯವನ್ನು ನಾವು ನಿತ್ಯವೂ ನಮ್ಮ ್ಲಿ ನಮಾಝ್‌ಗಳಲ್ಲೂ ನಮಾಝ್‌ನ ಪ್ರತಿಯೊಂದು ರಕಅತ್‌ನಲ್ಲೂ ಪಠಿಸುತ್ತೇವೆ. ನಮ್ಮ ಂಪೂರ್ಣ ಬದುಕು ಕೃತಜ್ಞತೆಯ ಬದುಕಾಗಬೇಕೆಂಬುದೇ ಇದರ ಒಂದು ಉದ್ದೇಶ.

ಕೃತಜ್ಞತಾಭಾವ ಎಂಬುದು ಪವಿತ್ರ ಕುರ್‌ಆನಿನಲ್ಲಿ ಕೆಲವೆಡೆ ವರ್ಣಿಸಲಾಗಿರುವ ಪ್ರಕಾರ, ವಲ ಧರ್ಮದ ಒಂದು ಪ್ರಮುಖ ಅಂಗಮಾತ್ರವಾಗಿರದೆ ಅದು ಧರ್ಮದ ಬುನಾದಿಯೂ ಾಕ್ಷಾತ್ ಧರ್ಮವೂ ಆಗಿದೆ.

"ನೀವು ಕೃತಜ್ಞರಾಗಿದ್ದರೆ ನಾನು ನಿಮಗೆ ಇನ್ನೂ ಹೆಚ್ಚು ಪ್ರದಾನ ಮಾಡುವೆನೆಂದೂ ೕವು ಕೃತಘ್ನತೆ ತೋರಿದರೆ ನನ್ನ ಶಿಕ್ಷೆಯು ಅತ್ಯಂತ ಕಠಿಣವಾಗಿದೆಯೆಂದೂ ನಿಮ್ಮ ್ರಭು ಎಚ್ಚರಿಕೆ ಕೊಟ್ಟಿದ್ದುದನ್ನು ಸ್ಮರಿಸಿರಿ." (14:7)

ಪವಿತ್ರ ಕುರ್‌ಆನಿನ ಈ ವಾಕ್ಯದಲ್ಲಿ ಕೃತಜ್ಞತೆ ಮತ್ತು ಕೃತಘ್ನತೆ ಎಂಬ ಪದಗಳನ್ನು ಹಳ ವಿಶಾಲ ಅರ್ಥದಲ್ಲಿ ಬಳಸಲಾಗಿದೆ. ಮನುಷ್ಯನು ತನ್ನ ಸರ್ವಸ್ವವನ್ನೂ ಅಲ್ಲಾಹನಿಗೆ ಮರ್ಪಿಸಿ, ಅವನ ಇಚ್ಛೆಗೆ ಅಂದರೆ ಅವನ ಧರ್ಮಕ್ಕೆ ಅಧೀನನಾಗಿ ತನ್ನ ಸಂಪೂರ್ಣ ದುಕನ್ನು ಸಾಗಿಸುವುದೇ ಕೃತಜ್ಞತೆ. ಅಲ್ಲಾಹನ ಪ್ರಭುತ್ವವನ್ನು ಅಂಗೀಕರಿಸದೆ ಅಥವಾ ತರರನ್ನು ತನ್ನ ಪ್ರಭುಗಳಾಗಿ ಮಾಡಿಕೊಂಡು, ಅವನು ತನಗೆ ದಯಪಾಲಿಸಿರುವ ದುಕನ್ನೂ ಇತರ ಸಾಮರ್ಥ್ಯಗಳನ್ನೂ ಅವನ ಇಚ್ಛೆಗೆ ವಿರುದ್ಧವಾದ ಮಾರ್ಗದಲ್ಲಿ ಬಳಸಿ ೊಳ್ಳುವುದೇ ಕೃತಘ್ನತೆ. ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಮುಸ್ಲಿಮ್ ಸಮುದಾಯಕ್ಕೆ ೕವು ಕೃತಜ್ಞರಾಗಬೇಕು ಎಂದು ಆದೇಶಿಸಿರುವುದು ಇದೇ ಅರ್ಥದಲ್ಲಿ:

"ನೀವು ನನ್ನನ್ನು ಸ್ಮರಿಸುತ್ತಲಿರಿ, ನಾನು ನಿಮ್ಮನ್ನು ಸ್ಮರಿಸುವೆನು ಮತ್ತು ನನಗೆ ತಜ್ಞರಾಗಿರಿ, ಕೃತಘ್ನರಾಗಬೇಡಿರಿ." (2:152)

ಸತ್ಯವಿಶ್ವಾಸಿಯು ತನಗೆ ಅಲ್ಲಾಹನಿಂದ ಪ್ರಾಪ್ತವಾಗುವ ಪ್ರತಿಯೊಂದು ಅನುಗ್ರಹ ್ಕಾಗಿಯೂ ಆಗಾಗ ಅವನಿಗೆ ಕೃತಜ್ಞತೆ ಸಲ್ಲಿಸುತ್ತಿರುತ್ತಾನೆ. ಮನಸ್ಸಿನಲ್ಲಿ ಮಾತ್ರವಲ್ಲ ಾಲಿಗೆ ಯಿಂದಲೂ ಅವನು ಆಗಾಗ ಕೃತಜ್ಞತಾ ಸೂಚಕ ಪದಗಳನ್ನು ಉಚ್ಚರಿಸುತ್ತಾನೆ. ವಿಧ ಸಂದರ್ಭಗಳಲ್ಲಿ ಉಚ್ಚರಿಸಬೇಕಾದ ಕೃತಜ್ಞತಾ ಸೂಚಕ ಪದಗಳನ್ನೂ ಪ್ರಾರ್ಥನೆ ಳನ್ನೂ ಹದೀಸ್‌ಗಳಲ್ಲಿ ಬಹಳ ವಿವರವಾಗಿ ಕಲಿಸಿಕೊಡಲಾಗಿದೆ.

ಮನುಷ್ಯನು ಅಲ್ಲಾಹನ ಉಪಕಾರಗಳಿಗೆ ಕೃತಜ್ಞತೆ ಸೂಚಿಸುವ ಇನ್ನೊಂದು ್ರಮುಖ ವಿಧಾನವೇನೆಂದರೆ ಅವನು ತನಗೆ ಅಲ್ಲಾಹನು ದಯಪಾಲಿಸಿದ ಸಾಮರ್ಥ್ಯ ಂದ ತನ್ನ ಇತರ ಸಹಜೀವಿ ಮಾನವರಿಗೆ ಉಪಕಾರ ಮಾಡಬೇಕು. ಇತರರಿಗೆ ನೆರವಾಗ ೇಕು. ಇತರರಿಂದ ತನಗೇನಾದರೂ ಸಹಾಯ, ಸೌಜನ್ಯ ಸಂದಾಗ ಅದಕ್ಕೆ

ಋಣಿಯಾಗಿರಬೇಕು ಮತ್ತು ಋಣ ತೀರಿಸಲಿಕ್ಕೂ ಶ್ರಮಿಸಬೇಕು. ಈ ಕುರಿತು ಪ್ರವಾ ಯವರ(ಸ) ಒಂದು ವಚನ ಬಹಳ ಅರ್ಥಪೂರ್ಣವಾಗಿದೆ: "ಮನುಷ್ಯರಿಗೆ ಕೃತಜ್ಞನಾಗಿ ದವನು ಅಲ್ಲಾಹನಿಗೆ ಕೃತಜ್ಞನಾಗಲಾರ." (ತಿರ್ಮಿ

## ಸಹನಶೀಲತೆ

ಇಸ್ಲಾಮ್ ಸಹನಶೀಲತೆಗೆ ಬಹಳಷ್ಟು ಪ್ರಾಮುಖ್ಯತೆ ಕೊಟ್ಟಿದೆ. ಕೆಲವರು ಸಹ ಯೆಂದರೆ ಅತ್ಯಂತ ಅಸಹಾಯಕ ಪರಿಸ್ಥಿತಿಯಲ್ಲಿ ತಾಳ್ಮೆ ವಹಿಸುವುದು ಎಂದು ತಿಳಿ ಕೊಂಡಿದ್ದಾರೆ. ಆದರೆ ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ 'ಸಬ್ರ್' ಅಥ ಸಹನೆಯನ್ನು ಒಂದು ದೊಡ್ಡ ಸಾಹಸ ಮತ್ತು ಸಾಧನೆಯೆಂದು ವರ್ಣಿಸಲಾಗಿದೆ.

**"ಮಗನೇ ನಮಾಝನ್ನು ಸಂಸ್ಥಾಪಿಸು, ಒಳಿತಿನ ಆದೇಶ ಕೊಡು, ಕೆಡುಕಿನಿಂದ ತ ಮತ್ತು ಯಾವ ಕಷ್ಟವೇ ಬರಲಿ ಸಹನೆ ವಹಿಸು. ಇವು ಅತಿ ಹೆಚ್ಚು ತಾಕೀತು ಮಾಡಲ್ಪ ವಿಷಯಗಳು."** **(31:1**

ಮನುಷ್ಯನಿಗೆ ಸಂಕಷ್ಟಗಳು, ತೊಂದರೆಗಳೆಲ್ಲಾ ಎದುರಾಗುವುದು ಸ್ವಾಭಾವಿಕ. ಆದ ಸಂಕಷ್ಟಗಳು ಬಂದಾಗ ಮನುಷ್ಯನು ಹಿಂಜರಿಯಬಾರದು. ಸಂಕಷ್ಟಗಳೊಂದಿಗೆ ಸೆಣಸಾ ಬೇಕು. ಪರಿಸ್ಥಿತಿಯೆದುರು ಶರಣಾಗಿ ಬಿಡುವ ಬದಲು ಪರಿಸ್ಥಿತಿಯನ್ನು ಬದಲಾಯಿ ಬಿಡಲು ಪ್ರಯತ್ನಿಸಬೇಕು. ಅತ್ಯಂತ ಪ್ರತಿಕೂಲ ವಾತಾವರಣದಲ್ಲೂ ಸತ್ಯದಲ್ಲಿ ಅಚಲವಾ ನಿಲ್ಲಬೇಕು. ಅಪಾಯಗಳಿಗೆ ಅಂಜಬಾರದು. ಎಷ್ಟೇ ದೊಡ್ಡ ನಷ್ಟವನ್ನು ಎದುರಿಸಬೇಕಾ ಬಂದರೂ ಮನೆ-ಮಠ, ಸಂಪತ್ತು-ಸೌಕರ್ಯ, ಮಡದಿ-ಮಕ್ಕಳು ಮಾತ್ರವಲ್ಲ ಸ್ವತಃ ತ ಪ್ರಾಣವನ್ನು ಕಳೆದು ಕೊಳ್ಳಬೇಕಾಗಿ ಬಂದರೂ ಅವನು ಸತ್ಯದ ಜೊತೆಗಿನ ತನ್ನ ನಂಟ ಮುರಿಯಲು ಅಥವಾ ದುರ್ಬಲವಾಗಲು ಬಿಡಬಾರದು. ಹತಾಶೆ, ನಿರಾಶೆ, ಭಯ ಹಿಂಜರಿಕೆ, ಕೋಪ ಮತ್ತು ನಿಷ್ಕ್ರಿಯತೆಗಳನ್ನು ತನ್ನ ಹತ್ತಿರವೂ ಸುಳಿಯಗೊಡ ನಿರಂತರವಾಗಿ ಸತ್ಯದ ಮಾರ್ಗದಲ್ಲಿ ಮುಂದೊತ್ತುತ್ತಲೇ ಸಾಗಬೇಕು. ತನ್ನ ಒಡೆಯ ವಿಧೇಯತೆಯ ಮಾರ್ಗದಲ್ಲೇ ನಡೆದು ಕೊನೆಗೆ ಆ ಒಡೆಯನನ್ನು ಸೇರುವವರೆಗೂ ಸ್ಫೂರ್ತಿಯನ್ನು ಅವನು ಉಳಿಸಿಕೊಳ್ಳಬೇಕು. ಇದುವೇ 'ಸಬ್ರ್' ಅಥವಾ ಇಸ್ಲಾಮ್ ತ ಅನುಯಾಯಿಗಳಲ್ಲಿ ಅಪೇಕ್ಷಿಸುವಂತಹ ಸಹನಶೀಲತೆಯ ತಾತ್ಪರ್ಯ.

ಸಹನೆಯ ಪ್ರಸ್ತುತ ವ್ಯಾಖ್ಯಾನವು ಅದಕ್ಕೆ ಮನುಷ್ಯ ಚಾರಿತ್ರ್ಯದಲ್ಲಿ ಎಷ್ಟು ಮಹ ಇದೆ ಎಂಬುದನ್ನು ವ್ಯಕ್ತಪಡಿಸುತ್ತದೆ. ನಿಜವಾಗಿ ಸಹನೆಯನ್ನು ಹೊರತುಪಡಿಸಿ ಒಂದ ಸುಶಕ್ತ ಚಾರಿತ್ರ್ಯವನ್ನು ಊಹಿಸಲಿಕ್ಕೇ ಸಾಧ್ಯವಿಲ್ಲ. ಅದು ಸಚ್ಚಾರಿತ್ರ್ಯದ ಒಂದು ಅವಿಭಾ ಅಂಗ. ವಿಶೇಷತಃ ಸತ್ಯದ ಮಾರ್ಗದಲ್ಲಿ ಸಕ್ರಿಯರಾಗಿರುವ ಮಂದಿಗಂತೂ ಈ ಗು ಅನಿವಾರ್ಯ. ಸತ್ಯದ ಮಾರ್ಗ ಕಲ್ಲು-ಮುಳ್ಳುಗಳಿಂದ ಮತ್ತು ಎಡರು-ತೊಡರುಗಳಿಂ ಕೂಡಿದ ಮಾರ್ಗ. ಈ ಮಾರ್ಗದಲ್ಲಿ ಮನುಷ್ಯನು ಸ್ವತಃ ತನ್ನ ಚಿತ್ತದ ವಿರುದ್ಧ ಸೆಣಸಾ ಬೇಕಾಗುತ್ತದೆ. ಶೈತಾನನ ವಿರುದ್ಧ ಹೋರಾಡಬೇಕಾಗುತ್ತದೆ. ಕೆಲವೊಮ್ಮೆ ತನ್ನ ಆಪ್ತ

ಕ್ಷೆಗಳನ್ನು ಮೀರಿ ನಡೆಯಬೇಕಾಗುತ್ತದೆ. ಕಾಲದ ಸಾಮ್ರಾಟರ ವಿರುದ್ಧವೂ ಅವನು ಘರ್ಷಕ್ಕಿಳಿಯಬೇಕಾಗುತ್ತದೆ. ದೊಡ್ಡದೊಡ್ಡ ಸವಾಲುಗಳೂ ಸಂಕಷ್ಟಗಳ ಸರಮಾಲೆಯೂ ಮರಾಗುತ್ತದೆ. ತನ್ನ ಮನೆ-ಮಠ, ಸೊತ್ತು-ವಿತ್ತ, ಮಕ್ಕಳು, ಆಪ್ತರು ಮತ್ತು ಸಾಕ್ಷಾತ್ ಪ್ರಾಣವನ್ನು ಕೂಡಾ ಪಣಕ್ಕೊಡ್ಡಬೇಕಾಗುತ್ತದೆ. ಸತ್ಯವಿಶ್ವಾಸಿಗಳನ್ನು ಈ ರೀತಿಯ ಕಷ್ಟಗಳ ಮೂಲಕ ಸತ್ವಪರೀಕ್ಷೆಗೆ ಒಳಪಡಿಸಿದಾಗ ಈ ಸತ್ವಪರೀಕ್ಷೆಯನ್ನು ಸಹನೆಯಿಂದಲೂ ಸ್ಥಿರಚಿತ್ತದಿಂದಲೂ ಎದುರಿಸುತ್ತಾ ಅವನ ಮಾರ್ಗದಲ್ಲಿ ಅಚಲವಾಗಿ ನಿಲ್ಲುವವರನ್ನು ತನ್ನ ಅನುಗ್ರಹ ಮತ್ತು ಸಹಾಯದಿಂದ ವಿಜಯಶಾಲಿಗಳಾಗಿ ಮಾಡುವುದು ಅಲ್ಲಾಹನ ಕ್ರಮವಾಗಿದೆ. ಈ ಕುರಿತು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

**"ನಾವು ನಿಮ್ಮನ್ನು ಭಯಾಶಂಕೆ, ಹಸಿವು, ಧನಹಾನಿ, ಜೀವಹಾನಿ ಮತ್ತು ಉತ್ಪನ್ನಗಳ ನಷ್ಟಗಳಿಗೊಳಪಡಿಸಿ ಅವಶ್ಯವಾಗಿಯೂ ಪರೀಕ್ಷಿಸುವೆವು. ಇಂತಹ ಸನ್ನಿವೇಶಗಳಲ್ಲಿ ತಾಳ್ಮೆ ವಹಿಸಿದವರಿಗೆ ಸುವಾರ್ತೆ ನೀಡಿರಿ. ಅಂತಹವರ ಮೇಲೆ ವಿಪತ್ತೇನಾದರೂ ಎರಗಿದಾಗ ಅವರು ನಿಶ್ಚಯವಾಗಿಯೂ ನಾವು ಅಲ್ಲಾಹನವರು ಮತ್ತು ಅಲ್ಲಾಹನೆಡೆಗೇ ನಮಗೆ ಮರಳಲಿಕ್ಕಿದೆ" ಎನ್ನುವವರು. ಅವರ ಮೇಲೆ ಅವರ ಪ್ರಭುವಿನ ಕಡೆಯಿಂದ ಮಹಾ ಅನುಗ್ರಹಗಳಿರುವುವು. ಅವನ ಕಾರುಣ್ಯವು ಅವರನ್ನು ಆಚ್ಛಾದಿಸುವುದು ಮತ್ತು ಇಂತಹವರೇ ಸನ್ಮಾರ್ಗ ಹೊಂದಿದವರಾಗಿರುತ್ತಾರೆ." (2:155-157)**

ಇನ್ನೊಂದು ಕಡೆ ಪವಿತ್ರ ಕುರ್‌ಆನಿನಲ್ಲಿ ಸಹನೆಯ ಮಹತ್ವವನ್ನು ಬಹಳ ಸೊಗಸಾಗಿ ವರ್ಣಿಸಲಾಗಿದೆ:

**"ನೀವು ನಿರಾಯಾಸವಾಗಿ ಸ್ವರ್ಗವನ್ನು ಪ್ರವೇಶಿಸುವಿರೆಂದು ಭಾವಿಸಿರುವಿರಾ? ವಸ್ತುತಃ ನಿಮ್ಮಲ್ಲಿ ಯಾರೆಲ್ಲ ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವವರೂ ಅದಕ್ಕಾಗಿ ಸಹನೆ ವಹಿಸುವವರೂ ಇದ್ದಾರೆಂದು ಅವನು ಇನ್ನೂ ಕಾಣಲೇ ಇಲ್ಲ." (3:142)**

ಅಂದರೆ ಸತ್ಯವಿಶ್ವಾಸಿಯು ತಾನು ಸ್ವರ್ಗಕ್ಕೆ ಅರ್ಹನೆಂದು ಸಾಬೀತುಪಡಿಸಲು ಅಲ್ಲಾಹನ ಮಾರ್ಗದಲ್ಲಿ ಪರಿಶ್ರಮಿಸಬೇಕಾದುದು ಮತ್ತು ಅವನ ಮಾರ್ಗದಲ್ಲಿ ವಿಪತ್ತುಗಳು ಎದುರಾದಾಗ ಸಹನಶೀಲತೆಯನ್ನು ಪ್ರದರ್ಶಿಸಬೇಕಾದುದು ಅನಿವಾರ್ಯವಾಗಿದೆ. ಅಲ್ಲಾಹನ ಮಾರ್ಗದಲ್ಲಿ ಇಟ್ಟ ವ್ಯಕ್ತಿ ಕೊನೆ ತನಕವೂ ಸ್ಥಿರಚಿತ್ತನಾಗಿ ನಿಲ್ಲಲು ಅರ್ಹನಾಗಬೇಕಿದ್ದರೆ ಅವನ ಬಳಿ ಎರಡು ವಸ್ತುಗಳು ಅನಿವಾರ್ಯವಾಗಿ ಇರಬೇಕು. 1) ಸಹನೆ 2) ಅಲ್ಲಾಹನ ಸ್ಮರಣೆ.

**"ಓ ಸತ್ಯವಿಶ್ವಾಸಿಗಳೇ, ಸಹನೆ ಮತ್ತು ನಮಾಝಿನಿಂದ ಸಹಾಯ ಪಡೆಯಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಹನಶೀಲರೊಂದಿಗಿದ್ದಾನೆ." (ಪವಿತ್ರ ಕುರ್‌ಆನ್, 2:153)**

ಪ್ರವಾದಿ ಹಝ್ರತ್ ಮೂಸಾ(ಅ) ಕೂಡಾ ತಮ್ಮ ಜನಾಂಗದ ಜನರಿಗೆ ಅದನ್ನೇ ಬೋಧಿಸಿದ್ದರೆಂದು ನಮಗೆ ಪವಿತ್ರ ಕುರ್‌ಆನ್ ನೆನಪಿಸುತ್ತದೆ:

**"ಮೂಸಾ ತಮ್ಮ ಜನಾಂಗದೊಡನೆ ಹೀಗೆಂದರು: "ಅಲ್ಲಾಹನೊಡನೆ ಸಹಾಯ ಯಾಚಿಸಿರಿ ಮತ್ತು ತಾಳ್ಮೆ ವಹಿಸಿರಿ. ಭೂಮಿ ಅಲ್ಲಾಹನದು. ಅವನು ತನ್ನ ದಾಸರಲ್ಲಿ**

ತನಗಿಷ್ಟ ಬಂದವರನ್ನು ಅದರ ಉತ್ತರಾಧಿಕಾರಿಗಳಾಗಿ ಮಾಡುತ್ತಾನೆ. ಅಂತಿ
ವಿಜಯವು ಅವನನ್ನು ಭಯಪಟ್ಟು ವರ್ತಿಸುವವರಿಗಾಗಿದೆ."'' (7:12

ಅಂದರೆ ಅಲ್ಲಾಹನೇ ಭೂಮಿಯ ಮಾಲಕನಾಗಿದ್ದು ತಾನಿಚ್ಛಿಸುವ ಯಾರನ್ನ
ಆದರೂ ಅದರ ವಾರೀಸುದಾರರಾಗಿ ಮಾಡುವ ಅಧಿಕಾರವೂ ಸಾಮರ್ಥ್ಯವೂ ಅವನಿಗಿ
ಆದುದರಿಂದ ನೀವು ಅವನಿಂದಲೇ ಸಹಾಯ ಯಾಚಿಸಿರಿ. ನೀವು ಸಹನಶೀಲತೆ ಹಾಗ
ದೇವಭಕ್ತಿಯ ಗುಣಗಳನ್ನು ನಿಮ್ಮದಾಗಿಸಿಕೊಂಡರೆ ಅಂತಿಮವಾಗಿ ನೀವೇ ಭೂಮಿ
ವಾರೀಸುದಾರರಾಗಬಹುದು.

ಸತ್ಯವಿಶ್ವಾಸಿಯು ಸಹನೆ ಮತ್ತು ಕೃತಜ್ಞತೆಯ ಸಾಕಾರ ಮೂರ್ತಿಯಾಗಿರುತ್ತಾ
ಆದುದರಿಂದಲೇ ಇಹ-ಪರಗಳೆರಡರಲ್ಲೂ ಅವನೇ ಜಯಶೀಲನಾಗುತ್ತಾನೆ. ಈ ವಾಸ್ತವಿಕ
ಯನ್ನು ಪ್ರವಾದಿವರ್ಯರು(ಸ) ಈ ರೀತಿ ವರ್ಣಿಸಿರುವರು:

"ಸತ್ಯವಿಶ್ವಾಸಿಯ ಸ್ಥಿತಿಯು ವಿಚಿತ್ರವಾಗಿದೆ. ಅವನ ಪ್ರತಿಯೊಂದು ವರ್ತನೆಯೂ ಅವ
ಪಾಲಿಗೆ ಶುಭಕರವಾಗಿದೆ. ಅವನಿಗೆ ಅನುಗ್ರಹ ಪ್ರದಾನ ಮಾಡಲಾದಾಗ ಅವನು ಕೃತಜ್ಞ
ಸಲ್ಲಿಸುತ್ತಾನೆ. ಇದು ಅವನ ಪಾಲಿಗೆ ಶುಭಕರವಾಗುತ್ತದೆ. ಅವನಿಗೆ ಸಂಕಷ್ಟಗಳು ಎದುರಾದಾ
ಅವನು ಸಹನೆ ತೋರುತ್ತಾನೆ. ಇದೂ ಅವನ ಪಾಲಿಗೆ ಶುಭಕರವಾಗುತ್ತದೆ." (ಮುಸ್ಲಿಮ್

## ದಾನಶೀಲತೆ

'ಇನ್‌ಫಾಕ್'ಗೆ ಇಸ್ಲಾಮ್ ಧರ್ಮವು ಬಹಳಷ್ಟು ಪ್ರಾಮುಖ್ಯತೆ ಕೊಟ್ಟಿದೆ. ಇನ್‌ಫಾ
ಎಂದರೆ ದಾನಶೀಲತೆ ಮತ್ತು ಅಲ್ಲಾಹನು ಕೊಟ್ಟಿರುವ ಕೊಡುಗೆಗಳನ್ನು ಅವನದ
ಮಾರ್ಗದಲ್ಲಿ ವ್ಯಯ ಮಾಡಿ ಬಿಡುವುದು. ಇದಕ್ಕೆ ಅಲ್ಲಾಹನ ಮೆಚ್ಚುಗೆಗಾಗಿ ಅವ
ಮಾರ್ಗದಲ್ಲಿ ತ್ಯಾಗ ಮಾಡುವುದೆಂಬ ಅರ್ಥವೂ ಇದೆ.

ತ್ಯಾಗ ಸನ್ನದ್ಧತೆ ಇಲ್ಲದೆ ನಾವು ಈ ಜಗತ್ತಿನಲ್ಲಿ ಯಾವುದೇ ಸಣ್ಣ ಉದ್ದೇಶವನು
ಸಾಧಿಸುವಂತಿಲ್ಲ. ಹೀಗಿರುತ್ತಾ ಸತ್ಯಕ್ಕಾಗಿ ತ್ಯಾಗ ಬಲಿದಾನಗಳನ್ನು ನೀಡದೆ ನಾವು ಈ
ಲೋಕದಲ್ಲಿ ಗೌರವ ಮತ್ತು ವಿಜಯವನ್ನೂ ಪರಲೋಕದಲ್ಲಿ ಅನಂತ ಸುಖ ಮತ
ಮೋಕ್ಷವನ್ನೂ ಗಳಿಸುವ ನಮ್ಮ ಉದ್ದೇಶವನ್ನು ಸಾಧಿಸಲು ಸಾಧ್ಯವೇ? ಜಗತ್ತಿನಲ್ಲಿ ಯಾ
ಗುಂಪೂ ಯಾವ ಜನಾಂಗವೂ ತ್ಯಾಗ ಬಲಿದಾನಗಳನ್ನು ನೀಡದೆ ಔನ್ನತ್ಯವನ್ನು ಸಂಪಾದಿಸ
ವುದಿಲ್ಲ. ಕೇವಲ ಲೌಕಿಕ ವಿಜಯಗಳಿಗೆ ತ್ಯಾಗ ಬಲಿದಾನಗಳು ಇಷ್ಟು ಅಗತ್ಯ ಎಂದಾದ
ಪರಲೋಕದ ಶಾಶ್ವತ ಮತ್ತು ಕೊನೆಯಿಲ್ಲದ ಔನ್ನತ್ಯವನ್ನು ನಾವು ತ್ಯಾಗ ಬಲಿದಾನಗಳನ
ನೀಡದೆಯೇ ಪಡೆಯಲು ಸಾಧ್ಯವೇ? ನಿಜವಾಗಿ ಪರಲೋಕದ ಸ್ವರ್ಗ ಸುಖವು, ಈ
ಲೋಕದಲ್ಲಿ ತಮ್ಮದೆಲ್ಲವನ್ನೂ ಸಂತೋಷದಿಂದ ಅಲ್ಲಾಹನ ಮಾರ್ಗದಲ್ಲಿ ಅರ್ಪಿಸಿ ಬಿಡಲ
ಸನ್ನದ್ಧರಾಗಿರುವವರಿಗೆ ಮಾತ್ರ ಸಿಗಬಲ್ಲುದು. ಪವಿತ್ರ ಕುರ್‌ಆನ್ ಹೇಳುತ್ತದೆ:

"ವಾಸ್ತವದಲ್ಲಿ ಅಲ್ಲಾಹನು ಸತ್ಯವಿಶ್ವಾಸಿಗಳಿಂದ ಅವರ ತನು-ಧನಗಳನ್ನು ಸ್ವರ್ಗ
ಬದಲಿಗೆ ಖರೀದಿ ಮಾಡಿರುತ್ತಾನೆ." (9:111

ಅಲ್ಲಾಹನು ದಯಪಾಲಿಸಿರುವ ಸಂಪತ್ತನ್ನು ತನ್ನದೆಂದು ಭಾವಿಸಿ, ಅವುಗಳನ್ನು ್ಯಯಿಸದೆ ಸಂಗ್ರಹಿಸಿಟ್ಟು ಧನಪಿಶಾಚಿಯಾಗಿ ಮಾರ್ಪಡುವವನಿಗೆ ಅಲ್ಲಾಹನು ಖಂಡಿತ ರ್ಗವನ್ನು ನೀಡಲಾರ. ಅಂತಹ ಜನರನ್ನು ಪವಿತ್ರ ಕುರ್‌ಆನಿನಲ್ಲಿ ಉಗ್ರವಾಗಿ ಶಪಿಸಲಾಗಿದೆ.

"(ಎದುರೆದುರೇ) ಜನರನ್ನು ಮೂದಲಿಸುವ ಮತ್ತು (ಬೆನ್ನ ಹಿಂದೆ) ದೂಷಿಸುವ ಭ್ಯಾಸವಿರುವ ಪ್ರತಿಯೊಬ್ಬನಿಗೂ ವಿನಾಶವಿದೆ. ಅವನು ಸಂಪತ್ತನ್ನು ಸಂಗ್ರಹಿಸಿದನು ತ್ತು ಅದನ್ನು ಎಣಿಸಿ ಎಣಿಸಿ ಇಟ್ಟನು. ಅವನ ಸಂಪತ್ತು ಶಾಶ್ವತವಾಗಿ ಅವನ ಬಳಿಯಲ್ಲೇ ರುವುದೆಂದು ಅವನು ಭಾವಿಸುತ್ತಾನೆ." (104:1-3)

ಈ ಜಗತ್ತು ಮತ್ತು ಇದರಲ್ಲಿರುವ ಸುಖ-ಸಂಪತ್ತುಗಳ ಮೇಲಿನ ಮೋಹವೇ ಚ್ಚಿನ ಜನರ ಪಥಭ್ರಷ್ಟತೆಗೆ ಮುಖ್ಯ ಕಾರಣವಾಗಿದೆ. ಈ ಲೋಕದ ಸುಖಗಳನ್ನು ರಾಧಿಸುವವನು ಅಲ್ಲಾಹನ ಆರಾಧಕನಾಗಲು ಸಾಧ್ಯವೇ ಇಲ್ಲ. ಈ ಲೋಕದ ಸುಖ-ೇಮಗಳನ್ನೇ ಧ್ಯೇಯವೆಂದು ಪರಿಗಣಿಸುವವನು ಪರಲೋಕದ ಸುಖಕ್ಕಾಗಿ ಶ್ರಮಿಸಲು ಧ್ಯವಿಲ್ಲ. ಅವನು ಅಲ್ಲಾಹನಿಗೆ ಸಂಬಂಧಿಸಿದ ತನ್ನ ಬಾಧ್ಯತೆಗಳನ್ನಾಗಲೀ ಅಲ್ಲಾಹನ ಸರಾದ ಇತರ ಸಹಜೀವಿಗಳಿಗೆ ಸಂಬಂಧಿಸಿದ ತನ್ನ ಬಾಧ್ಯತೆಗಳನ್ನಾಗಲೀ ಈಡೇರಿಸಲಾರ. ಂತಹ ವ್ಯಕ್ತಿ ಕೇವಲ ತನ್ನ ಐಹಿಕ ಸುಖಕ್ಕಾಗಿ ಮತ್ತು ಅದನ್ನು ಹೆಚ್ಚಿಸುತ್ತಾ ಹೋಗ ೇಕೆಂಬ ಹುಚ್ಚು ಆತುರದಲ್ಲಿ ಹೆಚ್ಚೆಚ್ಚು ಅಪರಾಧಗಳನ್ನು ಮಾಡುತ್ತಾ ಹೆಚ್ಚೆಚ್ಚು ನರನ್ನು ದೋಚುತ್ತಾ ವಂಚಿಸುತ್ತಾ ಸಾಗುವನು.

ಪ್ರವಾದಿ(ಸ) ಹೇಳಿರುವರು:

".....ನೀವು ಲೋಭದಿಂದ ದೂರವಿರಿ. ಏಕೆಂದರೆ ಲೋಭವು ನಿಮಗಿಂತ ಂದಿನವರನ್ನು ನಾಶ ಮಾಡಿದೆ. ಅದು ಅವರನ್ನು ಇತರರ ರಕ್ತ ಹರಿಸುವಂತೆ ಹಾಗೂ ಲ್ಲಾಹನು ತಮ್ಮ ಪಾಲಿಗೆ ಹರಾಮ್(ನಿಷಿದ್ಧ)ಗೊಳಿಸಿರುವ ವಸ್ತುಗಳನ್ನು ಹಲಾಲ್ ಮ್ಮತ)ಗೊಳಿಸಿಕೊಳ್ಳುವಂತೆ ಪ್ರೇರೇಪಿಸಿದೆ." (ಮುಸ್ಲಿಮ್)

ಅಲ್ಲಾಹನ ಮಾರ್ಗದಲ್ಲಿ ಮನುಷ್ಯನು ತನ್ನ ಲೌಕಿಕ ಸೊತ್ತುಗಳನ್ನೂ ಸುಖಭೋಗ ಳನ್ನೂ ತ್ಯಜಿಸಲು ಸನ್ನದ್ಧನಾಗದೆ ಅವನ ಸಂಸ್ಕರಣೆಯಾಗಲು ಸಾಧ್ಯವಿಲ್ಲ. ಆ ್ಥಿತಿಯಲ್ಲಿ ಅವನಿಗೆ ಅಲ್ಲಾಹನ ಮಾರ್ಗದಲ್ಲಿ ಎರಡು ಹೆಜ್ಜೆ ನಡೆಯಲಿಕ್ಕೂ ಧ್ಯವಾಗದು. ಅಲ್ಲಾಹನ ಆಜ್ಞಾಪಾಲನೆ ಮಾಡಲು ಮತ್ತು ಅವನು ದಯಪಾಲಿಸಿರುವ ಂಪತ್-ಸೌಕರ್ಯಗಳನ್ನು ಅವನ ಮಾರ್ಗದಲ್ಲಿ ವ್ಯಯಿಸಿ ಬಿಡಲು ಸಿದ್ಧರಾಗಿರುವವರಿಗೆ ಾತ್ರ ಪವಿತ್ರ ಕುರ್‌ಆನಿನಿಂದ ಸರಿಯಾದ ಮಾರ್ಗದರ್ಶನ ಸಿಗಬಲ್ಲುದು ಎಂದು ಈ ಪವಿತ್ರ ಗ್ರಂಥದ ಆರಂಭದಲ್ಲೇ ಸ್ಪಷ್ಟಪಡಿಸಲಾಗಿದೆ.

"ಅಲಿಫ್ ಲಾಮ್ ಮೀಮ್. ಇದು (ದೈವಿಕ) ಗ್ರಂಥ; ಸಂದೇಹಾತೀತವಿದು. ಯಭಕ್ತಿಯುಳ್ಳವರಿಗೆ ಇದು ಮಾರ್ಗದರ್ಶಿ: ಪರೋಕ್ಷದ ಮೇಲೆ ವಿಶ್ವಾಸವಿರಿಸುವವರಿಗೆ, ಮಾಝನ್ನು ಸಂಸ್ಥಾಪಿಸುವವರಿಗೆ, ನಾವು ನೀಡಿರುವ ಸಂಪತ್ಸೌಕರ್ಯಗಳಿಂದ ್ಯಯಿಸುವವರಿಗೆ." (2:1-3)

ಪ್ರವಾದಿವರ್ಯರ(ಸ) ಆದೇಶ ಹೀಗಿದೆ:

"ಆದಮರ ಪುತ್ರನೇ (ಮನುಷ್ಯನೇ!) ಅಗತ್ಯಕ್ಕಿಂತ ಹೆಚ್ಚಿನ ಸಂಪತ್ತನ್ನು ಖ ಮಾಡಿಬಿಡು. ಇದುವೇ ನಿನ್ನ ಪಾಲಿಗೆ ಶುಭಕರ. ನೀನು ಉಳಿಸಿಟ್ಟರೆ ಅದು ಪಾಲಿಗೆ ಅಶುಭವಾಗಿದೆ. ಅಗತ್ಯವುಳ್ಳಷ್ಟನ್ನು ಉಳಿಸಿಕೊಳ್ಳುವುದರಲ್ಲಿ ದೋಷವ ಯಾರ ಬಗ್ಗೆ ನಿನ್ನ ಮೇಲೆ ಹೆಚ್ಚು ಬಾಧ್ಯತೆಗಳಿವೆಯೋ ಅವರಿಗಾಗಿ ಮೊದ ಖರ್ಚು ಮಾಡು." (ಮುಸ್ಲಿ

ಸಾಮಾನ್ಯವಾಗಿ ಜಗತ್ತಿನಲ್ಲಿ ಐಶ್ವರ್ಯವುಳ್ಳವರನ್ನು ಸೌಭಾಗ್ಯವಂತರೆಂದು ಭಾ ಲಾಗುತ್ತದೆ. ಆದರೆ ಈ ಕಲ್ಪನೆಯನ್ನು ಪ್ರವಾದಿ(ಸ) ಖಂಡಿಸಿರುವರು:

ಹ. ಅಬೂದರ್(ರ) ಉಲ್ಲೇಖಿಸಿರುವರು: ಒಮ್ಮೆ ನಾನು ಪ್ರವಾದಿವರ್ಯರ ಬಳಿಗೆ ಹೋದೆನು. ಅವರಾಗ ಪವಿತ್ರ ಕಅಬಾದ ನೆರಳಲ್ಲಿ ಕುಳಿತಿದ್ದರು. ನನ್ನ ಕಂಡು ಪ್ರವಾದಿ(ಸ) ಹೇಳಿದರು- "ಕಅಬಾದ ಒಡೆಯನ ಆಣೆ! ಅತಿದೊಡ್ಡ ನಷ್ಟಕ್ಕೊ ದವರು ಅವರೇ" ನಾನು ವಿಚಾರಿಸಿದೆ. "ನಿಮಗಾಗಿ ನನ್ನ ಮಾತಾಪಿತರು ಅರ್ಪಿತ ಅವರು ಅಂದರೆ ಯಾರು?" ಪ್ರವಾದಿ(ಸ) ಹೇಳಿದರು: "ದೊಡ್ಡ ಶ್ರೀಮಂತರು. ಅ ಷ್ಟೆಕಿ, ಹೀಗೆ ಮುಂದಿನಿಂದಲೂ ಹಿಂದಿನಿಂದಲೂ ಎಡದಿಂದಲೂ ಬಲದಿಂದಲೂ ಖ ಮಾಡುವವರ ಹೊರತು. ಆದರೆ ಅಂತಹವರ ಸಂಖ್ಯೆ ಬಹಳ ಕಡಿಮೆ."

(ಬುಖಾರಿ, ಮುಸ್ಲಿ

## ನಾಲಿಗೆಯ ನಿಯಂತ್ರಣ

ಮನುಷ್ಯನು ತನ್ನ ನಾಲಿಗೆಯಿಂದ ಮಾಡುವಷ್ಟು ಪಾಪಗಳನ್ನು ಬಹುಶಃ ಶರೀರದ ಬೇರಾವ ಅಂಗದಿಂದಲೂ ಮಾಡುವುದಿಲ್ಲ. ನಾಲಿಗೆಯ ದುರುಪಯೋಗ ಅಥ ಅನಿಯಂತ್ರಿತ ಉಪಯೋಗದಿಂದ ಕುಟುಂಬದಲ್ಲೂ ಸಮಾಜದಲ್ಲೂ ಅನೇಕ ಬಗ ಜಗಳ, ಅಶಾಂತಿ ಮತ್ತು ಪ್ರಕ್ಷೋಭೆಗಳು ಹುಟ್ಟಿಕೊಳ್ಳುತ್ತವೆ. ಎಷ್ಟೋ ದೊಡ್ಡದೊ ಕಲಹ ಮತ್ತು ಸಮರಗಳ ಮೂಲವೇನೆಂದು ಅವುಗಳ ಆಳಕ್ಕೆ ಹೋಗಿ ನೋಡಿದರೆ, ಅ ನಾಲಿಗೆಯ ದುರುಪಯೋಗ ಅಥವಾ ಬೇಜಬ್ದಾರಿಯುತ ಮಾತಿನ ಪಾತ್ರವನ್ನು ನ ಗುರುತಿಸಬಹುದು. ಅಗತ್ಯಕ್ಕಿಂತ ಹೆಚ್ಚಾಗಿ ಮಾತನಾಡುವುದರಿಂದ ಮನುಷ್ಯನ ವರ್ಚ ಕುಂದುವುದು ಮಾತ್ರವಲ್ಲದೆ ಅವನ ಚಾರಿತ್ರ್ಯವೂ ಕಳಂಕಿತವಾಗುತ್ತದೆ. ಹೆಚ್ಚು ಮಾತನಾ ವವರು ಆಲೋಚಿಸಿ ಕಾರ್ಯವೆಸಗುವ ಮತ್ತು ಯಾವುದಾದರೂ ಹೊಣೆಗಾರಿಕೆಯ ಕರ್ತವ್ಯ ಪ್ರಜ್ಞೆಯೊಂದಿಗೆ ನಿರ್ವಹಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾರೆ. ಇ ಕಾರಣದಿಂದ ಪ್ರವಾದಿ(ಸ) ನಮಗೆ ಹೀಗೆ ಆದೇಶಿಸಿರುವರು:

"ಅಲ್ಲಾಹನ ಮೇಲೂ ಪರಲೋಕದ ಮೇಲೂ ವಿಶ್ವಾಸವುಳ್ಳವನು ಮಾತನಾ ವುದಾದರೆ ಉತ್ತಮ ಮಾತನ್ನು ಮಾತ್ರ ಆಡಲಿ. ಇಲ್ಲವಾದರೆ ಮೌನವಾಗಿರಲಿ."

(ಬುಖಾರಿ, ಮುಸ್ಲಿವ

ಈ ಹದೀಸ್‌ನಲ್ಲಿ ಅತಿಯಾದ, ನಿಷ್ಪ್ರಯೋಜಕ ಮಾತನ್ನು ನಿರುತ್ತೇಜಿಸಲಾಗಿದ್ದು, ಂತಹ ಮಾತಿಗಿಂತ ಮೌನವೇ ಲೇಸೆಂದು ಹೇಳಲಾಗಿದೆ. ಇನ್ನೊಂದು ಸಂದರ್ಭದಲ್ಲಿ ವಾದಿ(ಸ) ಹೀಗೆ ಹೇಳಿದರು:

"ದಾಸನು ಅಲ್ಲಾಹನನ್ನು ಮೆಚ್ಚಿಸುವ ಒಂದು ಮಾತನ್ನಾಡುತ್ತಾನೆ. ಆ ಮಾತಿಗೆ ವನು ಹೆಚ್ಚು ಮಹತ್ವ ಕೊಟ್ಟಿರುವುದಿಲ್ಲ. ಆದರೆ ಆ ಮಾತಿನಿಂದಾಗಿ ಅವನ ಸ್ಥಾನಮಾನವು ನ್ನತಿಗೇರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ದಾಸನು ಅಲ್ಲಾಹನನ್ನು ಕೋಪಗೊಳಿಸುವ ನಾದರೊಂದು ಮಾತನ್ನು ಯಾವುದಾದರೂ ಸಂದರ್ಭದಲ್ಲಿ ಆಡಿರುತ್ತಾನೆ. ಅವನು ದಕ್ಕೆ ಹೆಚ್ಚು ಮಹತ್ವ ಕೊಟ್ಟಿರುವುದಿಲ್ಲ. ಆದರೆ ಆ ಮಾತಿನ ಪರಿಣಾಮವಾಗಿ ಅವನು ರಕಕ್ಕೆ ತಲುಪುತ್ತಾನೆ." (ಬುಖಾರಿ)

ನಾಲಿಗೆಯ ಸದುಪಯೋಗ ಎಷ್ಟು ಫಲಕಾರಿಯಾಗಬಲ್ಲುದು ಮತ್ತು ಅದರ ರುಪಯೋಗ ಎಷ್ಟು ಮಾರಕವಾಗಬಲ್ಲುದು ಎಂಬುದನ್ನು ಈ ವಚನವು ಸ್ಪಷ್ಟವಾಗಿ ಿಸುತ್ತದೆ.

ಹ. ಅಬೂಹುರೈರಾ(ರ) ಉಲ್ಲೇಖಿಸಿರುವಂತೆ, ಒಮ್ಮೆ ಪ್ರವಾದಿ(ಸ) ಹೀಗೆ ಹೇಳಿದರು:

"ಸ್ವರ್ಗಕ್ಕೆ ಪ್ರವೇಶಿಸುವವರ ಪೈಕಿ ಹೆಚ್ಚಿನವರು ಯಾವ ಕಾರಣದಿಂದ ಅಲ್ಲಿಗೆ ಪ್ರವೇಶ ಡೆಯುವರೆಂದು ನಿಮಗೆ ಗೊತ್ತೇ? ದೇವಭಕ್ತಿ ಮತ್ತು ಸಚ್ಚಾರಿತ್ರ್ಯದಿಂದ. ನರಕದೊಳಗೆ ಚ್ಚಿನವರು ಯಾವ ಕಾರಣದಿಂದ ಪ್ರವೇಶಿಸುವರೆಂದು ನಿಮಗೆ ಗೊತ್ತೇ? ನಾಲಿಗೆ ಮತ್ತು ಪ್ತಾಂಗ(ದುರುಪಯೋಗ)ಗಳಿಂದ." (ತಿರ್ಮಿದಿ, ಇಬ್ನುಮಾಜಃ)

ಒಂದು ಹದೀಸ್‌ನಲ್ಲಿ ಪ್ರವಾದಿ(ಸ) ಹೀಗೆ ಹೇಳಿರುವುದಾಗಿ ವರದಿಯಾಗಿದೆ:

"ಯಾವ ವ್ಯಕ್ತಿ ತನ್ನ ಎರಡು ದವಡೆಗಳ ನಡುವೆ ಇರುವ ವಸ್ತು(ನಾಲಿಗೆ) ಮತ್ತು ನ್ನ ಎರಡು ತೊಡೆಗಳ ನಡುವೆ ಇರುವ ವಸ್ತು(ಗುಪ್ತಾಂಗ)ಗಳ ಬಗ್ಗೆ ನನಗೆ (ತಾನು ವುಗಳನ್ನು ದುರುಪಯೋಗಪಡಿಸುವುದಿಲ್ಲವೆಂಬ) ವಚನ ನೀಡುವನೋ ನಾನು ಅವರಿಗೆ ರ್ಗದ ಭರವಸೆ ನೀಡುತ್ತೇನೆ." (ಬುಖಾರಿ)

ನಾಲಿಗೆ ಮತ್ತು ಗುಪ್ತಾಂಗಗಳ ಸಂರಕ್ಷಣೆಯು ಮನುಷ್ಯನನ್ನು ಅನೇಕ ಪಾಪಗಳಿಂದ ತ್ತು ಕೆಡುಕುಗಳಿಂದ ರಕ್ಷಿಸುವುದು ಮಾತ್ರವಲ್ಲದೆ ಅದರಿಂದ ಅವನ ಚಾರಿತ್ರ್ಯಕ್ಕೆ ವಿತ್ರ್ಯ ಮತ್ತು ದೃಢತೆ ಸಿಗುತ್ತದೆ. ಪ್ರಸ್ತುತ ಹದೀಸ್‌ಗಳಿಂದ ವ್ಯಕ್ತವಾಗುವಂತೆ, ವುಗಳನ್ನು ಸಂರಕ್ಷಿಸುವ ವ್ಯಕ್ತಿ ಸ್ವರ್ಗಕ್ಕೆ ಅರ್ಹನಾಗುತ್ತಾನೆ. ಇದಕ್ಕೆ ತದ್ವಿರುದ್ಧವಾಗಿ ಳ್ಳು, ವಂಚನೆ, ಮೂದಲಿಕೆ, ಅಪಹಾಸ್ಯ, ಸುಳ್ಳಾರೋಪ, ಅಪವಾದ ಇತ್ಯಾದಿ ದುಷ್ಕೃತ್ಯ ಿಗಾಗಿ ತನ್ನ ನಾಲಿಗೆಯನ್ನು ಬಳಸುವವನು ಮತ್ತು ತನ್ನ ಗುಪ್ತಾಂಗಗಳನ್ನು ವ್ಯಭಿಚಾರ, ಿಂಗ ರತಿಯೇ ಮುಂತಾದ ಘೋರ ಅಶ್ಲೀಲ ಕೃತ್ಯಗಳಿಗೆ ಉಪಯೋಗಿಸುವವನು ರೀ ಪಾಪ ಭಾರವನ್ನು ಹೊತ್ತು, ತನ್ನ ಚಾರಿತ್ರ್ಯವನ್ನು ನಾಶ ಮಾಡಿಕೊಳ್ಳುವನು ಾತ್ರವಲ್ಲದೆ ಅವನು ಶಾಶ್ವತ ನರಕ ಯಾತನೆಗೂ ಅರ್ಹನಾಗುತ್ತಾನೆ.

❀❀❀

## ಮನೆ ಮಂದಿಯ ಸುಧಾರ

ಮಡದಿ-ಮಕ್ಕಳು ಮನುಷ್ಯನ ಅತ್ಯಮೂಲ್ಯ ಸಂಪತ್ತು. ಜಗತ್ತಿನಲ್ಲಿ ಪ್ರತಿಯೊ ಮನುಷ್ಯನೂ ತನ್ನ ಮಡದಿ-ಮಕ್ಕಳ ಉದ್ಧಾರವಾಗಬೇಕೆಂದು ಹಂಬಲಿಸುತ್ತಿರುತ್ತಾ ಅವರ ಸುಖ ಸಂತೋಷಗಳಿಗಾಗಿ ತಾನು ಕಷ್ಟಪಡುತ್ತಾನೆ. ಹಗಲಿರುಳೂ ಶ್ರಮಿಸು ರುತ್ತಾನೆ. ತನ್ನ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ವಿನಿಯೋಗಿಸಿ ಅವರಿಗಾಗಿ ಸಂಪಾ ತರುತ್ತಾನೆ. ಮನೆಯವರ ಸುಖ-ಸಂತೋಷಕ್ಕಾಗಿ ಅವನು ಸ್ವತಃ ತನ್ನ ಸುಖ-ಸಂತೋ ಗಳನ್ನು ಬಲಿಕೊಡುತ್ತಾನೆ.

ಸತ್ಯವಿಶ್ವಾಸಿಯು ತನ್ನಂತೆ ತನ್ನ ಮನೆಯವರ ನೈಜ ಸುಖ-ಕ್ಷೇಮವು ಅಲ್ಲಾಹ ಸಂಪ್ರೀತಿಯಲ್ಲಿ ಮಾತ್ರ ಅಡಗಿದೆ ಎಂದು ನಂಬುವವನಾಗಿರುತ್ತಾನೆ. ಆದ್ದರಿಂದ ಅವ ತಾನೊಬ್ಬನೇ ಅಲ್ಲಾಹನ ಸಂಪ್ರೀತಿಯ ಮಾರ್ಗದಲ್ಲಿ ನಡೆಯುವ ಬದಲು ತ ಮನೆಯವರನ್ನೂ ಆ ಸನ್ಮಾರ್ಗದಲ್ಲಿ ನಡೆಸಲು ಪ್ರಯತ್ನಿಸುತ್ತಾನೆ. ಸ್ವಾಭಾವಿಕವಾಗಿ ಅವನು ಯಾವ ಜಗದೊಡನೆಯನನ್ನು ಮೆಚ್ಚಿಸಲು ತಾನು ಶ್ರಮಿಸುತ್ತಿರುವನೋ ಅವನ ಮೆಚ್ಚಿಸಲು ತನ್ನ ಮನೆಯವರೂ ಶ್ರಮಿಸಬೇಕು ಮತ್ತು ಆ ಮೂಲಕ ತನ್ನಂತೆ ಅವ ನರಕಾಗ್ನಿಯಿಂದ ರಕ್ಷಣೆ ಪಡೆದು ಸ್ವರ್ಗಕ್ಕೆ ಅರ್ಹರಾಗಬೇಕು ಎಂದು ಹಾತೊರೆಯುತ್ತಾ ತಾನೂ ತನ್ನ ಮನೆಯವರೂ ಜೊತೆಯಾಗಿಯೇ ಸ್ವರ್ಗವನ್ನು ಪ್ರವೇಶಿಸಬೇಕು ಮ ಅಲ್ಲಿಯ ಸುಖವನ್ನು ಜೊತೆಯಾಗಿ ಅನುಭವಿಸಬೇಕು ಎಂದು ಅವನು ಆಶಿಸುತ್ತಾ ಆದ್ದರಿಂದಲೇ ಅವನು ತನ್ನ ಪಾಲಕ ಪ್ರಭುವಿನೊಡನೆ ಆಗಾಗ ಹೀಗೆ ಪ್ರಾರ್ಥಿಸುತ್ತಾ

"ಅವರು, "ನಮ್ಮ ಪ್ರಭೂ, ನಮ್ಮ ಪತ್ನಿಯರಿಂದಲೂ ಮಕ್ಕಳಿಂದಲೂ ನವ ಕಣ್ಮನಗಳನ್ನು ತಣಿಸು ಮತ್ತು ನಮ್ಮನ್ನು ಧರ್ಮನಿಷ್ಠರ ನಾಯಕರಾಗಿ ಮಾಡು" ಎಂ ಪ್ರಾರ್ಥಿಸುತ್ತಾರೆ." (ಪವಿತ್ರ ಕುರ್‌ಆನ್, 25:7

ಅರ್ಥಾತ್, ನಮ್ಮ ಕುಟುಂಬದವರನ್ನು ಸತ್ಯದ ನೈಜ ಅನುಯಾಯಿಗಳಾಗಿಯೂ ಸತ್ಯ ಧ್ವಜವಾಹಕರಾಗಿಯೂ ಅದರ ಸಂಸ್ಥಾಪಕರಾಗಿಯೂ ಮಾಡು. ಅವರ ದೇವಭಕ್ತಿಯನ ಸತ್ಯಸಂಧತೆಯನ್ನೂ ಕಂಡು ನಮ್ಮ ಕಣ್ಮನಗಳು ತಣಿಯುವಂತಾಗಲಿ. ನಮ್ಮ ಮನೆ ಸತ್ಯನಿಷ ಮನೆಯಾಗಲಿ ಮತ್ತು ನಮ್ಮ ಮನೆಯವರು ಮುಂಚೂಣಿಯ ಸತ್ಯನಿಷ್ಠರಾಗಲಿ.

ಮನೆ ಮಂದಿಯ ಸುಧಾರಣೆಗೆ ಒತ್ತು ಕೊಡುತ್ತಾ ಪವಿತ್ರ ಕುರ್‌ಆನಿನಲ್ಲಿ ಹೀಗೆ ನೇಶಿಸಲಾಗಿದೆ:

**"ಸತ್ಯವಿಶ್ವಾಸಿಗಳೇ, ಮಾನವರೂ ಶಿಲೆಗಳೂ ಇಂಧನವಾಗಲಿರುವ ಅಗ್ನಿಯಿಂದ ಮ್ಮನ್ನೂ ನಿಮ್ಮ ಕುಟುಂಬದವರನ್ನೂ ರಕ್ಷಿಸಿಕೊಳ್ಳಿರಿ." (66:6)**

ಈ ದಿವ್ಯವಚನದಿಂದ ತಿಳಿಯುವಂತೆ, ಯಾವ ರೀತಿ ಸ್ವತಃ ತನ್ನನ್ನು ಸುಧಾರಿಸಿ ಂಡು ನರಕಾಗ್ನಿಯಿಂದ ರಕ್ಷಿಸಿಕೊಳ್ಳಬೇಕಾದುದು ಸತ್ಯವಿಶ್ವಾಸಿಯ ಕರ್ತವ್ಯವೋ ಅದೇ ತಿ ತನ್ನ ಮನೆಯವರನ್ನೂ ಅದರಿಂದ ರಕ್ಷಿಸಲು ಮತ್ತು ಅದಕ್ಕಾಗಿ ಅವರನ್ನು ಧಾರಿಸಲು ಶ್ರಮಿಸಬೇಕಾದುದೂ ಅವನ ಕರ್ತವ್ಯವಾಗಿದೆ. ಒಂದು ವೇಳೆ ಅವನು ತನ್ನ ನೆಯವರ ಸುಧಾರಣೆಗೆ ಶ್ರಮಿಸದಿದ್ದರೆ ಮತ್ತು ಅವರನ್ನು ಕೆಡುಕುಗಳಿಂದ ದೂರವಿಡುವ ಕ್ಷ ಕರ್ತವ್ಯದಲ್ಲಿ ಏನಾದರೂ ಲೋಪ ತೋರಿದರೆ ಅವನು ಅಲ್ಲಾಹನ ಬಳಿ ಆ ಬಗ್ಗೆ ಚಾರಣೆಯನ್ನು ಎದುರಿಸಬೇಕಾಗುವುದು.

ಪ್ರವಾದಿ(ಸ) ತಮ್ಮ ಒಂದು ವಚನದಲ್ಲಿ ಇದನ್ನು ಈ ರೀತಿ ವಿವರಿಸಿರುವರು,

"ತಿಳಿಯಿರಿ! ನಿಮ್ಮ ಪೈಕಿ ಪ್ರತಿಯೊಬ್ಬನೂ ಹೊಣೆಗಾರ ಮತ್ತು ಮೇಲ್ವಿಚಾರಕನು. ತಿಯೊಬ್ಬ ಮೇಲ್ವಿಚಾರಕನೊಡನೆ ಅವನ ಅಧೀನದಲ್ಲಿರುವವರ ಬಗ್ಗೆ ಪ್ರಶ್ನಿಸ ಗುವುದು... ಪುರುಷನು ತನ್ನ ಮನೆಯವರ ಬಗ್ಗೆ ಹೊಣೆಗಾರನಾಗಿದ್ದಾನೆ. ಅವನೊಡನೆ ವರ ಬಗ್ಗೆ ವಿಚಾರಿಸಲಾಗುವುದು. ಸ್ತ್ರೀಯು ತನ್ನ ಪತಿಯ ಮನೆ ಮತ್ತು ಮಕ್ಕಳ ಗ್ಗೆ ಹೊಣೆಗಾರಳಾಗಿದ್ದಾಳೆ. ಅವಳೊಡನೆ ಅದರ ಕುರಿತು ವಿಚಾರಣೆ ನಡೆಯುವುದು."

**(ಬುಖಾರಿ, ಮುಸ್ಲಿಮ್)**

ಪ್ರವಾದಿ ಮುಹಮ್ಮದ್(ಸ) ಅಲ್ಲಾಹನ ಸಂದೇಶವಾಹಕರಾಗಿ ನಿಯುಕ್ತರಾದಾಗ ಥಮವಾಗಿ ತಮ್ಮ ಪತ್ನಿ ಹ.ಖದೀಜಾರಿಗೆ(ರ) ತಮ್ಮ ಪ್ರವಾದಿತ್ವದ ವಿಷಯ ತಿಳಿಸಿದರು. ದೀಜಾ(ರ) ಆ ಕ್ಷಣವೇ ಅವರ ಸಂದೇಶವನ್ನು ಸ್ವೀಕರಿಸಿ ಮುಸ್ಲಿಮರಾದರು. ಮಾತ್ರವಲ್ಲ ಮ್ಮ ಪ್ರೀತಿ, ಅನುರಾಗ, ವಿವೇಕ ಮತ್ತು ಸಂಪತ್ತನ್ನೆಲ್ಲಾ ತೊಡಗಿಸಿ, ಪ್ರವಾದಿ ರ್ಯರು(ಸ) ಆರಂಭಿಸಿದ್ದ ಸತ್ಯಪ್ರಚಾರದ ಕಾರ್ಯದಲ್ಲಿ ಅವರಿಗೆ ಬೆಂಬಲವಾಗಿ ನಿಂತರು. ವಾದಿವರ್ಯರ(ಸ) ಪುತ್ರಿಯರೂ ಅವರ ಸಂದೇಶ ಸ್ವೀಕರಿಸಿ ಇಸ್ಲಾಮಿನ ಅತ್ಯುತ್ತಮ ವಕಿಯರಾದರು.

"ನಿಮ್ಮ ಹತ್ತಿರದ ಬಂಧುಗಳನ್ನು ಎಚ್ಚರಿಸಿರಿ" ಎಂಬ ಕುರ್‌ಆನಿನ ಆದೇಶವು ವಾದಿ ವರ್ಯರಿಗೆ(ಸ) ದೊರೆತೊಡನೆ ಅವರು ತಮ್ಮ ಬಂಧು-ಬಾಂಧವರನ್ನು ಸತ್ಯದೆಡೆಗೆ ಹ್ವಾನಿಸುವ ಕ್ರಿಯೆಯಲ್ಲಿ ನಿರತರಾಗಿಬಿಟ್ಟರು. ಈ ಕುರಿತು ಹೆಚ್ಚಿನ ವಿವರಗಳನ್ನು ಅಬೂಹುರೈರಾರ(ರ) ಈ ಕೆಳಗಿನ ಉಲ್ಲೇಖದಲ್ಲಿ ಕಾಣಬಹುದು.

"ನಿಮ್ಮ ಹತ್ತಿರದ ಬಂಧುಗಳನ್ನು ಎಚ್ಚರಿಸಿರಿ... ಎಂಬ ಆದೇಶವು ಅವತೀರ್ಣವಾ ೂಡನೆ ಪ್ರವಾದಿವರ್ಯರು(ಸ) ಎಲ್ಲಾ ಕುರೈಶರಿಗೆ ಕರೆ ಕಳುಹಿಸಿದರು. ಬಡವ-ಬಲ್ಲಿದ ಕ್ಷದೆ ಎಲ್ಲರೂ ಆಗಮಿಸಿದರು. ಪ್ರವಾದಿ(ಸ) ಅವರನ್ನುದ್ದೇಶಿಸಿ ಹೇಳಿದರು, "ಕುರೈಶರೇ!

ನಿಮ್ಮನ್ನು ನೀವೇ ರಕ್ಷಿಸಿಕೊಳ್ಳಿರಿ. ನಾನು ನಿಮ್ಮನ್ನು ಅಲ್ಲಾಹನ ಶಿಕ್ಷೆಯಿಂದ ರಕ್ಷಿಸಲಾ
ಅಬ್ದುಮನಾಫ್ ಗೋತ್ರದವರೇ! ನಾನು ನಿಮ್ಮನ್ನು ಅಲ್ಲಾಹನ ಶಿಕ್ಷೆಯಿಂದ ರಕ್ಷಿಸಲಾ
ಅಬ್ಬಾಸ್ ಬಿನ್ ಅಬ್ದುಲ್ ಮುತ್ತಲಿಬ್! ನಾನು ನಿಮ್ಮನ್ನು ಅಲ್ಲಾಹನ ಶಿಕ್ಷೆಯಿಂ
ರಕ್ಷಿಸಲಾರೆ. ಅಲ್ಲಾಹನ ಸಂದೇಶವಾಹಕರ ಪಿತೃ ಸಹೋದರಿ ಸಫಿಯ್ಯಾ! ನಾನು ನಿಮ್ಮ
ಅಲ್ಲಾಹನ ಶಿಕ್ಷೆಯಿಂದ ರಕ್ಷಿಸಲಾರೆ. ಮುಹಮ್ಮದರ ಮಗಳು ಫಾತಿಮಾ! ನಿನಗೆ ನ
ಸಂಪತ್ತಿನಿಂದ ಏನು ಬೇಕೋ ಕೇಳು. ಆದರೆ ಅಲ್ಲಾಹನ ಶಿಕ್ಷೆಯಿಂದ ನಾನು ನಿನ್ನ
ರಕ್ಷಿಸಲಾರೆ." (ಬುಖಾರಿ, ಮುಸ್ಲಿಮ

ಹ. ಖದೀಜಾರ(ರ) ನಿಧನಾನಂತರ ಪ್ರವಾದಿ(ಸ) ಹಲವು ಮಹಿಳೆಯರನ್ನು ವಿವಾ
ವಾದರು. ಅವರ ಈ ಎಲ್ಲ ಪತ್ನಿಯರೂ ಅತ್ಯಂತ ವಿಧೇಯರೂ ಸತ್ಯಸಂಧರೂ ಧರ್ಮ
ಶೀಲರೂ ಆಗಿದ್ದರು. ಪ್ರವಾದಿವರ್ಯರಿಂದ(ಸ) ಶಿಕ್ಷಣ ಹಾಗೂ ತರಬೇತಿ ಪಡೆದು ಅವ
ಧರ್ಮದ ಸೇವೆ ಮತ್ತು ಅನುಸರಣೆಯಲ್ಲಿ ನಿರತರಾದರು. ಒಮ್ಮೆ ಪ್ರವಾದಿ ಪತ್ನಿಯರ
ಅವರಿಗೆ ಭೂಷಣವಲ್ಲದ ಯಾವುದೋ ಒಂದು ವರ್ತನೆ ತೋರಿದಾಗ ಪ್ರವಾದಿ(ಸ
ತೀವ್ರವಾಗಿ ನೊಂದುಕೊಂಡರು. ಕೆಲವು ದಿನಗಳ ಕಾಲ ಅವರು ತಮ್ಮ ಈ ಪತ್ನಿಯರಿಂ
ದೂರವುಳಿದರು. ಕೊನೆಗೆ ಈ ದೇವವಾಕ್ಯಗಳು ಅವತೀರ್ಣಗೊಂಡುವು:

"ಪೈಗಂಬರರೇ, ನಿಮ್ಮ ಪತ್ನಿಯರೊಡನೆ ಹೇಳಿರಿ- "ನೀವು ಈ ಲೋಕ ಮತ
ಇದರ ವೈಭವಗಳನ್ನು ಇಚ್ಛಿಸುತ್ತೀರಾದರೆ- ಬನ್ನಿರಿ, ನಾನು ನಿಮಗೇನಾದರೂ ಕೊಡ
ನಿಮ್ಮನ್ನು ಉತ್ತಮ ರೀತಿಯಲ್ಲಿ ಬೀಳ್ಕೊಡುತ್ತೇನೆ. ನೀವು ಅಲ್ಲಾಹ್, ಅವನ ಸಂದೇ
ವಾಹಕರು ಮತ್ತು ಪರಲೋಕದ ಬೀಡನ್ನು ಇಚ್ಛಿಸುತ್ತೀರಾದರೆ, ನಿಮ್ಮಲ್ಲಿ ಸಜ್ಜನರಾಗಿ
ವವರಿಗೆ ಅಲ್ಲಾಹ್ ದೊಡ್ಡ ಸತ್ಫಲವನ್ನು ಸಿದ್ಧಗೊಳಿಸಿಟ್ಟಿರುತ್ತಾನೆಂಬುದನ್ನು ತಿಳಿ
ಕೊಳ್ಳಿರಿ." ಪೈಗಂಬರರ ಪತ್ನಿಯರೇ, ನಿಮ್ಮಲ್ಲಿ ವ್ಯಕ್ತವಾದ ಅಶ್ಲೀಲ ಕಾರ್ಯವೆಸ
ವವಳಿಗೆ ಇಮ್ಮಡಿ ಯಾತನೆ ಕೊಡಲಾಗುವುದು. ಇದು ಅಲ್ಲಾಹನಿಗೆ ಅತಿ ಸುಲಭವಾ
ಕೆಲಸ. ಅದಲ್ಲದೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡುವವಳ
ಮತ್ತು ಸತ್ಕರ್ಮವೆಸಗುವವಳಿಗೆ ನಾವು ಇಮ್ಮಡಿ ಸತ್ಫಲವನ್ನೀಯುವೆವು. ನಾವು ಅವಳಿಗಾ
ಗೌರವಪೂರ್ಣ ಜೀವನಾಧಾರವನ್ನು ಸಿದ್ಧಗೊಳಿಸಿಟ್ಟಿದ್ದೇವೆ. ಪೈಗಂಬರರ ಪತ್ನಿಯರೆ
ನೀವು ಸಾಮಾನ್ಯ ಸ್ತ್ರೀಯರಂತಲ್ಲ. ನೀವು ಅಲ್ಲಾಹನನ್ನು ಭಯಪಡುವವರಾಗಿದ್ದ
ಮಾನಸಿಕ ಕೇಡಿಗೊಳಗಾದ ವ್ಯಕ್ತಿಯು ಪ್ರಲೋಭನಕ್ಕೊಳಗಾಗಿ ಬಿಡುವ ರೀತಿಯ
ಮೋಹಕ ದನಿಯಲ್ಲಿ ಮಾತಾಡಬೇಡಿರಿ. ನಿಖರವಾಗಿ ಮಾತಾಡಿರಿ. ನಿಮ್ಮ ಮನೆಗಳಲ್ಲೆ
ಇದ್ದುಕೊಳ್ಳಿರಿ. ಗತ ಅಜ್ಞಾನ ಕಾಲದಂತಹ ಸೌಂದರ್ಯ ಪ್ರದರ್ಶನ ಮಾಡುತ್ತ ತಿರುಗಾ
ಬೇಡಿರಿ. ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ಕೊಡಿರಿ, ಅಲ್ಲಾಹ್ ಮತ್ತು ಅವ
ರಸೂಲನ್ನು ಅನುಸರಿಸಿರಿ. ರಸೂಲರ ಮನೆಯವರಾದ ನಿಮ್ಮಿಂದ ಮಾಲಿನ್ಯವನ
ದೂರೀಕರಿಸಿ ನಿಮ್ಮನ್ನು ಸಂಪೂರ್ಣವಾಗಿ ಶುದ್ಧಿಗೊಳಿಸಲು ಅಲ್ಲಾಹ್ ಇಚ್ಛಿಸುತ್ತಾ

ಮ್ಮ ಮನೆಗಳಲ್ಲಿ ಓದಿ ಹೇಳಲಾಗುತ್ತಿರುವ ಅಲ್ಲಾಹನ ಸೂಕ್ತಗಳನ್ನೂ ಯುಕ್ತಿಪೂರ್ಣ
ತುಗಳನ್ನೂ ಚೆನ್ನಾಗಿ ನೆನಪಿಡಿರಿ. ನಿಶ್ಚಯವಾಗಿಯೂ ಅಲ್ಲಾಹ್ ಸೂಕ್ಷ್ಮಜ್ಞನೂ
ವರಪೂರ್ಣನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 33:28-34)

ಪ್ರವಾದಿವರ್ಯರು(ಸ) ಈ ದಿವ್ಯ ಆದೇಶವನ್ನು ತಮ್ಮ ಪ್ರತಿಯೊಬ್ಬ ಪತ್ನಿಗೂ ಓದಿ
ಳಿಸಿದರು. ಅವರೆಲ್ಲರೂ ಅವುಗಳನ್ನು ಸಂಪೂರ್ಣ ಪಾಲಿಸುವುದಾಗಿಯೂ ಪ್ರವಾದಿ
ರ್ಯರ(ಸ) ಸಂಗಡವಿದ್ದು ಸತ್ಯಧರ್ಮದ ಸೇವೆ ಮಾಡುವುದಾಗಿಯೂ ಪಣತೊಟ್ಟರು.
ನಂತರದ ದಿನಗಳು ಅವರ ಪ್ರಾಮಾಣಿಕತೆಗೆ ಸಾಕ್ಷಿಯಾದುವು. ಧರ್ಮವನ್ನು ಗ್ರಹಿಸುವ,
ನನ್ನು ಪಾಲಿಸುವ ಮತ್ತು ಇತರರಿಗೆ ಅವನ್ನು ಕಲಿಸುವ ವಿಷಯದಲ್ಲಿ ಪ್ರವಾದಿ ಪತ್ನಿಯರು
ತರೆಲ್ಲರಿಗೂ ಮಾದರಿಗಳಾಗಿ ಆದರ್ಶ ನಾರಿಯರೆನಿಸಿಕೊಂಡರು.

ಪ್ರಸ್ತುತ ವಾಕ್ಯಗಳಲ್ಲಿ ಪ್ರವಾದಿ ಪತ್ನಿಯರನ್ನುದ್ದೇಶಿಸಿ ಅಲ್ಲಾಹನು ನೀಡಿರುವ
ದೇಶಗಳು ನಿಜವಾಗಿ ಜಗತ್ತಿನ ಎಲ್ಲ ಸತ್ಯವಿಶ್ವಾಸಿ ಮಹಿಳೆಯರಿಗೂ ಅನ್ವಯಿಸುತ್ತದೆ.
ಆದೇಶದ ಬೆನ್ನಿಗೇ ಅಲ್ಲಾಹನು ಮುಂದಿನ ವಾಕ್ಯದಲ್ಲಿ ಯಥಾರ್ಥ ಸತ್ಯವಿಶ್ವಾಸಿಗಳಾದ
ೀ-ಪುರುಷರಲ್ಲಿ ಇರಬೇಕಾದ ಗುಣಗಳನ್ನು ವರ್ಣಿಸಿರುವನು:

"ನಿಶ್ಚಯವಾಗಿಯೂ ಮುಸ್ಲಿಮರೂ ಸತ್ಯವಿಶ್ವಾಸಿಗಳೂ ಆಜ್ಞಾಪಾಲಕರೂ
ತ್ಯಸಂಧರೂ ಸಹನಶೀಲರೂ ವಿನಮ್ರರೂ ದಾನಶೀಲರೂ ಉಪವಾಸ ವ್ರತವನ್ನಾಚರಿಸು
ವರೂ ತಮ್ಮ ಗುಪ್ತಾಂಗಗಳ ರಕ್ಷಣೆ ಮಾಡಿಕೊಳ್ಳುವವರೂ ಅಲ್ಲಾಹನನ್ನು ಅತ್ಯಧಿಕವಾಗಿ
ರಿಸುವವರೂ ಆದ ಎಲ್ಲಾ ಪುರುಷರು ಮತ್ತು ಸ್ತ್ರೀಯರಿಗೆ ಅಲ್ಲಾಹನು ಕ್ಷಮೆ ಮತ್ತು
ದೊಡ್ಡ ಸತ್ಫಲವನ್ನು ಸಿದ್ಧಗೊಳಿಸಿಟ್ಟಿದ್ದಾನೆ."

(ಪವಿತ್ರ ಕುರ್‌ಆನ್, 33:35)

ಈ ದಿವ್ಯ ವಾಕ್ಯದಲ್ಲಿ ಯಾವೆಲ್ಲಾ ಸದ್ಗುಣಗಳು ಪುರುಷರಲ್ಲಿ ಅಪೇಕ್ಷಿತವೆಂದು
ಳಲಾಗಿದೆಯೋ ಆ ಎಲ್ಲ ಗುಣಗಳು ಸ್ತ್ರೀಯರಲ್ಲೂ ಅಪೇಕ್ಷಿತವಾಗಿವೆಯೆಂದು
ಳಲಾಗಿದೆ. ಸತ್ಯವಿಶ್ವಾಸಿಗಳು ಸ್ವತಃ ತಮ್ಮಲ್ಲೂ ತಮ್ಮ ಮನೆ ಮಂದಿಯಲ್ಲೂ
ಖ್ಯವಾಗಿ ಎಂಹತ ಸದ್ಗುಣಗಳನ್ನು ಬೆಳೆಸಲು ಶ್ರಮಿಸಬೇಕು ಎಂಬುದನ್ನು ಈ
ಕ್ಯವು ಸೂಚಿಸುತ್ತದೆ. ನಿಜವಾದ ಸತ್ಯವಿಶ್ವಾಸಿಯು ಸ್ವತಃ ಈ ಗುಣಗಳಿಂದ ಸಂಪನ್ನ
ಗಿರುವ ಜೊತೆಗೆ ತನ್ನ ಮಡದಿ-ಮಕ್ಕಳೂ ಈ ಗುಣಗಳನ್ನು ಹೊಂದಿರಬೇಕೆಂದು
ಪೇಕ್ಷಿಸುತ್ತಾನೆ ಮತ್ತು ಆದಕ್ಕಾಗಿ ಶ್ರಮಿಸುತ್ತಾನೆ.

ಒಬ್ಬ ಸತ್ಯವಿಶ್ವಾಸಿ ತನ್ನ ಮಕ್ಕಳಲ್ಲಿ ಎಂತಹ ಗುಣಗಳನ್ನು ಕಾಣಬಯಸುತ್ತಾನೆ
ಬುದಕ್ಕೆ ಪವಿತ್ರ ಕುರ್‌ಆನಿನಲ್ಲಿ ಪ್ರಸ್ತಾಪಿಸಲಾಗಿರುವ, ಹಝ್ರತ್ ಲುಕ್ಮಾನ್(ಅ) ತಮ್ಮ
ತ್ರನಿಗೆ ಕೊಟ್ಟ ಉಪದೇಶವು ಅತ್ಯುತ್ತಮ ಉದಾಹರಣೆಯಾಗಿದೆ:

"ಲುಕ್ಮಾನರು ತಮ್ಮ ಪುತ್ರನಿಗೆ ಉಪದೇಶವೀಯುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ.
ನರು, "ಮಗನೇ ಅಲ್ಲಾಹನೊಂದಿಗೆ ಯಾರನ್ನೂ ಸಹಭಾಗಿಯಾಗಿ ಮಾಡಬೇಡ

ನಿಜವಾಗಿಯೂ ಶಿರ್ಕ್(ಬಹುದೇವವಿಶ್ವಾಸ) ಮಹಾ ಅಕ್ರಮವಾಗಿದೆ" ಎಂದ
ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿ
ತ್ತೇವೆ. ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತ
ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗ
ತಗಲಿದುವು. (ಅದುದರಿಂದಲೇ ನಾವು ಅವನೊಡನೆ) ನನಗೆ ಕೃತಜ್ಞತೆ ಸಲ್ಲಿಸು ಮ
ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೇ ಮರಳಬೇಕಾಗಿದೆ (ಎಂ
ಉಪದೇಶಿಸಿದೆವು). ಆದರೆ, ಅವರು ನಿನಗೆ ತಿಳಿಯದುದನ್ನು ನನ್ನೊಂದಿಗೆ ಸಹಭಾಗಿಯ
ಮಾಡಬೇಕೆಂದು ನಿನ್ನ ಮೇಲೆ ಒತ್ತಡ ಹಾಕಿದರೆ ಅವರ ಮಾತನ್ನು ಎಷ್ಟು ಮಾತ್ರಕ
ಕೇಳಬೇಡ. ಈ ಲೋಕದಲ್ಲಿ ಅವರೊಂದಿಗೆ ಸದ್ವರ್ತನೆ ಮಾಡುತ್ತಿರು. ಆದರೆ, ಯಾ
ನನ್ನ ಕಡೆಗೆ ಒಲಿದಿರುವನೋ ಅವನ ಮಾರ್ಗವನ್ನು ಮಾತ್ರ ಅನುಸರಿಸು. ಮು
ನಿಮಗೆಲ್ಲರಿಗೂ ನನ್ನ ಕಡೆಗೇ ಮರಳಲಿಕ್ಕಿದೆ. ಆಗ ನೀವು ಯಾವ ತರದ ಕರ್ಮಗಳ
ಮಾಡುತ್ತಿದ್ದಿರೆಂದು ನಾನು ನಿಮಗೆ ತೋರಿಸುವೆನು. (ಲುಕ್ಮಾನರು ಹೀಗೆಂದಿದ್ದ
ಮಗನೇ! ಸಾಸಿವೆ ಕಾಳಿನಷ್ಟಿರುವ ಒಂದು ವಸ್ತುವೇ ಇರಲಿ ಅದು ಒಂದು ಬಂಡೆಯ
ಅಥವಾ ಆಕಾಶಗಳಲ್ಲಿ ಅಥವಾ ಭೂಮಿಯೊಳಗೆ ಎಲ್ಲಾದರೂ ಅಡಗಿರಲಿ ಅಲ್ಲಾಹ
ಅದನ್ನು ಹೊರ ತರುವನು. ಅವನು ಸೂಕ್ಷ್ಮದರ್ಶಿ ಮತ್ತು ವಿವರಪೂರ್ಣನಾಗಿರುತ್ತಾ
ಮಗನೇ ನಮಾಝನ್ನು ಸಂಸ್ಥಾಪಿಸು, ಒಳಿತಿನ ಆದೇಶ ಕೊಡು, ಕೆಡುಕಿನಿಂದ ತಡೆ ಮ
ಯಾವ ಕಷ್ಟವೇ ಬರಲಿ ಸಹನೆ ವಹಿಸು. ಇವು ಅತಿ ಹೆಚ್ಚು ತಾಕೀತು ಮಾಡಲ್ಪ
ವಿಷಯಗಳು. ಜನರೊಡನೆ ಮುಖ ತಿರುಗಿಸಿ ಮಾತಾಡಬೇಡ. ಭೂಮಿಯ ಮೇ
ದರ್ಪದಿಂದ ನಡೆಯಬೇಡ, ದುರಭಿಮಾನ ಹಾಗೂ ಅಹಂಕಾರಪಡುವವನನ್ನು ಅಲ್ಲಾಹ
ಮೆಚ್ಚುವುದಿಲ್ಲ. ನಿನ್ನ ನಡೆಯಲ್ಲಿ ಇತಿಮಿತಿಯನ್ನಿರಿಸು. ನಿನ್ನ ಸ್ವರವನ್ನು ಸ್ವಲ್ಪ ತಗ್ಗಿ
ಎಲ್ಲಾ ಸ್ವರಗಳಿಗಿಂತ ಕೆಟ್ಟ ಸ್ವರವು ಕತ್ತೆಯ ಸ್ವರ ವಾಗಿರುತ್ತದೆ." (31:13-1

❁❁❁

# ಧರ್ಮ ಪ್ರಚಾರ

**ಮ**ನುಷ್ಯನು ಯಾವುದನ್ನು ತಾನು ಸತ್ಯವೆಂದು ನಂಬುತ್ತಾನೋ ಅದನ್ನು ಇತರರೂ ಸತ್ಯವೆಂದೇ ನಂಬಬೇಕೆಂದು ಬಯಸುತ್ತಾನೆ. ತಾನು ಸಾಫಲ್ಯದ ಸಾಧನವೆಂದು ಭಾವಿಸುವ ವಿಷಯವನ್ನು ಇತರರೂ ಹಾಗೆಯೇ ಭಾವಿಸಬೇಕು ಎಂದು ಅಪೇಕ್ಷಿಸುತ್ತಾನೆ. ಇದು ಮನುಷ್ಯನ ಸಹಜ ಸ್ವಭಾವ. ಒಬ್ಬ ವ್ಯಕ್ತಿಗೆ ಇಸ್ಲಾಮ್ ಸತ್ಯಧರ್ಮವೆಂದೂ ಅದು ತನ್ನ ಇಹ-ಪರ ವಿಜಯದ ಏಕಮಾತ್ರ ಮಾರ್ಗವೆಂದೂ ಖಾತ್ರಿಯಾದಾಗ ಅವನು ಅದನ್ನು ಇತರರಿಗೆ ತಿಳಿಸಲು ಹಾತೊರೆಯ ತೊಡಗುತ್ತಾನೆ. ತನ್ನ ಬಂಧು-ಬಳಗದವರಿಗೆ, ಪರಿಚಿತರಿಗೆ ಮತ್ತು ಇತರರಿಗೆ ಅದನ್ನು ಪರಿಚಯಿಸಲು ಸನ್ನದ್ಧನಾಗಿ ಎದ್ದು ನಿಲ್ಲುತ್ತಾನೆ. ಒಬ್ಬೊಬ್ಬರ ಬಳಿ ಹೋಗಿ ಅವರೊಡನೆ ಇಸ್ಲಾಮಿನ ಕುರಿತು ಮಾತನಾಡುತ್ತಾನೆ. ಒಂದು ವೇಳೆ ಎಲ್ಲಾದರೂ ಅವನ ಪ್ರಯತ್ನವು ಫಲಿಸಿ ಬಿಟ್ಟರೆ ಅವನ ಸಂತಸಕ್ಕೆ ಪಾರವೇ ಇರುವುದಿಲ್ಲ. ಇನ್ನೆಲ್ಲಾದರೂ ಅವನ ಪ್ರಯತ್ನ ವಿಫಲವಾಗಿ ಬಿಟ್ಟರೆ ತನ್ನ ಅತಿದೊಡ್ಡ ಸಂಪತ್ತೇ ತನ್ನಿಂದ ಕಳೆದುಹೋದಂತೆ ಅವನು ದುಃಖಿಸತೊಡಗುತ್ತಾನೆ.

ಪ್ರವಾದಿವರ್ಯರ(ಸ) ಕಾಲದಲ್ಲಿ ಪ್ರತಿಯೊಬ್ಬರೂ ಇಸ್ಲಾಮ್ ಸ್ವೀಕರಿಸಿದೊಡನೆ ಅದರ ಪ್ರಚಾರಕರಾಗಿ ಬಿಡುತ್ತಿದ್ದರು. ಆರಂಭದಲ್ಲಿ ಪರಿಸ್ಥಿತಿಯು ತೀರಾ ಪ್ರತಿಕೂಲ ವಾಗಿತ್ತು. ಎಷ್ಟೆಂದರೆ ಬಹಿರಂಗವಾಗಿ ನಮಾಝ್ ನಿರ್ವಹಿಸುವುದಕ್ಕೂ ಅವಕಾಶವಿರಲಿಲ್ಲ. ಇಸ್ಲಾಮ್ ಸ್ವೀಕರಿಸುವುದೆಂದರೆ ಎಲ್ಲ ಬಗೆಯ ಅಪಾಯಗಳನ್ನು ಆಮಂತ್ರಿಸಿಕೊಳ್ಳು ವಂತಿತ್ತು. ಇಷ್ಟಾಗಿಯೂ ಸತ್ಯ ಧರ್ಮವನ್ನು ಸ್ವೀಕರಿಸಿದವರು ಸುಮ್ಮನಿದ್ದು ಬಿಡುತ್ತಿ ರಲಿಲ್ಲ. ಅವರು ಸತ್ಯ ಪ್ರಚಾರದ ಅಪಾಯಕಾರೀ ಕೆಲಸದಲ್ಲಿ ತಮ್ಮನ್ನು ತೊಡಗಿಸಿ ಕೊಳ್ಳುತ್ತಿದ್ದರು. ಅವರ ಸತ್ಯವಿಶ್ವಾಸ ಮತ್ತು ಧರ್ಮದ ಮೇಲಿನ ಅಚಲ ನಂಬಿಕೆಯು ಅವರನ್ನು ಸುಮ್ಮನಿರಲು ಬಿಡುತ್ತಿರಲಿಲ್ಲ.

ಸ್ವತಃ ಪ್ರವಾದಿ ಮುಹಮ್ಮದ್(ಸ) ಹಗಲಿರುಳೆನ್ನದೆ ಸತ್ಯ ಪ್ರಚಾರ ಕಾರ್ಯದಲ್ಲಿ ನಿರತರಾಗಿದ್ದರು. ಜನರು ಸತ್ಯವನ್ನು ಅಂಗೀಕರಿಸುವ ಬದಲು ಅದನ್ನು ತಿರಸ್ಕರಿಸಿ ಅದನ್ನು ಅಪಹಾಸ್ಯ ಮಾಡಲಾರಂಭಿಸಿದಾಗಲೆಲ್ಲಾ ಅವರಿಗೆ ತೀವ್ರ ಆಘಾತವಾಗುತ್ತಿತ್ತು. ಜನರು ತಮಗೆ ಹಿತಮಾಡುವ ಸತ್ಯವನ್ನೇ ತಿರಸ್ಕರಿಸುತ್ತಿರುವ ಬಗ್ಗೆ ಅವರು ಬಹಳ ಕೊರಗುತ್ತಿದ್ದರು.

**"ಓ ಪೈಗಂಬರರೇ, ಇವರು ಈ ಬೋಧನೆಯ ಮೇಲೆ ವಿಶ್ವಾಸವಿರಿಸದಿದ್ದರೆ ಪ್ರಾಯಶಃ ನೀವು ಇವರ ಹಿಂದೆ ವ್ಯಥೆಯಿಂದ ನಿಮ್ಮ ಜೀವವನ್ನೇ ಕಳೆದುಕೊಳ್ಳುವವರಿದ್ದೀರಿ."**

**(ಪವಿತ್ರ ಕುರ್‌ಆನ್, 18:6)**

ಒಬ್ಬ ಸತ್ಯವಿಶ್ವಾಸಿಯು ಸಮಾಜದ ಪ್ರತಿಯೊಬ್ಬ ಸದಸ್ಯನ ಬಗ್ಗೆ ಅತ್ಯಂತ ಹಿತಾಕಾಂಕ್ಷಿ ಪ್ರೇಮ, ವಾತ್ಸಲ್ಯ ಮತ್ತು ಕರುಣೆಯುಳ್ಳವನಾಗಿರುತ್ತಾನೆ. ದುಃಖಿತ ಜನರನ್ನು ಕಂಡಾಗ ಅವನ ಮನ ಮಿಡಿಯುತ್ತದೆ. ಅವರನ್ನು ಆ ದುಃಖದಿಂದ ಮುಕ್ತಗೊಳಿಸ ಬೇಕೆಂದು ಅವನು ಹಂಬಲಿಸತೊಡಗುತ್ತಾನೆ. ಇದು ಅವನ ಸ್ವಾಭಾವಿಕ ಪ್ರಕೃತಿ. ಹಾಗೆಯೇ ಇದು ಇಸ್ಲಾಮ್ ಅವನಿಗೆ ನೀಡುವ ಶಿಕ್ಷಣವೂ ಹೌದು.

ಜಗತ್ತಿನಲ್ಲಿ ಅಸಂಖ್ಯ ಮಾನವರು ಅಕ್ರಮ, ಅಶಾಂತಿ, ಭ್ರಷ್ಟತೆ, ಸತ್ಯಧಿಕ್ಕಾರ, ನಾಸ್ತಿಕತೆ, ಬಹುದೇವ ವಿಶ್ವಾಸ ಮುಂತಾದ ವಿಭಿನ್ನ ವಿನಾಶಕಾರೀ ಪಥಗಳಲ್ಲಿ ಮೈ ಮರೆತು ಧಾವಿಸುತ್ತಿದ್ದಾರೆ. ವಾಸ್ತವದಲ್ಲಿ ಅವರು ಹೀಗೆ ಧಾವಿಸುತ್ತಿರುವುದು ನರಕದ ಭಯಾನಕ ಶಿಕ್ಷೆಯ ಕಡೆಗೆ. ಇಷ್ಟೇ ಅಲ್ಲ, ತಮ್ಮ ದುಷ್ಟ ಚಾರಿತ್ರ್ಯದಿಂದಾಗಿ ಅವರು ಈ ಲೋಕದಲ್ಲೇ ಅಲ್ಲಾಹನ ಕೋಪಕ್ಕೆ ಗುರಿಯಾಗಿ ಅವರ ಶಿಕ್ಷೆಗೆ ಅರ್ಹರಾಗಿದ್ದಾರೆ. ಈ ದೃಶ್ಯವು ಒಬ್ಬ ಸತ್ಯವಿಶ್ವಾಸಿಯನ್ನು ತೀವ್ರ ಕಳವಳಕ್ಕೀಡು ಮಾಡುತ್ತದೆ. ಈ ಪರಿಸ್ಥಿತಿ ಅವನಿಂದ ಅವನ ಹಗಲ ನೆಮ್ಮದಿಯನ್ನೂ ರಾತ್ರಿಯ ನಿದ್ರೆಯನ್ನೂ ಕಿತ್ತುಕೊಳ್ಳುತ್ತದೆ. ಹೇಗಾದರೂ ಅವರನ್ನು ಅವರು ಕಾಣಲಿರುವ ದುರ್ಗತಿಯಿಂದ ರಕ್ಷಿಸಬೇಕೆಂದು ಅವನು ಸದಾ ಚಿಂತಾಕ್ರಾಂತನಾಗಿರು ತ್ತಾನೆ. ಒಬ್ಬೊಬ್ಬ ಮನುಷ್ಯನ ಬಳಿ ಹೋಗಿ ಅವನನ್ನು ದೇವ ಯಾತನೆಯಿಂದ ರಕ್ಷಿಸಲು ಅವನು ಪ್ರಯತ್ನಿಸುತ್ತಾನೆ. ಮನುಷ್ಯನು ಇಹ-ಪರಗಳಲ್ಲಿ ದೇವನ ಶಾಪ ಮತ್ತು ಅವರ ಘೋರ ಶಿಕ್ಷೆಗೆ ಅರ್ಹನಾಗಿ ಬಿಟ್ಟರೆ ಅವನ ಪಾಲಿಗೆ ಅದಕ್ಕಿಂತ ದೊಡ್ಡ ವಿಪತ್ತು ಮತ್ತು ವಿನಾಶ ಬೇರೆ ಇಲ್ಲ. ಹಾಗೆಯೇ ಅವನ ಪಾಲಿಗೆ ಅವನನ್ನು ಇಹ-ಪರಗಳ ವಿನಾಶದಿಂದ ರಕ್ಷಿಸುವುದಕ್ಕಿಂತ ದೊಡ್ಡ ಸೇವೆ ಮತ್ತು ಉಪಕಾರ ಬೇರೆ ಇಲ್ಲ.

ಪ್ರವಾದಿ(ಸ) ಹೇಳಿರುವರು:

"ನನ್ನ ಉಪಮೆ ಹೇಗೆಂದರೆ, ಒಬ್ಬ ವ್ಯಕ್ತಿ ಬೆಂಕಿ ಉರಿಸಿದನು. ಆ ಬೆಂಕಿಯಿಂದ ಪರಿಸರವೆಲ್ಲಾ ಉಜ್ವಲವಾಗಿ ಬೆಳಗಿತು. ಬೆಂಕಿಗೆ ಬೀಳುವ ಹಾತೆಗಳು ಮತ್ತು ಕ್ರಿಮಿಕೀಟಗಳು ಬಂದು ಬೆಂಕಿಗೆ ಬೀಳತೊಡಗಿದವು. ಅವನು ಅವುಗಳನ್ನು ತಡೆಯಲು ಪ್ರಯತ್ನಿಸುತ್ತಿದ್ದನು. ಆದರೆ ಅವನೆಷ್ಟೇ ಪ್ರಯತ್ನಿಸಿದರೂ ಅವು ಬಂದು ಬೆಂಕಿಗೆ ಧುಮುಕುತ್ತಲೇ ಇದ್ದುವು. ಅದೇ ರೀತಿ ನಾನು ನಿಮ್ಮ ಸೊಂಟ ಹಿಡಿದು ನಿಮ್ಮನ್ನು ಬೆಂಕಿಯಿಂದ ರಕ್ಷಿಸುತ್ತಿದ್ದೇನೆ. ಆದರೆ ನೀವು ಮಾತ್ರ(ನರಕದ) ಬೆಂಕಿಗೆ ಧುಮುಕುತ್ತಿದ್ದೀರಿ."

**(ಬುಖಾರಿ, ಮುಸ್ಲಿಮ್)**

ಒಬ್ಬ ಪ್ರಾಮಾಣಿಕ ಸತ್ಯಪ್ರಚಾರಕನ ಕಳಕಳಿ, ಪ್ರಯತ್ನ ಹಾಗೂ ಅಜ್ಞಾನಿಗಳ ಮೂರ್ಖತನಗಳನ್ನು ಇಲ್ಲಿ ಎಷ್ಟೊಂದು ಸೊಗಸಾಗಿ ಚಿತ್ರಿಸಲಾಗಿದೆ!

ಆದರೆ ವಿಷಯ ಕೇವಲ ಕಳಕಳಿಗೇ ಸೀಮಿತವಾಗಿಲ್ಲ. ಸತ್ಯಪ್ರಚಾರವು ಸತ್ಯ ಶ್ವಾಸಿಯ ಕರ್ತವ್ಯವೂ ಹೌದು. ಅಲ್ಲಾಹನು ಯಾವುದೇ ಜನಾಂಗಕ್ಕೆ ತನ್ನ ವತಿಯಿಂದ ವ್ಯಗ್ರಂಥವನ್ನು ದಯಪಾಲಿಸಿ ಅವರಿಗೆ ಮಾರ್ಗದರ್ಶನ ಪ್ರದಾನ ಮಾಡುವಾಗಲೆಲ್ಲಾ ವರು ಆ ದಿವ್ಯಗ್ರಂಥದ ಸಂದೇಶವನ್ನು ಜನರಿಗೆ ತಲುಪಿಸಬೇಕು ಮತ್ತು ಅದನ್ನು ುರೆಮಾಚಬಾರದು ಎಂಬ ಬಗ್ಗೆ ಅವರಿಂದ ಕರಾರನ್ನು ಪಡೆದಿರುವನು.

ಪವಿತ್ರ ಕುರ್‌ಆನ್ ಹೇಳುತ್ತದೆ:

**"ಅಲ್ಲಾಹನು ಗ್ರಂಥದವರಿಂದ, ನೀವು ಗ್ರಂಥದ ಬೋಧನೆಯನ್ನು ಜನರಿಗೆ ಪ್ರಸಾರ ಾಡಬೇಕಾದೀತು ಮತ್ತು ಅವುಗಳನ್ನು ಅಡಗಿಸ ಬಾರದು ಎಂಬ ಕರಾರನ್ನು ಪಡೆದ ಂದರ್ಭವನ್ನು ಅವರಿಗೆ ನೆನಪಿಸಿಕೊಡಿರಿ. ಆದರೆ ಅವರು ಗ್ರಂಥವನ್ನು ಕಡೆಗಣಿಸಿದರು ುತ್ತು ಅದನ್ನು ಅಲ್ಪ ಬೆಲೆಗೆ ಮಾರಿದರು. ಇವರೆಂತಹ ಕೆಟ್ಟ ವ್ಯವಹಾರ ಮಾಡುತ್ತಿದ್ದಾರೆ!"**
**(3:187)**

ಗ್ರಂಥದವರು ಅಂದರೆ ಯಹೂದಿಗಳು ಮತ್ತು ಕ್ರೈಸ್ತರು ಈ ರೀತಿ ಅಲ್ಲಾಹ ೊಂದಿಗೆ ಮಾಡಿದ ವಾಗ್ದಾನವನ್ನು ಮತ್ತು ಕರಾರನ್ನು ಮುರಿದ ವಿಷಯವನ್ನು ಪವಿತ್ರ ುರ್‌ಆನಿನಲ್ಲಿ ಪ್ರಸ್ತಾಪಿಸಿರುವುದರ ಉದ್ದೇಶ, ಮುಸ್ಲಿಮರು ಈ ಅಪರಾಧವನ್ನು ಮಾಡ ದಂತೆ ಎಚ್ಚರ ವಹಿಸಬೇಕೆಂಬುದೇ ಆಗಿದೆ. ಅವರಂತೆ ನೀವು ಅಲ್ಲಾಹನ ಗ್ರಂಥದ ಂದೇಶವನ್ನು ಸ್ವತಃ ನಿರ್ಲಕ್ಷಿಸಿ, ಅದನ್ನು ಇತರರಿಗೆ ತಲುಪಿಸಬೇಕಾದ ಹೊಣೆಗಾರಿಕೆಯಲ್ಲಿ ರೋಪ ಮಾಡಬೇಡಿರಿ ಎಂದು ಎಚ್ಚರಿಸುವುದೇ ಅದರ ಉದ್ದೇಶ.

ಪವಿತ್ರ ಕುರ್‌ಆನ್ ಮುಸ್ಲಿಮ್ ಸಮುದಾಯದ ಕರ್ತವ್ಯಗಳನ್ನು ವಿವರಿಸುತ್ತಾ ಹೀಗೆ ಹೇಳಿದೆ:

**"ನಿಮ್ಮಲ್ಲಿ ಸತ್ಕರ್ಮದ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟವೊಂದು ಇರಬೇಕಾದುದು ಅತ್ಯಗತ್ಯ. ಈ ಕಾರ್ಯವೆಸಗುವವರೇ ನಿಶ್ಚಯವಾಗಿಯೂ ಕೃತಾರ್ಥರಾಗುವರು."** **(3:104)**

ಈ ದೇವವಾಕ್ಯದಿಂದ ಎರಡು ವಿಷಯಗಳು ತಿಳಿಯುತ್ತವೆ. ಮೊದಲನೆಯದಾಗಿ, ಜನರನ್ನು ಇಸ್ಲಾಮಿನ ಕಡೆಗೆ ಆಹ್ವಾನಿಸುವುದು, ಒಳಿತನ್ನು ಆದೇಶಿಸುವುದು ಮತ್ತು ಕೆಡುಕಿನಿಂದ ಜನರನ್ನು ತಡೆಯುವುದು ಮುಸ್ಲಿಮರ ಪ್ರಧಾನ ಕರ್ತವ್ಯವಾಗಿದೆ. ಎರಡನೆ ಯದಾಗಿ ಮುಸ್ಲಿಮರ ಇಹ-ಪರ ವಿಜಯವು ಪ್ರಸ್ತುತ ಕರ್ತವ್ಯಗಳ ನಿರ್ವಹಣೆಯನ್ನೇ ಅವಲಂಬಿಸಿದೆ.

ಪ್ರವಾದಿ(ಸ) ಹೀಗೆ ಹೇಳಿದ್ದರು: "ಉಪಸ್ಥಿತನಿರುವವನು (ನನ್ನ ಸಂದೇಶವನ್ನು) ಉಪಸ್ಥಿತನಿಲ್ಲದವನಿಗೆ ತಲುಪಿಸಲಿ."

ಈ ಹದೀಸ್‌ನಿಂದ ಸ್ಪಷ್ಟವಾಗುವಂತೆ, ಯಾರಿಗೆಲ್ಲಾ ಇಸ್ಲಾಮಿನ ಸಂದೇಶ ತಲುಪಿದೆಯೋ ಅವರು ಇತರರಿಗೆ ಅದನ್ನು ತಲುಪಿಸಬೇಕಾದುದು ಅವರ ಹೊಣೆಗಾರಿಕೆ ಯಾಗಿದೆ.

ಪ್ರವಾದಿವರ್ಯರು(ಸ) ಇನ್ನೊಂದು ಸಂದರ್ಭದಲ್ಲಿ, "ನನ್ನಿಂದ ನಿಮಗೆ ತಲುಪಿರುವುದನ್ನು ನೀವು ಜನರಿಗೆ ತಲುಪಿಸಿ. ಅದು ಕೇವಲ ಒಂದು ದಿವ್ಯ ವಚನವಾಗಿದ್ದರೂ ಸರಿ" ಎಂದು ಹೇಳಿದ್ದರು. (ಬುಖಾರಿ)

ಈ ಪ್ರವಾದಿ ವಚನದಿಂದ ತಿಳಿಯುವಂತೆ, ನಾವು ಧರ್ಮಪ್ರಚಾರ ಕಾರ್ಯ ಆರಂಭಿಸಬೇಕಿದ್ದರೆ ನಾವು ದೊಡ್ಡ ವಿದ್ವಾಂಸರೇ ಆಗಿರಬೇಕಾಗಿಲ್ಲ. ಒಬ್ಬ ಮುಸ್ಲಿಮನಿಗೆ ಪವಿತ್ರ ಕುರ್‌ಆನಿನ ಒಂದು ವಾಕ್ಯ ಅಥವಾ ಇಸ್ಲಾಮಿನ ಕೇವಲ ಒಂದು ಆದೇಶವು ತಿಳಿದಿದ್ದರೂ ಅವನು ಅಷ್ಟನ್ನಾದರೂ ಇತರರಿಗೆ ತಿಳಿಯ ಪಡಿಸಲು ಶ್ರಮಿಸಬೇಕು.

ಇಸ್ಲಾಮಿನ ಪ್ರಚಾರಕ್ಕೆ ಎಷ್ಟು ಮಹತ್ವವಿದೆ ಮತ್ತು ಈ ವಿಷಯದಲ್ಲಿ ಮುಸ್ಲಿಮ್ ಸಮುದಾಯದ ಮೇಲೆ ಎಷ್ಟು ಮಹತ್ತರ ಹೊಣೆಗಾರಿಕೆ ಇದೆ ಎಂಬುದನ್ನು ತುಸು ವಿವರವಾಗಿ ತಿಳಿದುಕೊಳ್ಳುವುದೂ ಅಗತ್ಯ. ಏಕೆಂದರೆ ದುರದೃಷ್ಟವಶಾತ್ ಇಂದು ಅನೇಕ ಪ್ರಜ್ಞಾವಂತ ಮುಸ್ಲಿಮರೂ ಈ ಕುರಿತು ಅಜ್ಞರಾಗಿದ್ದಾರೆ.

ಪ್ರವಾದಿ ಮುಹಮ್ಮದ್(ಸ) ಸಂಪೂರ್ಣ ಮಾನವಕುಲಕ್ಕೆ ಸಂದೇಶವಾಹಕರಾಗಿ ಬಂದಿದ್ದರು ಎಂಬ ಬಗ್ಗೆ ಮುಸ್ಲಿಮರೆಲ್ಲರಿಗೂ ಸಹಮತವಿದೆ. ಈ ಮಾತನ್ನು ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಎಷ್ಟೊಂದು ವ್ಯಕ್ತವಾಗಿ ತಿಳಿಸಲಾಗಿದೆಯೆಂದರೆ ಈ ಕುರಿತು ಭಿನ್ನಾಭಿಪ್ರಾಯಕ್ಕೆ ಅವಕಾಶವೇ ಉಳಿದಿಲ್ಲ. ಅದೇ ರೀತಿ ಪ್ರವಾದಿ ಮುಹಮ್ಮದ್(ಸ) ಅಂತ್ಯ ಪ್ರವಾದಿ ಎಂಬುದು ಕೂಡಾ ಎಲ್ಲ ಮುಸ್ಲಿಮರ ಒಮ್ಮತದ ವಿಶ್ವಾಸವಾಗಿದೆ. ಇದು ಕೂಡಾ ಪವಿತ್ರ ಕುರ್‌ಆನ್ ಮತ್ತು ಹದೀಸ್‌ನಿಂದ ವಿವಾದಾತೀತವಾಗಿ ಶ್ರುತವಾಗಿರುವ ವಿಷಯ. ಬೇರೆ ಪದಗಳಲ್ಲಿ ಹೇಳುವುದಿದ್ದರೆ, ಪ್ರವಾದಿ ಮುಹಮ್ಮದ್‌ರ(ಸ) ಆಗಮನದ ಬಳಿಕ ಅಂತಿಮ ದಿನದವರೆಗಿನ ಎಲ್ಲ ಮಾನವರ ಇಹ-ಪರ ವಿಜಯವು ಅವರ ಮೇಲೆ ವಿಶ್ವಾಸವಿಟ್ಟು, ಅವರು ತಂದು ಕೊಟ್ಟ ಧರ್ಮವನ್ನು ಪಾಲಿಸುವುದನ್ನು ಅವಲಂಭಿಸಿದೆ.

ಆದರೂ ಪ್ರವಾದಿ ಮುಹಮ್ಮದ್‌ರಿಗೆ(ಸ) ತಮ್ಮ ಜೀವಮಾನದಲ್ಲಿ ಕೇವಲ ಅರೇಬಿಯಾದ ಜನತೆಗೆ ಮಾತ್ರ ಸತ್ಯಸಂದೇಶ ತಲುಪಿಸಲು ಸಾಧ್ಯವಾಯಿತು ಎಂಬುದೊಂದು ವಾಸ್ತವ. ಅವರು ಅರೇಬಿಯಾದ ಸುತ್ತಮುತ್ತಲಿನ ಕೆಲವು ಆಡಳಿತಗಾರರ ಬಳಿಗೆ ತಮ್ಮ ದೂತರನ್ನು ರವಾನಿಸುವ ಮತ್ತು ಪತ್ರಗಳನ್ನು ಕಳುಹಿಸುವ ಮೂಲಕ ಅವರಿಗೂ ಇಸ್ಲಾಮಿನ ಕರೆ ನೀಡಿದ್ದರು. ಆದರೆ ಈ ಕರೆಯು ಕೇವಲ ಆಡಳಿತ ಗಾರರಿಗಷ್ಟೇ ಸೀಮಿತವಾಗಿತ್ತು. ಜಗತ್ತಿನ ಇನ್ನೂ ಅನೇಕ ಆಡಳಿತಗಾರರು ಸತ್ಯದ ಆಮಂತ್ರಣದಿಂದ ವಂಚಿತರಾಗಿದ್ದರು. ಅರೇಬಿಯಾದ ಹೊರಗಿನ ಜನ ಸಾಮಾನ್ಯರಿಗೂ ಸತ್ಯದ ಈ ಧ್ವನಿ ತಲುಪಿರಲಿಲ್ಲ.

ಹಾಗಾದರೆ ಪ್ರವಾದಿವರ್ಯರ(ಸ) ನಿಧನಾನಂತರ ಈ ತನಕ ಜಗತ್ತಿಗೆ ಬಂದು ಹೋಗಿರುವ, ಈಗ ಜಗತ್ತಿನಲ್ಲಿರುವ ಮತ್ತು ಮುಂದೆ, ಯಾವುದೇ ಕ್ಷಣದಲ್ಲಿ ಸಂಭವಿಸಬಲ್ಲ ಅಂತ್ಯಕಾಲದವರೆಗೆ ಜಗತ್ತಿಗೆ ಬರುವ ಇತರ ಮಾನವರ ಇಹ-ಪರ

ಷಯಕ್ಕೆ ಏನು ಗತಿ? ಅವರಿಗೆ ಸತ್ಯದ ಸಂದೇಶ ತಲುಪಿಸಲು ಇರುವ ವ್ಯವಸ್ಥೆಯೇನು? ವಾದಿವರ್ಯರ(ಸ) ಪ್ರವಾದಿತ್ವವು ಕೇವಲ ತಮ್ಮ ಯುಗದ ಜನರಿಗೆ ಮತ್ತು ೇಬಿಯಾದ ಜನರಿಗೆ ಮಾತ್ರ ಸೀಮಿತವಾಗಿತ್ತೇ? ಅಲ್ಲಾಹನೇನು ಎಲ್ಲ ಮನುಷ್ಯರ ರ್ಗದರ್ಶಿಯಲ್ಲವೇ? ಅವನ ಅನುಗ್ರಹ ಎಲ್ಲ ಮಾನವರಿಗೆ ಅನ್ವಯವಾಗುವುದಿಲ್ಲವೇ? ಲ್ಲ ಮಾನವರಿಗಾಗಿ ಒಂದು ಸಂದೇಶವನ್ನು ಕಳುಹಿಸಿ, ಅವರೆಲ್ಲರೂ ಅದನ್ನು ೕಕರಿಸಬೇಕೆಂದೂ ಅವರೆಲ್ಲರ ಇಹ-ಪರ ವಿಮೋಚನೆಯು ಅದರ ಅನುಸರಣೆಯನ್ನೇ ವಲಂಬಿಸಿದೆಯೆಂದೂ ನಿಶ್ಚಯಿಸಿ, ಆ ಬಳಿಕ ಅದನ್ನು ಅವರಿಗೆ ತಲುಪಿಸುವಂತಹ ರ್ಪಾಡನ್ನೇ ಮಾಡದೆ ನೀವು ಇಸ್ಲಾಮನ್ನು ಏಕೆ ಸ್ವೀಕರಿಸ ಲಿಲ್ಲವೆಂದು ಜನರನ್ನು ರಕಕ್ಕೆ ದಬ್ಬಲು ಅಲ್ಲಾಹನೇನು ಅಕ್ರಮಿಯೇ?

ಈ ಪ್ರಶ್ನೆಗಳಿಗೆ ಉತ್ತರವೇನೆಂದರೆ, ಪ್ರವಾದಿ ಮುಹಮ್ಮದ್(ಸ) ಖಂಡಿತವಾಗಿಯೂ ಂತ್ಯದಿನದ ವರೆಗಿನ ಎಲ್ಲ ಮಾನವರ ಪಾಲಿಗೆ ಪ್ರವಾದಿ ಹಾಗೂ ಮಾರ್ಗದರ್ಶಿ ಗಿರುವರು. ಆದರೆ ಯಾವುದಾದರೂ ದೊಡ್ಡ ಹೊಣೆಗಾರಿಕೆಯೊಂದನ್ನು ಹೊತ್ತಿರುವ ್ಯಕ್ತಿಯು ಆ ಹೊಣೆಗಾರಿಕೆಯನ್ನು ಸಂಪೂರ್ಣವಾಗಿ, ಒಂಟಿಯಾಗಿ ತಾನೇ ನಿರ್ವಹಿಸು ದಿಲ್ಲ. ಅವರು ಈ ಕೆಲಸವನ್ನು ತನ್ನ ಸಹಾಯಕರು, ಶಿಷ್ಯರು, ಪ್ರತಿನಿಧಿಗಳು, ಂಗಡಿಗರು, ಅನುಯಾಯಿಗಳು ಮತ್ತಿತರರಿಗೆ ಹಂಚಿ ಅವರೆಲ್ಲರಿಂದಲೂ ಈ ಕೆಲಸ ಾಡಿಸುತ್ತಾರೆ. ಅವರೆಲ್ಲರೂ ಯಥಾ ಪ್ರಕಾರ ಈ ಕಾರ್ಯ ಮಾಡಿದಾಗ ಮಾತ್ರವೇ ಲಸವು ಪೂರ್ಣಗೊಳ್ಳುತ್ತದೆ. ಇದು ಜಗತ್ತಿನ ಒಂದು ಸಾಮಾನ್ಯ ನಿಯಮ. ಒಬ್ಬ ನುಷ್ಯನಿಗೆ ಅವನು ಸಾಕ್ಷಾತ್ ಅಲ್ಲಾಹನ ಸಂದೇಶವಾಹಕನಾಗಿದ್ದರೂ ಲೋಕಾಂತ್ಯದ ರೆಗಿನ ಎಲ್ಲ ಮಾನವರನ್ನು ವೈಯಕ್ತಿಕವಾಗಿ ತಾನೇ ಸಂಪರ್ಕಿಸಿ ಅವರಿಗೆ ತನ್ನ ಂದೇಶ ತಲುಪಿಸಲು ಸಾಧ್ಯವಾಗುವುದಿಲ್ಲ. ಅವನ ಅನುಯಾಯಿಗಳು ಇದನ್ನು ತಮ್ಮ ರ್ತವ್ಯವೆಂದು ವಹಿಸಿಕೊಂಡರೆ ಮಾತ್ರ ಇದು ಸಾಧ್ಯವಾದೀತು. ಪ್ರವಾದಿ ಮುಹಮ್ಮದ್(ಸ) ಮ್ಮ 23 ವರ್ಷಗಳ ಪ್ರವಾದಿತ್ವದ ಅವಧಿಯಲ್ಲಿ ಅವಿರತವಾಗಿ ಹಗಲಿರುಳೆನ್ನದೆ ರಿಶ್ರಮಿಸಿ ತಮಗೆ ಸಾಧ್ಯವಿದ್ದಷ್ಟು ಗರಿಷ್ಠ ಸಂಖ್ಯೆಯ ಜನರಿಗೆ ಸತ್ಯಧರ್ಮವನ್ನು ಥಾವತ್ತಾಗಿ ತಲುಪಿಸಿದರು. ತಲುಪಿಸಿದ್ದು ಮಾತ್ರವಲ್ಲ, ಜನರು ಆ ಸಂದೇಶವನ್ನು ರಿಯಾಗಿ ಅರ್ಥೈಸಿಕೊಂಡು ಅದನ್ನು ಪಾಲಿಸುವಂತೆ ಮಾಡಿದರು. ಈ ಕಾರ್ಯವನ್ನು ್ರವಾದಿ(ಸ) ಏಕಾಂಗಿಯಾಗಿ ಮಾಡಲಿಲ್ಲ. ಯಾರೆಲ್ಲಾ ತಮ್ಮ ಸಂದೇಶವನ್ನು ಸ್ವೀಕರಿಸಿ ರೋ ಅವರೆಲ್ಲರನ್ನೂ ಪ್ರವಾದಿ(ಸ) ಸತ್ಯಪ್ರಚಾರದ ಕಾರ್ಯದಲ್ಲಿ ತಮ್ಮ ಸಹಾಯಕರಾಗಿ ಾಡಿಕೊಳ್ಳುತ್ತಿದ್ದರು.

ಪ್ರವಾದಿವರ್ಯರು(ಸ) ಮಾಡಿದ ಇನ್ನೊಂದು ಮಹತ್ವದ ಸಾಧನೆಯೇನೆಂದರೆ, ಮ್ಮ ಮೇಲೆ ವಿಶ್ವಾಸವಿಟ್ಟವರಿಗೆಲ್ಲಾ ಅವರು 'ಮುಸ್ಲಿಮ್ ಉಮ್ಮತ್' ಎಂಬ ಹೆಸರಲ್ಲಿ ಂದು ಸುಸಂಘಟಿತ ಸಮುದಾಯ ಮತ್ತು ಸಂಘಟನೆಯ ರೂಪಕೊಟ್ಟರು. ಈ ುಸ್ಲಿಮ್ ಸಮುದಾಯದ ಪ್ರತಿಯೊಬ್ಬ ಸದಸ್ಯನೂ ಇಸ್ಲಾಮಿನ ಜೀವಂತ

ಮಾದರಿಯಾಗಿಯೂ ಅದರ ಸೇವಕನಾಗಿಯೂ ಪ್ರಾಮಾಣಿಕ ಪ್ರಚಾರಕನಾಗಿಯೂ ಮಾರ್ಪಡ
ವಂತೆ ಅವರಿಗೆಲ್ಲ ಅತ್ಯುತ್ತಮ ತರಬೇತಿಯನ್ನು ನೀಡಿದರು. ಅನಂತರ ಅಲ್ಲಾಹ
ಅಪ್ಪಣೆಯಂತೆ, ಈ ದಿವ್ಯ ಸಂದೇಶವನ್ನು ಸಕಲ ಮಾನವಕುಲಕ್ಕೆ ತಲುಪಿಸಬೇಕೆಂ
ಗುರುತರವಾದ ಹೊಣೆಗಾರಿಕೆಯನ್ನು ಈ ಸಮುದಾಯಕ್ಕೆ ವಹಿಸಿಕೊಟ್ಟರು.

ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನ ಅಪ್ಪಣೆ ಹೀಗಿದೆ:

**"ಇದೇ ರೀತಿ ನೀವು ಜಗತ್ತಿನ ಮಾನವರ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ಸಂದೇ
ವಾಹಕರು ನಿಮ್ಮ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ನಾವು ನಿಮ್ಮನ್ನು ಒಂದು ಸುಮ
ಸಮುದಾಯವನ್ನಾಗಿ ಮಾಡಿದ್ದೇವೆ."** (2:14

ಅಂದರೆ ಪ್ರವಾದಿ ಮುಹಮ್ಮದ್(ಸ) ನಿಮಗೆ ಸತ್ಯ ಸಂದೇಶವನ್ನು ಸಂಪೂರ್ಣವಾ
ತಲುಪಿಸಿ, ತಮ್ಮ ಚಾರಿತ್ರ್ಯದ ಮೂಲಕ ಇಸ್ಲಾಮಿನ ಪರಿಪೂರ್ಣ ಹಾಗೂ ಅತ್ಯುನ್ನ
ಆದರ್ಶವನ್ನು ಕಾರ್ಯತಃ ನಿಮ್ಮ ಮುಂದಿಟ್ಟಂತೆ, ಮುಸ್ಲಿಮ್ ಸಮುದಾಯವೆಂ
ನೆಲೆಯಲ್ಲಿ ಮಾತಿನಿಂದಲೂ ಕೃತಿಯಿಂದಲೂ ಜಗತ್ತಿನ ಇತರ ಜನರ ಮುಂದೆ ಇಸ್ಲಾಮಿ
ಸತ್ಯತೆಗೆ ಸಾಕ್ಷಿ ಹೇಳಬೇಕಾದುದು ಇದೀಗ ನಿಮ್ಮ ಕರ್ತವ್ಯವಾಗಿದೆ.

ಕುರ್‌ಆನಿನ 'ಅಲ್ ಹಜ್ಜ್' ಅಧ್ಯಾಯದಲ್ಲಿ ಅಲ್ಲಾಹನು ಹೇಳಿರುವನು:

**"ಸತ್ಯವಿಶ್ವಾಸಿಗಳೇ 'ಬಾಗಿರಿ' ಮತ್ತು 'ಸಾಷ್ಟಾಂಗವೆರಗಿರಿ' ಮತ್ತು ನಿಮ
ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ, ಸತ್ಕರ್ಮಗಳನ್ನೆಸಗಿರಿ- ಇದರಿಂದಲೇ ನಿಮ
ಯಶಸ್ಸು ಸಿಗುವುದೆಂದು ನಿರೀಕ್ಷಿಸಬಹುದು. ಅಲ್ಲಾಹನ ಮಾರ್ಗದಲ್ಲಿ ಹೋರಾ
ಬೇಕಾದ ರೀತಿಯಲ್ಲಿ ಹೋರಾಡಿರಿ. ಅವನು ತನ್ನ ಕಾರ್ಯಕ್ಕಾಗಿ ನಿಮ್ಮನ್ನು ಆರಿ
ಕೊಂಡಿರುತ್ತಾನೆ ಮತ್ತು ಧರ್ಮದಲ್ಲಿ ನಿಮಗೇನೂ ಸಂಕೀರ್ಣತೆಯನ್ನಿರಿಸಿಲ್ಲ. ನಿಮ
ಪಿತಾಮಹರಾದ ಇಬ್ರಾಹೀಮರ ಸಮುದಾಯದಲ್ಲಿ ಸ್ಥಿರವಾಗಿರಿ. ಅಲ್ಲಾಹನು ಮೊದಲ
ನಿಮ್ಮ ಹೆಸರನ್ನು 'ಮುಸ್ಲಿಮ್' ಎಂದಿಟ್ಟಿದ್ದನು ಮತ್ತು ಇದರಲ್ಲೂ (ಕುರ್‌ಆನಿನಲ್ಲೂ
ನಿಮಗೆ ಇದೇ ಹೆಸರಿದೆ.) ಇದು ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಗಳಾಗಲಿಕ್ಕಾ
ಮತ್ತು ನೀವು ಜನರ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ (ಆಗಿರುತ್ತದೆ.) ಆದುದರಿಂ
ನಮಾಝನ್ನು ಸಂಸ್ಥಾಪಿಸಿರಿ; ಝಕಾತ್ ಕೊಡಿರಿ ಮತ್ತು ಅಲ್ಲಾಹನೊಂದಿಗೆ ಸಂಬಂ
ಸ್ಥಾಪಿಸಿಕೊಂಡಿರಿ. ಅವನೇ ನಿಮ್ಮ ರಕ್ಷಕ ಮಿತ್ರ. ಅತ್ಯಂತ ಶ್ರೇಷ್ಠ ರಕ್ಷಕ ಮಿತ್ರನವನ
ಮತ್ತು ಅತ್ಯುತ್ತಮ ಸಹಾಯಕನವನು."** (ಪವಿತ್ರ ಕುರ್‌ಆನ್, 22:77-78

ಅಂದರೆ ಅಲ್ಲಾಹನ ಆರಾಧಕರೂ ಆಜ್ಞಾಪಾಲಕರೂ ಒಳಿತು ಮತ್ತು ಸುನೀತಿಯ
ಜೀವಂತ ಮಾದರಿಗಳೂ ಆಗಿಬಿಡುವುದು ಮಾತ್ರ ಮುಸ್ಲಿಮರ ಕರ್ತವ್ಯವಲ್ಲ. ಸ
ಧರ್ಮದ ಸಂಸ್ಥಾಪನೆಗಾಗಿ ಅಪೇಕ್ಷಿತ ರೀತಿಯಲ್ಲಿ ಹೋರಾಡಬೇಕಾದುದು ಅಲ್ಲಾಹ
ಸಂದೇಶವಾಹಕರು ತಮ್ಮ ಮಾತು ಮತ್ತು ಕೃತಿಯ ಮೂಲಕ ತಮಗೆ ಸತ್ಯಸಂದೇಶವನ
ಅರುಹಿದಂತೆ, ತಾವು ಜಗತ್ತಿನ ಮಾನವರ ಮುಂದೆ ತಮ್ಮ ಮಾತು ಮತ್ತು ಕೃತಿಗಳಿಂ
ಸತ್ಯಸಾಕ್ಷ್ಯ ನುಡಿಯಬೇಕಾದುದೂ ಅವರ ಪ್ರಮುಖ ಕರ್ತವ್ಯವಾಗಿದೆ. ಈ ಮಹಾನ

ದ್ವೇಶಕ್ಕಾಗಿಯೇ ಅವರನ್ನು ಆಯ್ಕೆ ಮಾಡಲಾಗಿದೆ ಮತ್ತು ಅವರಿಗೆ 'ಮುಸ್ಲಿಮ್' ಬ ಗೌರವಯುತ ಬಿರುದನ್ನು ದಯಪಾಲಿಸಲಾಗಿದೆ. ಅವರು ನಮ್ಮಾರ್ಝ್‌ನ ಸಂಸ್ಥಾಪನೆ, ಲ್ಲಾಹನ ಮಾರ್ಗದಲ್ಲಿ ಧನವ್ಯಯ ಮತ್ತು ಅಲ್ಲಾಹನ ಮೇಲಿನ ಭರವಸೆಯಿಂದ ಈ ಹಾನ್ ಹೊಣೆಗಾರಿಕೆಯ ಹಂತಗಳನ್ನು ದಾಟಲು ಸಹಾಯ ಪಡೆಯಬೇಕು. ಎಲ್ಲಕ್ಕಿಂತ ುಖ್ಯವಾಗಿ, ಸಾಕ್ಷಾತ್ ಅಲ್ಲಾಹನೇ ಈ ಕಾರ್ಯದಲ್ಲಿ ಅವರ ಸಹಾಯಕನೂ ೇಲ್ವಿಚಾರಕನೂ ಸಂರಕ್ಷಕನೂ ಆಗಿರುತ್ತಾನೆ.

ಈ ರೀತಿ ಪ್ರಸ್ತುತ ದಿವ್ಯವಾಕ್ಯವು ಮುಸ್ಲಿಮ್ ಸಮುದಾಯದ ಉನ್ನತ ಸ್ಥಾನ ಮತ್ತು ವರ ಮೇಲಿರುವ ಮಹಾನ್ ಹೊಣೆಗಾರಿಕೆಯನ್ನು ಸ್ಪಷ್ಟವಾಗಿ ತಿಳಿಸುತ್ತದೆ.

ಪ್ರವಾದಿ ಮುಹಮ್ಮದ್‌ರ(ಸ) ನಿಧನಾನಂತರ, ಅವರ ಸಂದೇಶವನ್ನು ಲೋಕದ ನರಿಗೆ ತಲುಪಿಸುವ ಹೊಣೆಗಾರಿಕೆ ಮುಸ್ಲಿಮ್ ಸಮುದಾಯದ ಮೇಲೆ ಬಂದು ತ್ತು. ಇಸ್ಲಾಮಿನ ಸಂದೇಶವನ್ನು ಮಾನವಕುಲಕ್ಕೆ ತಲುಪಿಸುವ ಮತ್ತು ತಮ್ಮ ಮಾತು-ತಿಗಳ ಮೂಲಕ ಇಸ್ಲಾಮಿನ ಸತ್ಯತೆಗೆ ಸಾಕ್ಷಿಗಳಾಗಬೇಕಾದ ಈ ಹೊಣೆಗಾರಿಕೆಯು ುಸ್ಲಿಮ್ ಸಮುದಾಯದ ಎಲ್ಲ ಸದಸ್ಯರ ಮೇಲೆ ಲೋಕಾಂತ್ಯದ ವರೆಗೂ ಇರುವುದು. ವರು ತಮ್ಮ ಈ ಹೊಣೆಯನ್ನು ಅರಿತು ಸತ್ಯಸಂದೇಶವನ್ನು ತಲುಪಿಸುವ ಕೆಲಸ ಾಡಿದರೆ ಅವರ ಹೊಣೆ ಈಡೇರಿದಂತಾಗುವುದು. ಇನ್ನು ಆ ಸಂದೇಶವನ್ನು ಪಡೆದ ನರು ಅದನ್ನು ಸ್ವೀಕರಿಸುವರೋ ಅಥವಾ ತಿರಸ್ಕರಿಸುವರೋ ಎಂಬುದು ಆ ಜನರಿಗೆ ಟ್ಟ ವಿಷಯ. ಅವರು ಸತ್ಯವನ್ನು ಸ್ವೀಕರಿಸಿಕೊಂಡರೆ ಪರಲೋಕದಲ್ಲಿ ಅವರು ಸ್ವರ್ಗ ್ರವೇಶಕ್ಕೆ ಅರ್ಹರೆನಿಸುವರು. ತಿರಸ್ಕರಿಸಿದರೆ ಶಾಶ್ವತ ನರಕ ಶಿಕ್ಷೆಗೆ ತಳ್ಳಲ್ಪಡುವರು. ದರೆ ಒಂದು ವೇಳೆ ಮುಸ್ಲಿಮ್ ಸಮುದಾಯವು ಸಂದೇಶ ತಲುಪಿಸುವ ತನ್ನ ೊಣೆಗಾರಿಕೆಯನ್ನೇ ಈಡೇರಿಸದಿದ್ದರೆ ಮತ್ತು ತಮ್ಮ ಕರ್ತವ್ಯಗಳನ್ನು ಅರಿತು ಕೊಂಡು ನರಿಗೆ ದಾರಿತೋರುವ ಬದಲು ಸ್ವತಃ ತಾವೇ ಬಹುದೇವಾರಾಧನೆ, ದೇವಧಿಕ್ಕಾರ, ರ್ಮಭ್ರಷ್ಟತೆ ಮತ್ತಿತರ ಅಂಧಕಾರಗಳಲ್ಲಿ ಅಲೆದಾಡುತ್ತಲಿದ್ದರೆ ಅವರು ಸ್ವತಃ ತಮ್ಮ ೋಷಗಳಿಗೆ ಹೊಣೆಗಾರರಾಗುವುದಲ್ಲದೆ ಇತರರ ಪಥಭ್ರಷ್ಟತೆ ಮತ್ತು ದುಷ್ಟತೆಗಳ ೊಣೆಯನ್ನೂ ತಾವೇ ಹೊರಬೇಕಾಗುವುದು.

ನಾವು ಈ ಮೊದಲು ಪ್ರಸ್ತಾಪಿಸಿರುವ ಪವಿತ್ರ ಕುರ್‌ಆನಿನ ವಾಕ್ಯಗಳಿಂದ ತಿಳಿದು ರುವಂತೆ, ಧರ್ಮಪ್ರಚಾರ ಮತ್ತು ಸತ್ಯಸಾಕ್ಷ್ಯದ ವಿಷಯದಲ್ಲಿ ಮೂರು ಕಕ್ಷಿಗಳಿದ್ದಾರೆ. ೊದಲನೆಯದಾಗಿ, ಸತ್ಯದ ಕರೆಕೊಟ್ಟು, ಅದರ ಸತ್ಯತೆಗೆ ಜೀವಂತ ಸಾಕ್ಷಿಯಾಗಿ, ಸತ್ಯದ ಆಧಾರದಲ್ಲಿ ಮುಸ್ಲಿಮ್ ಸಮುದಾಯವನ್ನು ರೂಪಿಸಿದ ಪ್ರವಾದಿ ುಹಮ್ಮದ್(ಸ). ಎರಡನೆಯದಾಗಿ, ಸತ್ಯಪ್ರಚಾರ ಮತ್ತು ಸತ್ಯಸಾಕ್ಷ್ಯದ ಕರ್ತವ್ಯ ರ್ವಹಿಸಲು ನಿಯುಕ್ತವಾಗಿರುವ ಮುಸ್ಲಿಮ್ ಸಮುದಾಯ. ಮೂರನೆಯದಾಗಿ, ಈ ಮುದಾಯದ ಸದಸ್ಯರಲ್ಲದ ಬಹುದೇವಾರಾಧಕರು, ನಾಸ್ತಿಕರು, ಸತ್ಯಧಿಕ್ಕಾರಿಗಳು ುಂತಾದ ಇತರ ಮಾನವರು. ಮುಸ್ಲಿಮ್ ಸಮುದಾಯವು ಮಾತು-ಕೃತಿಗಳ ಮೂಲಕ

ಸತ್ಯದ ಸಂದೇಶ ತಲುಪಿಸಬೇಕಾದುದು ಮತ್ತು ಸತ್ಯದೆಡೆಗೆ ಆಹ್ವಾನಿಸಬೇಕಾದು
ಇವರನ್ನೇ. ನಿಜವಾಗಿ ಇವರೇ ಧರ್ಮದ ಅಭಿಸಂಬೋಧಿತರಾಗಿದ್ದು, ಮುಸ್ಲಿವ
ಸಮುದಾಯದ ಮೇಲೆ-ಅವರನ್ನು ಅಭಿಸಂಬೋಧಿಸಿ, ಸತ್ಯ ತಿಳಿಸಿ, ಅವರನ್ನು ಅದರೆಡ
ಆಹ್ವಾನಿಸುವ ಕರ್ತವ್ಯ ಇದೆ. ಈ ಜನರಿಗೆಲ್ಲಾ ಸತ್ಯವನ್ನು ತಲುಪಿಸುವ ತನಕ
ಮುಸ್ಲಿಮರು ಕರ್ತವ್ಯ ಮುಕ್ತರಾಗಲಾರರು. ಜಗತ್ತಿಗೆ ಬಂದ ಎಲ್ಲ ಪ್ರವಾದಿಗ
ಬಹುದೇವಾರಾಧಕರನ್ನೂ ಸತ್ಯಧಿಕ್ಕಾರಿಗಳನ್ನೂ ಅಲ್ಲಾಹನ ಆರಾಧನೆಯೆಡೆಗೆ ಆಮಂತ್ರಿ
ದ್ದರು. ಮುಸ್ಲಿಮ್ ಸಮುದಾಯವೂ ಅದೇ ಕರ್ತವ್ಯವನ್ನು ನಿರ್ವಹಿಸಬೇಕಾಗಿದೆ.

ಈ ವಿವರವಾದ ಸ್ಪಷ್ಟೀಕರಣ ಅವಶ್ಯಕವೆನಿಸಲು ಕಾರಣವೇನೆಂದರೆ ಸಾಮಾನ್ಯವಾ
ಮುಸ್ಲಿಮರಲ್ಲಿ ಧರ್ಮಸೇವೆಯ ಆಸಕ್ತಿ ಚಿಗುರಿದಾಗಲೆಲ್ಲಾ ಅದು ಸುತ್ತಿ ಬಳಸಿ ಕೇವ
ಮುಸ್ಲಿಮರೊಳಗೆ ಸುಧಾರಣಾ ಕಾರ್ಯ ಮಾಡುವುದರಲ್ಲೇ ತೃಪ್ತರಾಗುವುದರಲ್ಲಿ ಪರ್ಯಾ
ಸಾನಗೊಳ್ಳುತ್ತದೆ. ಕೆಲವರಂತೂ ಮುಸ್ಲಿಮೇತರರನ್ನು, ಅವರು ತಮ್ಮಿಂದ ಸತ್ಯದ ಸಂದೇ
ಕೇಳಲಿಕ್ಕೂ ಅರ್ಹರಲ್ಲ ಎಂದೂ ಪರಿಗಣಿಸುವುದುಂಟು, ಕೆಲವರು ಮುಸ್ಲಿಮರ ಸುಧಾರಣೆಗಾ
ಶ್ರಮಿಸುತ್ತಲಿದ್ದರೆ ಧಾರಾಳ ಸಾಕು, ಮುಸ್ಲಿಮೇತರರಿಗೆ ಅಲ್ಲಾಹನ ಧರ್ಮದ ಕುರಿ
ತಿಳಿಸಬೇಕಾದ ಅಗತ್ಯವೇ ಇಲ್ಲ ಎಂದು ಭಾವಿಸಿದ್ದಾರೆ. ಮುಸ್ಲಿಮರೇ ಅಜ್ಞಾನ ಮತ
ಅನಾಚಾರಗಳ ಚರಮ ಸೀಮೆಯನ್ನು ತಲುಪಿರುವಾಗ ಮುಸ್ಲಿಮೇತರರ ಬಗ್ಗೆ ಚಿಂತಿಸ
ಅವಕಾಶವೇ ಎಲ್ಲಿದೆ ಎಂದು ಅವರು ವಾದಿಸುತ್ತಾರೆ.

ಮುಸ್ಲಿಮ್ ಸಮಾಜದಲ್ಲಿ ಅನೇಕ ಕೆಡುಕುಗಳು ವ್ಯಾಪಕವಾಗಿ ಹಬ್ಬಿಕೊಂಡಿ
ಎಂಬ ಬಗ್ಗೆ ಎರಡು ಮಾತಿಲ್ಲ. ಹಾಗೆಯೇ ಮುಸ್ಲಿಮ್ ಸಮಾಜದ ಸುಧಾರಣೆ ಮತ
ಸಂಸ್ಕರಣೆಗೆ ಶ್ರಮಿಸಬೇಕಾದುದು ಧಾರ್ಮಿಕ ಮತ್ತು ಸಾಮುದಾಯಿಕ ಪ್ರಜ್ಞೆಯು
ಎಲ್ಲ ಮುಸ್ಲಿಮರ ಕರ್ತವ್ಯ ಎಂಬುದು ಕೂಡಾ ನಿರ್ವಿವಾದ. ಈ ಕಾರ್ಯದ ಮಹತ್ವವನ
ಸ್ವಲ್ಪವೂ ಕಡೆಗಣಿಸುವಂತಿಲ್ಲ. ಆದರೆ ಇದರಿಂದ, ಮುಸ್ಲಿಮೇತರರ ಮಧ್ಯೆ ಇಸ್ಲಾಮಿ
ಪ್ರಚಾರ ಕಾರ್ಯ ನಡೆಸಬೇಕೆಂಬ ಕರ್ತವ್ಯದ ಮಹತ್ವವು ಕಡಿಮೆಯಾಗುವುದಿಲ್ಲ. ಅದ
ನಮ್ಮ ಮೂಲಭೂತ ಕರ್ತವ್ಯವಾಗಿದ್ದು, ಯಾವ ನೆಪವೊಡ್ಡಿಯೂ ನಾವು
ಹೊಣೆಯಿಂದ ಮುಕ್ತರಾಗುವಂತಿಲ್ಲ. ನಿಜವಾಗಿ ಮುಸ್ಲಿಮ್ ಸಮುದಾಯದ ಎ
ಸದಸ್ಯರೂ ಸತ್ಯಾಹ್ವಾನದ ಹೊಣೆ ಹೊಂದಿದ್ದು, ಇಂದು ಇಸ್ಲಾಮ್ ಏನೆಂಬುದನ
ಈ ಜನರಿಗೇ ಪರಿಚಯಿಸಬೇಕಾದ ಅಗತ್ಯ ಬಂದಿರುವುದು ಶೋಚನೀಯ. ಒಟ
ಸಮಾಜವನ್ನು ಸುಧಾರಿಸುವ ಹೊಣೆ ಹೊತ್ತವರನ್ನೇ ಸುಧಾರಿಸಬೇಕಾದ ಅಗ
ಉಂಟಾಗಿರುವುದು ಮತ್ತು ಯಾರಿಂದ ಇಡೀ ಮಾನವಕುಲಕ್ಕೆ ಒಳಿತು ಸಿಗಬೇಕಿತ್ತೋ
ಅವರಲ್ಲೇ ಎಲ್ಲ ಬಗೆಯ ಕೆಡುಕುಗಳು ಬೇರು ಬಿಟ್ಟಿರುವುದು ಖೇದಕರ. ಈ
ಪರಿಸ್ಥಿತಿಯನ್ನು ಸುಧಾರಿಸಲು ಮತ್ತು ಪರಿವರ್ತಿಸಲು ಶ್ರಮಿಸಬೇಕಾದುದು ನಮ್ಮೆಲ್ಲ
ಕರ್ತವ್ಯ. ಆದರೆ ಅದೇ ವೇಳೆ ಮುಸ್ಲಿಮೇತರರಿಗೆ ಅಲ್ಲಾಹನ ಸಂದೇಶವನ್ನು ತಲುಪಿಸು
ನಿಟ್ಟಿನಲ್ಲಿ ನಮ್ಮ ಮೇಲಿರುವ ಕರ್ತವ್ಯವನ್ನೂ ನಾವು ಕಡೆಗಣಿಸುವಂತಿಲ್ಲ. ಅಲ್ಲಾಹ

ರ್ಮ-ಮುಸ್ಲಿಮ್ ಸಮಾಜದ ವಾರೀಸು ಸೊತ್ತಲ್ಲ. ಅದು ಎಲ್ಲ ಮಾನವರಿಗೆ ಇಹ-
ವಿಮೋಚನೆಯ ಹಾದಿ ತೋರಿಸಲು ಬಂದಿರುವ ಧರ್ಮ. ಅದರ ಪರಿಚಯವಿಲ್ಲದ
ಜೀವಿಗಳಿಗೆ ಅದನ್ನು ತಲುಪಿಸಬೇಕಾದುದು ನಮ್ಮ ಕರ್ತವ್ಯ. ನಾವು ಈ ಕರ್ತವ್ಯ
ಹಿಸುವಲ್ಲಿ ಲೋಪ ತೋರಿದರೆ ನಾಳೆ ಪರಲೋಕದಲ್ಲಿ ಈ ಸತ್ಯವಂಚಿತ ಜನರು
ಮ್ಮನ್ನು ಹಿಡಿದುಕೊಂಡು, ಅಲ್ಲಾಹನೊಡನೆ "ನೋಡು ನಿನ್ನ ಈ ಅಕ್ರಮಿ ದಾಸರಿಗೆ
ಧರ್ಮದ ಬಗ್ಗೆ ತಿಳಿದಿತ್ತು. ಆದರೆ ಅವರು ನಮ್ಮ ಇಹ-ಪರ ವಿಮೋಚನೆಯ
ನವಾಗಬೇಕಾಗಿದ್ದ ಆ ಧರ್ಮವನ್ನು ನಮಗೆ ತಲುಪಿಸಲಿಲ್ಲ " ಎಂದು ಹೇಳಿ
ಮ್ಮನ್ನು ಮೂದಲಿಸಬಹುದು. ಆಗ ನಮ್ಮ ಬಳಿ ಅವರಿಗೆ ಹೇಳಲು ಯಾವ
ತ್ತರವೂ ಇರಲಾರದು. ಅನಂತರ ನಮ್ಮ ಗತಿ ಏನಾಗುವುದೋ ಅಲ್ಲಾಹನೇ ಬಲ್ಲ.

ಸಾಮಾನ್ಯವಾಗಿ ಮುಸ್ಲಿಮೇತರರಿಗೆ ನಾವು ಇಸ್ಲಾಮನ್ನು ಎಷ್ಟು ಪರಿಚಯಿಸಿದರೂ
ದನ್ನು ಅವರು ಸ್ವೀಕರಿಸಿಕೊಳ್ಳುವುದಿಲ್ಲ. ಆದ್ದರಿಂದ ಅಂತಹ ನಿರರ್ಥಕ ಪ್ರಯತ್ನವನ್ನು
ಮಾಡಬೇಕು ಎಂಬ ಪ್ರಶ್ನೆ ಕೆಲವರನ್ನು ಕಾಡುತ್ತದೆ. ನಿಜವಾಗಿ ಇದೊಂದು ಅರ್ಥ
ನ್ಯ ಹಾಗೂ ನಿರಾಧಾರ ಸಂದೇಹ. ಇತಿಹಾಸದಲ್ಲಿ ಎಲ್ಲೆಡೆ, ಯಾವಾಗಲೆಲ್ಲಾ
ಸ್ಲಾಮ್ ಧರ್ಮವನ್ನು ಯಥಾರ್ಥವಾಗಿ ಪರಿಚಯಿಸಲಾಗಿದೆಯೋ ಅಲ್ಲೆಲ್ಲಾ ಜನರು
ದನ್ನು ಸ್ವೀಕರಿಸಿದ್ದಾರೆ. ಈಗ ಲೋಕದಾದ್ಯಂತ 100 ಕೋಟಿಯಷ್ಟಿರುವ ಮುಸ್ಲಿಮ್
ನಸಂಖ್ಯೆ ಇದಕ್ಕೆ ಸಾಕ್ಷಿಯಾಗಿದೆ. ಆರಂಭದಲ್ಲಿ ಪ್ರವಾದಿ ಮುಹಮ್ಮದ್(ಸ)
ಒಂಟಿಯಾಗಿದ್ದರು. ತರುವಾಯ ಅವರ ಸತ್ಯಪ್ರಚಾರ ಚಟುವಟಿಕೆಗಳಿಂದಾಗಿ ಒಬ್ಬೊಬ್ಬ
ತೆ ಜನರು ಬಂದು ಅವರ ಮೇಲೆ ವಿಶ್ವಾಸ ಘೋಷಿಸತೊಡಗಿ ಸತ್ಯವಿಶ್ವಾಸಿಗಳ
ದು ವೃತ್ತ ನಿರ್ಮಾಣವಾಯಿತು. ಕೊನೆಗೆ 23 ವರ್ಷಗಳಲ್ಲಿ ಸಂಪೂರ್ಣ ಅರೇಬಿಯಾ
ಸ್ಲಾಮ್ ಧರ್ಮ ಸ್ವೀಕರಿಸಿತು. ಆ ಬಳಿಕ ಪ್ರವಾದಿವರ್ಯರ(ಸ) ಸಂಗಾತಿಗಳು ಮತ್ತು
ವರ ಅನುಯಾಯಿಗಳು ಜಗತ್ತಿನ ವಿವಿಧ ಭಾಗಗಳಿಗೆ ಹೋಗಿ ಇಸ್ಲಾಮಿನ
ದೇಶವನ್ನು ಪಸರಿಸಿದರು. ಸಹಾಬಿಗಳು ಅಥವಾ ಪ್ರವಾದಿ ಮುಹಮ್ಮದ್‌ರ(ಸ)
ಗಾತಿಗಳ ಕಾಲಾನಂತರ, ಅವರ ಉತ್ತರಾಧಿಕಾರಿಗಳೂ ಧರ್ಮಪ್ರಚಾರ ಕಾರ್ಯವನ್ನು
ಂದುವರಿಸಿದರು. ಭಾರತ, ಶ್ರೀಲಂಕಾ, ಮಲೇಶ್ಯಾ, ಇಂಡೋನೇಶ್ಯಾ ಮತ್ತಿತರೆಡೆ
ಲ್ಲಿ ಇಸ್ಲಾಮ್ ಹಬ್ಬಿದ್ದು ಅವರ ಕಾಲದಲ್ಲೇ.

ಈ ಆಧುನಿಕ ಕಾಲದಲ್ಲೂ ಇಸ್ಲಾಮಿನ ಪ್ರಚಾರಕ್ಕಾಗಿ ಯಾವುದೇ ವಿಶೇಷ
ಯತ್ನಗಳು ನಡೆಯುತ್ತಿಲ್ಲವಾದರೂ ಜಗತ್ತಿನಾದ್ಯಂತ ನಿತ್ಯವೂ ನೂರಾರು
ಸ್ಲಿಮೇತರರು ಇಸ್ಲಾಮ್ ಧರ್ಮವನ್ನು ಅಂಗೀಕರಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಸ್ವತಃ
ಮ್ಮ ದೇಶವೂ ಅನ್ಯ ದೇಶಗಳಿಗಿಂತ ಹಿಂದಿಲ್ಲ. ಇಲ್ಲೂ ಸತ್ಯವನ್ನು ಅರಸುವ ಅನೇಕ
ತನಗಳು ಇಸ್ಲಾಮಿನ ಸತ್ಯತೆಯನ್ನು ಮನಗಂಡು ಅದನ್ನು ಸ್ವೀಕರಿಸಿಕೊಳ್ಳುತ್ತಿವೆ.

ಇನ್ನು ಒಂದು ವೇಳೆ ನಮ್ಮ ಶತ ಪ್ರಯತ್ನಗಳ ಹೊರತಾಗಿಯೂ ಒಬ್ಬರೂ ನಾವು
ರಿಚಯಿಸಿದ ಸತ್ಯವನ್ನು ಅಂಗೀಕರಿಸದಿದ್ದರೆ ಮತ್ತು ನಾವು ಈ ಪ್ರಯತ್ನ ನಡೆಸುತ್ತಲೇ

ಈ ಲೋಕದಿಂದ ನಿರ್ಗಮಿಸುವಂತಾಗಿ ಬಿಟ್ಟರೆ ಆಗಲೂ ನಾವು ಸೋತೆವೆಂದು ಅರ್ಥವ
ನಾವು ಅಲ್ಲಾಹನ ದಾಸರು. ಅವನ ಆಜ್ಞಾಪಾಲನೆ ನಮ್ಮ ಕರ್ತವ್ಯ. ಧರ್ಮದೆ
ಜನರನ್ನು ಕರೆಯಬೇಕು ಎಂಬುದು ಅವನು ನಮಗಿತ್ತಿರುವ ಆದೇಶ. ನಾವು ಅಪೇಕ್ಷಿ
ರೀತಿಯಲ್ಲಿ ಈ ಕರ್ತವ್ಯ ನಿರ್ವಹಿಸಿದರಾಯಿತು, ನಾವು ವಿಜಯಿಗಳಾದೆವೆಂದೇ ಅಥ
ನಮ್ಮ ಶ್ರಮ ಎಂದೂ ನಿಷ್ಫಲವಾಗುವುದಿಲ್ಲ. ನಮ್ಮ ಕರ್ತವ್ಯ ಪಾಲನೆಯೇ ನಮ್ಮ
ಅಲ್ಲಾಹನ ಸಂಪ್ರೀತಿ ಮತ್ತು ಶಾಶ್ವತ ಸ್ವರ್ಗದ ಪ್ರಾಪ್ತಿಗೆ ಅರ್ಹರಾಗಿ ಮಾಡುತ್ತ
ನಿಜವಾಗಿ ನಷ್ಟವಾದುದು ಸತ್ಯವನ್ನು ಅರಿತ ಬಳಿಕವೂ ಅದನ್ನು ತಿರಸ್ಕರಿಸಿದ
ಭಾಗ್ಯರಿಗೆ ಮಾತ್ರ.

ಮುಸ್ಲಿಮರಿರಲಿ ಮುಸ್ಲಿಮೇತರರಿರಲಿ ಅವರನ್ನು ಸುಧಾರಿಸಲೇಬೇಕು ಅಥ
ಅವರನ್ನು ಸನ್ಮಾರ್ಗಕ್ಕೆ ತರಲೇಬೇಕು ಎಂಬ ಕರ್ತವ್ಯ ನಮ್ಮ ಮೇಲಿಲ್ಲ. ಅ
ನಮ್ಮಿಂದ ಸಾಧ್ಯವೂ ಅಲ್ಲ. ಮಾರ್ಗದರ್ಶನ ನೀಡುವ ಸಾಮರ್ಥ್ಯ ಇರುವು
ಅಲ್ಲಾಹನಿಗೆ ಮಾತ್ರ. ನಮ್ಮ ಕೆಲಸ ಕೇವಲ ಪ್ರಯತ್ನಿಸುವುದು ಮತ್ತು ಕರ್ತ
ನಿರ್ವಹಿಸುವುದು ಅಷ್ಟೇ. ಪವಿತ್ರ ಕುರ್‌ಆನ್ ಒಂದೆಡೆ ಹೀಗೆಂದಿದೆ:

**" ಪ್ರವಾದಿಗಳೇ, ನೀವಿಚ್ಛಿಸಿದವರಿಗೆ ಸನ್ಮಾರ್ಗ ನೀಡಲು ನಿಮ್ಮಿಂದಾಗದು. ಆ
ಅಲ್ಲಾಹನು ತಾನಿಚ್ಛಿಸಿದವರಿಗೆ ಸನ್ಮಾರ್ಗ ನೀಡುತ್ತಾನೆ." (28:5**

ಪ್ರವಾದಿ ಮುಹಮ್ಮದ್(ಸ) ಸ್ವತಃ ತಮ್ಮ ಚಿಕ್ಕಪ್ಪ ಅಬೂತಾಲಿಬ್‌ರನ್ನು ಸನ್ಮಾ
ದೆಡೆಗೆ ತರಲು ಶ್ರಮಿಸಿದರು. ಆ ವ್ಯಕ್ತಿ ಪ್ರವಾದಿ ಮುಹಮ್ಮದ್‌ರನ್ನು(ಸ) ಗಾಢವ
ಪ್ರೀತಿಸುತ್ತಿದ್ದರು ಮತ್ತು ತಮ್ಮ ಜೀವನದಾದ್ಯಂತ ಶತ್ರುಗಳ ವಿರುದ್ಧ ಪ್ರವಾದಿಯವರಿಗೆ(
ರಕ್ಷಣೆ ನೀಡುತ್ತಾ ಬಂದರು. ಆದರೆ ಕೊನೆತನಕವೂ ಅವರು ಇಸ್ಲಾಮ್ ಧರ್ಮವ
ಸ್ವೀಕರಿಸಲಿಲ್ಲ.

ಸತ್ಯಪ್ರಚಾರದ ವಿಷಯದಲ್ಲಿ ಇನ್ನೊಂದು ಗಮನಾರ್ಹ ಸಂಗತಿಯೇನೆಂದರೆ, ನ
ಪರಿಶ್ರಮದಿಂದ ಯಾರೊಬ್ಬರೂ ಸತ್ಯಸ್ವೀಕಾರ ಮಾಡದೆ ಇದ್ದರೆ ನಮಗೇನೂ ನಷ್ಟವಿ
ಬದಲಾಗಿ ಸತ್ಯ ಪ್ರಚಾರ ಮಾಡಿದ್ದಕ್ಕಾಗಿ ನಾವು ಅಲ್ಲಾಹನ ಮೆಚ್ಚುಗೆಗೆ ಪಾತ್ರರಾ
ತ್ತೇವೆ. ಅತ್ತ ನಾವು ಸತ್ಯ ಮುಟ್ಟಿಸಿದಾಗ ಯಾರಾದರೂ ಅದನ್ನು ಸ್ವೀಕರಿಸಿ ತನ್ನ
ಪರಿವರ್ತಿಸಿ ಕೊಂಡರೆ ಅವನ ಸತ್ಕರ್ಮಗಳಿಗಾಗಿ ಅವನಿಗೆ ಪುಣ್ಯ ಸಿಗುವ
ಅಂತಹದೇ ಪುಣ್ಯದ ಪಾಲು ನಮಗೂ ಸಿಗುವುದು. ಪ್ರವಾದಿ(ಸ) ಹೇಳಿರುವರು:

"ಸನ್ಮಾರ್ಗದೆಡೆಗೆ ಆಹ್ವಾನಿಸುವ ವ್ಯಕ್ತಿಗೆ, ಅವನ ಆಹ್ವಾನವನ್ನು ಅನುಸರಿಸು
ಜನರಿಗೆ ಸಿಗುವಷ್ಟೇ ಪುಣ್ಯವು ಸಿಗುವುದು. ಆದರೆ ಅನುಸರಿಸುವವರ ಪುಣ್ಯವು ಇದರಿಂದ
ಕಡಿಮೆಯಾಗದು." (ಮುಸ್ಲಿಮ

❀❀❀

# ಒಳಿತನ್ನು ಆದೇಶಿಸುವುದು ಮತ್ತು ಕೆಡುಕನ್ನು ವಿರೋಧಿಸುವುದು

ಇಸ್ಲಾಮಿನೆಡೆಗೆ ಜನರನ್ನು ಆಹ್ವಾನಿಸುವ ಮಾತ್ರಕ್ಕೆ ಮುಸ್ಲಿಮನ ಕರ್ತವ್ಯ ಆಗಿಯಲಿಲ್ಲ. ಒಳಿತುಗಳನ್ನು ಪ್ರೋತ್ಸಾಹಿಸಬೇಕಾದುದು ಮತ್ತು ಕೆಡುಕುಗಳನ್ನು ಅಳಿಸಬೇಕಾದುದು ಹಾಗೂ ಇದಕ್ಕಾಗಿ ತನ್ನೆಲ್ಲಾ ಶಕ್ತಿ, ಸಾಮರ್ಥ್ಯಗಳನ್ನು ಮತ್ತು ಪ್ರಭಾವವನ್ನು ವಿನಿಯೋಗಿಸಬೇಕಾದುದೂ ಅವನ ಕರ್ತವ್ಯವಾಗಿದೆ. ಮನೆ, ಪರಿಸರ, ಸಮಾಜ ಹೀಗೆ ಸಾಧ್ಯವಿರುವಲ್ಲೆಲ್ಲಾ ಅವನು ಒಳಿತನ್ನು ಪ್ರೋತ್ಸಾಹಿಸಿ ಬೆಳೆಸುವ ಮತ್ತು ಕೆಡುಕುಗಳನ್ನು ಹತ್ತಿಕ್ಕುವ ಕೆಲಸ ಮಾಡಬೇಕು.

ಪವಿತ್ರ ಕುರ್‌ಆನ್ ಈ ಕುರಿತು ಹೀಗೆಂದಿದೆ:

**"ಸತ್ಯವಿಶ್ವಾಸಿ ಪುರುಷರು ಮತ್ತು ಸತ್ಯವಿಶ್ವಾಸಿ ಸ್ತ್ರೀಯರು ಇವರೆಲ್ಲ ಪರಸ್ಪರ ಆಪ್ತರು; ಇವರು ಒಳಿತುಗಳ ಅಪ್ಪಣೆ ಕೊಡುತ್ತಾರೆ ಮತ್ತು ಕೆಡುಕುಗಳಿಂದ ತಡೆಯುತ್ತಾರೆ. ನಮಾಝ್ ಸಂಸ್ಥಾಪಿಸುತ್ತಾರೆ, ಝಕಾತ್ ಕೊಡುತ್ತಾರೆ ಮತ್ತು ಅಲ್ಲಾಹ್ ಹಾಗೂ ಅವನ ರಸೂಲರ ಅನುಸರಣೆ ಮಾಡುತ್ತಾರೆ." (9:71)**

ಈ ದಿವ್ಯ ವಚನವು ಸ್ಪಷ್ಟವಾಗಿ ಎರಡು ಸಂಗತಿಗಳೆಡೆಗೆ ನಮ್ಮ ಗಮನ ಸೆಳೆಯುತ್ತದೆ.

1) ನಮಾಝ್‌ನ ಸಂಸ್ಥಾಪನೆ, ಝಕಾತ್‌ನ ಪಾವತಿ. 2) ಒಳಿತನ್ನು ಆದೇಶಿಸುವುದು ಮತ್ತು ಕೆಡುಕಿನಿಂದ ತಡೆಯುವುದು. ಇದು ಮುಸ್ಲಿಮರ ಮೂಲ ವೈಶಿಷ್ಟ್ಯ ಹಾಗೂ ಕರ್ತವ್ಯವಾಗಿದೆ. ಈ ಕರ್ತವ್ಯ ಪುರುಷರಂತೆ ಸ್ತ್ರೀಯರ ಮೇಲೂ ಇದೆ.

ಪವಿತ್ರ ಕುರ್‌ಆನಿನ ತೃತೀಯ ಅಧ್ಯಾಯ 'ಆಲಿ ಇಮ್ರಾನ್'ನಲ್ಲಿ ಇದೇ ಮಾತನ್ನು ವಿಶಿಷ್ಟ ಧಾಟಿಯಲ್ಲಿ ಹೀಗೆ ಹೇಳಲಾಗಿದೆ:

**"ಮಾನವರ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಗಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶವನ್ನೀಯುತ್ತೀರಿ, ದುಷ್ಕಾರ್ಯಗಳಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಿ." (3:110)**

ಅಂದರೆ ಮುಸ್ಲಿಮ್ ಸಮುದಾಯವು ಒಟ್ಟು ಮಾನವಕುಲಕ್ಕೆ ಮಾದರಿಯಾಗಲಿಕ್ಕಾ ನೆಲೆಗೊಳಿಸಲಾಗಿರುವ ಒಂದು ಮಾದರೀ ಸಮುದಾಯ. ಅಲ್ಲಾಹನ ಮೇಲಿನ ವಿಶ್ವಾಸ ಅದರ ವಿಶೇಷತೆಯಾಗಿದ್ದು, ತನ್ನ ಈ ವಿಶ್ವಾಸದ ಪರಿಣಾಮವಾಗಿ ಅದು, ಅಲ್ಲಾಹ ಪ್ರೀತಿಸುವಂತಹ ಒಳಿತುಗಳನ್ನು ಆದೇಶಿಸುವ ಮತ್ತು ಅವನು ವಿರೋಧಿಸುವ ಕೆಡು ಗಳಿಂದ ಜನರನ್ನು ತಡೆಯುವ ಕೆಲಸ ಮಾಡುತ್ತದೆ.

ಪ್ರವಾದಿ(ಸ) ಹೇಳುತ್ತಾರೆ:

"ನಿಮ್ಮಲ್ಲಿ ಯಾರಾದರೂ ಯಾವುದಾದರೊಂದು ಕೆಡುಕನ್ನು ಕಂಡರೆ ಅದ ಕೈಯಿಂದ ತಡೆಯಲಿ. ಅಷ್ಟು ಶಕ್ತಿ ಇಲ್ಲವಾದರೆ ನಾಲಿಗೆಯಿಂದ ಅದನ್ನು ವಿರೋಧಿಸ ಅದಕ್ಕೂ ಸಾಮರ್ಥ್ಯವಿಲ್ಲದಿದ್ದರೆ ಅದನ್ನು ಮನಸ್ಸಿನಿಂದ ವಿರೋಧಿಸಲಿ. ಇ ಸತ್ಯವಿಶ್ವಾಸದ ಅತ್ಯಂತ ದುರ್ಬಲ ಅವಸ್ಥೆಯಾಗಿದೆ." (ಮುಸ್ಲಿಮ

ಸತ್ಯವಿಶ್ವಾಸ ಮತ್ತು ಕೆಡುಕು, ಅಲ್ಲಾಹನ ಮೇಲಿನ ವಿಶ್ವಾಸ ಹಾಗೂ ಅಲ್ಲಾಹ ಆಜ್ಞೋಲ್ಲಂಘನೆ ಇವು ಪರಸ್ಪರ ತೀರಾ ತದ್ವಿರುದ್ಧ ವಿಷಯಗಳಾಗಿವೆ. ಒಬ್ಬ ಸತ್ಯವಿಶ್ವಾಸಿ ಒಂದು ಕೆಡುಕನ್ನು ಕಂಡಾಗ ಅದನ್ನು ಕೈಯಿಂದಲೇ ತಡೆಯಲು ಪ್ರಯತ್ನಿಸುತ್ತಾನೆ. ಹ ತಡೆಯುವ ಶಕ್ತಿ ಇಲ್ಲದಿದ್ದರೆ ಅವನು ಮಾತಿನಿಂದ ಆ ಕೆಡುಕನ್ನು ವಿರೋಧಿಸುತ್ತಾನೆ. ಅದಕ ಧೈರ್ಯ ಸಾಲದಿದ್ದರೆ ಮನಸ್ಸಿನಲ್ಲೇ ಆ ಕೆಡುಕಿನ ಕುರಿತು ಕೊರಗುತ್ತಾನೆ ಮತ್ತು ಆ ಕೆಡು ಅಳಿಯಬೇಕೆಂದು ಹಂಬಲಿಸುತ್ತಾನೆ. ಆದರೆ ಒಬ್ಬ ವ್ಯಕ್ತಿ ಕೆಡುಕನ್ನು ಕೇವಲ ಮನಸ್ಸಿನ ವಿರೋಧಿಸುವುದಕ್ಕೆ ಮಾತ್ರ ಸೀಮಿತನಾದರೆ, ಅದು ಅವನ ಧರ್ಮವಿಶ್ವಾಸದ ದೌರ್ಬಲ್ಯವ ಸೂಚಿಸುತ್ತದೆ. ಒಬ್ಬನ ಧರ್ಮವಿಶ್ವಾಸವು ದೃಢವಾಗಿದ್ದರೆ ಅವನು ಕೆಡುಕಿನ ವಿರು ಸಕ್ರಿಯವಾಗಿ ಹೋರಾಡುತ್ತಾನೆ ಮತ್ತು ಅದನ್ನು ವಿರೋಧಿಸಿ ಮಾತನಾಡುತ್ತಾನೆ. ಇದು ಅವ ಧರ್ಮನಿಷ್ಠೆಯ ಬೇಡಿಕೆ. ಇದು ಅವನಿಗೆ ಅಲ್ಲಾಹನ ಮತ್ತು ಪ್ರವಾದಿಯ ಆದೇಶ.

ಕೆಡುಕನ್ನು ತಕ್ಕ ಸಮಯದಲ್ಲೇ ತಡೆದು ಹತ್ತಿಕ್ಕದಿದ್ದರೆ ಅದು ಶೀಘ್ರವೇ ಸಮಾ ದಾದ್ಯಂತ ಹರಡಿಕೊಳ್ಳುತ್ತದೆ. ಆಗ ಇಡೀ ಸಮಾಜವೇ ಅಲ್ಲಾಹನ ಕೋಪಕ್ಕೆ ತುತ್ತಾಗುತ್ತ ಮತ್ತು ಅವನ ಯಾತನೆಗೆ ಅರ್ಹವಾಗಿ ಬಿಡುತ್ತದೆ. ಒಂದು ಸಮಾಜದ ಮೇಲೆ ಅಲ್ಲಾಹ ಯಾತನೆ ಎರಗಿ ಬಿಟ್ಟಿತೆಂದರೆ, ಆಗ ಕೆಡುಕಿನಲ್ಲಿ ನಿರತರಾಗಿರುವ ಜನರ ಜೊತೆ ಇತರರ ಅದಕ್ಕೆ ಬಲಿಯಾಗಬೇಕಾಗುತ್ತದೆ. ಪ್ರವಾದಿ(ಸ) ಈ ಕುರಿತು ಹೀಗೆ ಹೇಳಿದ್ದಾರೆ:

"ಜನರು ಕೆಡುಕನ್ನು ಕಂಡ ಬಳಿಕವೂ ಅದನ್ನು ತಡೆಯಲು ಪ್ರಯತ್ನಿಸದಿದ್ದ ಅವರೆಲ್ಲರನ್ನೂ ಅಲ್ಲಾಹನ ಯಾತನೆಯು ಸುತ್ತುವರಿಯುವ ದಿನ ದೂರವಿಲ್ಲ."

(ತಿರ್ಮಿದಿ, ಇಬ್ನುಮಾಜ

ಇನ್ನೊಂದೆಡೆ ಪ್ರವಾದಿ(ಸ) ಹೀಗೆ ಹೇಳಿರುವುದಾಗಿ ಉಲ್ಲೇಖಿಸಲ್ಪಟ್ಟಿದೆ:

"ನನ್ನ ಪ್ರಾಣ ಯಾರ ಕೈಯಲ್ಲಿದೆಯೋ ಅವನಾಣೆ! ನೀವು ಖಂಡಿತವಾಗಿಯ ಒಳಿತನ್ನು ಆದೇಶಿಸುತ್ತಿರಬೇಕು ಮತ್ತು ಕೆಡುಕಿನಿಂದ ತಡೆಯುತ್ತಲಿರಬೇಕು. ಇಲ್ಲವಾದ ನಿಮ್ಮ ಮೇಲೆ ಅಲ್ಲಾಹನು ಯಾತನೆ ಎರಗಿಸುವ ಮತ್ತು ನೀವೆಲ್ಲರೂ ಅವನನ ಪ್ರಾರ್ಥಿಸಿದರೂ ನಿಮ್ಮ ಪ್ರಾರ್ಥನೆಯನ್ನು ಸ್ವೀಕರಿಸಲಾಗದ ದಿನ ದೂರವಿಲ್ಲ." (ತಿರ್ಮಿ

ಒಂದು ಸಮಾಜದಲ್ಲಿ ಧಾರಾಳವಾಗಿ ಅಲ್ಲಾಹನ ಆಜ್ಞೋಲ್ಲಂಘನೆ ನಡೆಯುತ್ತಿದ್ದರೂ ಯಾರೂ ಜನರನ್ನು ಅದರಿಂದ ತಡೆಯುತ್ತಿಲ್ಲವಾದರೆ ಅಂತಹ ಸಮಾಜದ ಅವಸ್ಥೆ ಏನು ಎಂಬ ಕುರಿತು ಪ್ರವಾದಿ(ಸ) ಒಮ್ಮೆ ಒಂದು ಉದಾಹರಣೆ ನೀಡಿದರು:

"ಅಲ್ಲಾಹನ ಮೇರೆಗಳ ವಿಷಯದಲ್ಲಿ ಉದಾಸೀನತೆ ತೋರುವ ಮತ್ತು ಅವುಗಳನ್ನು ಉಲ್ಲಂಘಿಸುವವರ ಉದಾಹರಣೆ ಹೀಗಿದೆ; ಕೆಲವರ ಒಂದು ಗುಂಪು ಒಟ್ಟಾಗಿ ಒಂದು ಹಡಗನ್ನು ಖರೀದಿಸಿತು. ಅನಂತರ ಅದೃಷ್ಟ ಚೀಟಿ ಹಾಕಿ ಆ ಪ್ರಕಾರ ಕೆಲವರು ಹಡಗಿನ ಮೇಲ್ಭಾಗದಲ್ಲೂ ಕೆಲವರು ಕೆಳಭಾಗದಲ್ಲೂ ಸೇರಿಕೊಂಡರು. ಕೆಳಗಿನವನೊಬ್ಬ ನೀರೆತ್ತಲು ಮೇಲ್ಭಾಗದವರ ಬಳಿ ಸುಳಿದಾಗ ಅವರಿಗೆ ಕಿರುಕುಳವಾಯಿತು. (ಅವರು ಅವನನ್ನು ತಡೆದಾಗ) ಅವನು ಕೊಡಲಿ ಎತ್ತಿ ಹಡಗಿನ ತಳಭಾಗದಲ್ಲಿ ತೂತು ಕೊರೆಯ ತೊಡಗಿದನು. ಜನರು ಅವನ ಬಳಿ ಬಂದು ನೀನಿದೇನು ಮಾಡುತ್ತಿರುವೆ ಎಂದು ಪ್ರಶ್ನಿಸಿದರು. ಅವನು, ನಾನು ಮೇಲೆ ಬರುವುದರಿಂದ ನಿಮಗೆ ತೊಂದರೆಯಾಗುತ್ತದೆ. ಆದರೆ ನನಗಂತೂ ನೀರು ಬೇಕೇ ಬೇಕಾಗಿದೆ (ಆದ್ದರಿಂದ ತೂತು ಕೊರೆಯುತ್ತಿದ್ದೇನೆ) ಎಂದನು. ಈಗ ಅವರು ಅವನ ಕೈ ಹಿಡಿದರೆ ಅವನನ್ನೂ ರಕ್ಷಿಸಬಹುದು, ತಾವೂ ಸುರಕ್ಷಿತರಾಗಬಹುದು. ಇಲ್ಲವಾದರೆ ಅವನನ್ನೂ ನಾಶಗೊಳಿಸುವರು, ತಾವೂ ನಾಶವಾಗುವರು." (ಬುಖಾರಿ)

ಎಂತಹ ಸೊಗಸಾದ ಉದಾಹರಣೆ! ಅಲ್ಲಾಹನ ಮೇರೆಗಳ ಉಲ್ಲಂಘನೆಯು ಸಮಾಜದ ಪಾಲಿಗೆ, ಹಡಗಿನ ತೂತಿನಂತೆ ಮಾರಕವಾಗುತ್ತದೆ. ತೂತಿನಿಂದ ನೀರು ನುಸುಳಿ ಹಡಗು ಮುಳುಗುವಂತೆ ಕೆಡುಕುಗಳು ವ್ಯಾಪಿಸಿದಾಗ ಸಮಾಜವೂ ನಾಶವಾಗುತ್ತದೆ. ಹಡಗಿನಲ್ಲಿ ತೂತು ಕೊರೆಯುವವನ ಕೃತ್ಯವು ಒಂದು ವೈಯಕ್ತಿಕ ಕೃತ್ಯವಾಗಿದೆ. ಆದರೆ ಅದರ ಪರಿಣಾಮ ಮಾತ್ರ ವೈಯಕ್ತಿಕವಲ್ಲ. ಅದರಿಂದ ಇಡೀ ಹಡಗು ತನ್ನೆಲ್ಲಾ ಪ್ರಯಾಣಿಕರ ಜೊತೆ ಮುಳುಗಿ ಬಿಡುವ ಸಾಧ್ಯತೆ ಇದೆ. ಇದೇ ರೀತಿ ಸಮಾಜದಲ್ಲಿ ಒಬ್ಬಿಬ್ಬರು ಅಲ್ಲಾಹನ ಮೇರೆಗಳನ್ನು ಉಲ್ಲಂಘಿಸು ವುದನ್ನು ಕಂಡು ಅದು ಅವರ ವ್ಯಕ್ತಿಗತ ಕೃತ್ಯವೆಂದು ಸುಮ್ಮನಿದ್ದರೆ ಶೀಘ್ರವೇ ಆ ಪಿಡುಗು ಇಡೀ ಸಮಾಜಕ್ಕೆ ವ್ಯಾಪಿಸಿ ಇಹ-ಪರ ವಿನಾಶಕ್ಕೆ ಕಾರಣವಾಗುತ್ತದೆ. ಅದೇ ವೇಳೆ ಸಮಾಜದಲ್ಲಿ ಒಂದು ಕೆಡುಕು ಆರಂಭವಾಗುತ್ತಿರುವಾಗಲೇ ಅದನ್ನು ತಡೆಗಟ್ಟಲು ಒಬ್ಬ ವ್ಯಕ್ತಿಯನ್ನು ಒಂದು ಕೆಡುಕಿನಿಂದ ತಡೆದಂತಾಗುತ್ತದೆ ಮಾತ್ರವಲ್ಲ ಇಡೀ ಸಮಾಜವನ್ನು ಆ ಕೆಡುಕು ಮತ್ತದರ ಪರಿಣಾಮಗಳಿಂದ ರಕ್ಷಿಸಿದಂತಾಗುತ್ತದೆ.

ನಮ್ಮ ಸಮಾಜದಲ್ಲಿ ಯಾವ ಒಳಿತು ಕೂಡಾ ಅಳಿದು ಹೋಗದಂತೆ, ಯಾವ ಕೆಡುಕು ಕೂಡಾ ಬೇರು ಬಿಡದಂತೆ ನೋಡಿಕೊಳ್ಳಬೇಕಾದುದು ಮುಸ್ಲಿಮರೆಂಬ ನೆಲೆಯಲ್ಲಿ ನಮ್ಮ ಕರ್ತವ್ಯವಾಗಿದೆ. ಸಮಾಜದಲ್ಲಿ ಯಾವುದೇ ಒಳಿತಿಗೆ ಹಾನಿಯಾಗುತ್ತಿರುವುದು ಅಥವಾ ಯಾವುದಾದರೂ ಕೆಡುಕು ತಲೆ ಎತ್ತುತ್ತಿರುವುದು ನಮ್ಮ ಗಮನಕ್ಕೆ ಬಂದರೆ ನಾವು ತಕ್ಷಣವೇ ನಮ್ಮೆಲ್ಲ ಬಲ, ಪ್ರಭಾವಗಳನ್ನು ಪ್ರಯೋಗಿಸಿ ಅದನ್ನು ಸರಿಪಡಿಸಲು ಶ್ರಮಿಸಬೇಕು. ನಾವು ಬದುಕಿರುವವರೆಗೂ ನಮ್ಮ ಸಮಾಜವು ಶರಾಬು, ಜೂಜು, ವ್ಯಭಿಚಾರ, ಬಡ್ಡಿ ಇತ್ಯಾದಿಗಳಿಂದ ಮುಕ್ತವಾಗಿರಬೇಕು. ಜಗಳ, ಅಂತಃಕಲಹಗಳು ನಡೆಯ ಬಾರದು. ಮಸೀದಿಗಳು ಜನಭರಿತವಾಗಿರಬೇಕು. ಯಾರೂ ರಮಝಾನ್ ತಿಂಗಳಿಗೆ

ಅಪಚಾರ ಮಾಡುವಂತಾಗಬಾರದು. ಯಾರೂ ಝಕಾತ್ ಮತ್ತು ಹಜ್ಜ್‌ಗಳನ್ನು ನಿರ್ಲಕ್ಷಿಸಬಾರದು. ಯಾರೂ ಇನ್ನೊಬ್ಬರ ಹಕ್ಕನ್ನು ಕಬಳಿಸಬಾರದು, ಯಾರೂ ಇನ್ನೊಬ್ಬನನ್ನು ಮರ್ದಿಸಬಾರದು, ಸಮಾಜದಲ್ಲಿ ವಚನಭ್ರಷ್ಟತೆ, ಲಂಚ, ಭ್ರಷ್ಟಾಚಾರ, ಅಶ್ಲೀಲತೆ, ವಂಚನೆ ಇತ್ಯಾದಿ ತಲೆಯೆತ್ತಬಾರದು. ಒಟ್ಟಿನಲ್ಲಿ ಯಾವ ವಿಧದಲ್ಲೂ ಅಲ್ಲಾಹನ ಆಜ್ಞೋಲ್ಲಂಘನೆ ಆಗಬಾರದು. ಒಂದು ವೇಳೆ ಅಂತಹ ಆಜ್ಞೋಲ್ಲಂಘನೆ ನಡೆಯುತ್ತಿದ್ದರೂ ನಾವು ಅದನ್ನು ತಡೆಯಲು ಗರಿಷ್ಠ ಪ್ರಯತ್ನಿಸಬೇಕು. ಈ ರೀತಿ ನಾವು ಸ್ವತಃ ನಮ್ಮನ್ನು ಮತ್ತು ಮುಸ್ಲಿಮ್ ಸಮಾಜವನ್ನು ಅಲ್ಲಾಹನ ಯಾತನೆಯಿಂದ ರಕ್ಷಿಸಬಹುದು.

ನಾವು ಬದುಕುತ್ತಿರುವುದು ಒಂದು ಮುಸ್ಲಿಮೇತರ ಸಮಾಜದಲ್ಲೆಂದಾದರೆ ಆಗಲೂ ನಮ್ಮ ನಿಲುವು ಇದುವೇ ಆಗಿರಬೇಕು. ಎಲ್ಲ-ಜಾತಿ ಧರ್ಮಗಳ ಜನರೂ ಒಳಿತೆಂದು ಪರಿಗಣಿಸುವ ಅನೇಕ ಒಳಿತುಗಳಿವೆ. ಆ ಒಳಿತುಗಳ ಸಂಸ್ಥಾಪನೆಗೆ ಮತ್ತು ಸಂರಕ್ಷಣೆಗಾಗಿ ನಾವು ಇತರ ಧರ್ಮೀಯರ ತುಂಬು ಸಹಕಾರ ಪಡೆಯಬೇಕು. ಹಾಗೆಯೇ ಎಲ್ಲ ಮತೀಯರು ಕೆಡುಕು ಎಂದು ಪರಿಗಣಿಸುವ ಹಲವಾರು ಕೆಡುಕುಗಳಿವೆ. ಇತರರ ಜೊತೆ ಸೇರಿ ನಾವು ಆ ಕೆಡುಕುಗಳ ನಿರ್ಮೂಲನಕ್ಕೆ ಪ್ರಯತ್ನಿಸಬೇಕು. ಪವಿತ್ರ ಕುರ್‌ಆನ್ ನಮಗೆ ಈ ರೀತಿ ಆದೇಶಿಸಿದೆ:

**"ಪುಣ್ಯ ಹಾಗೂ ದೇವಭಯದ ಕಾರ್ಯಗಳಲ್ಲಿ ಎಲ್ಲರ ಜೊತೆ ಸಹಕರಿಸಿರಿ ಮತ್ತು ಪಾಪ ಹಾಗೂ ಅತಿರೇಕ ಕಾರ್ಯಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿರಿ."** **(5:2)**

ನಾವು ಒಳಿತಿನ ಸಂಸ್ಥಾಪನೆ ಮತ್ತು ಕೆಡುಕಿನ ನಿರ್ಮೂಲನದ ಕೆಲಸ ಮಾಡಬೇಕಿದ್ದರೆ ಸ್ವತಃ ನಮ್ಮ ಬದುಕು ಒಳಿತುಗಳಿಂದ ಸಂಪನ್ನವಾಗಿದ್ದು ಕೆಡುಕುಗಳಿಂದ ಮುಕ್ತವಾಗಿರಬೇಕಾದುದು ಅತ್ಯಗತ್ಯ. ನಾವು ಇತರರಿಗೆ ಬೋಧನೆ ನೀಡುತ್ತಾ ಸ್ವತಃ ನಮ್ಮನ್ನು ಮರೆತುಬಿಟ್ಟರೆ, ಇತರರನ್ನು ಕೆಡುಕಿನಿಂದ ತಡೆಯುವಾಗ ಸ್ವತಃ ಕೆಡುಕಿನಲ್ಲಿ ನಿರತರಾಗಿದ್ದರೆ ಮತ್ತು ಇತರರಿಗೆ ಒಳಿತನ್ನು ಆದೇಶಿಸುವಾಗ ಸ್ವತಃ ಒಳಿತಿನಿಂದ ದೂರವಿದ್ದರೆ ನಮ್ಮ ಬೋಧನೆಗಳು ಅರ್ಥಶೂನ್ಯವೆನಿಸುತ್ತದೆ. ಅಲ್ಲದೆ ಈ ವಿರೋಧಾಭಾಸವು ಪರಲೋಕದಲ್ಲಿ ನಾವು ಅಲ್ಲಾಹನ ಉಗ್ರಶಿಕ್ಷೆಗೆ ತುತ್ತಾಗಲು ಕಾರಣವಾಗುತ್ತದೆ. ಈ ವಿಷಯದಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ಒಂದು ವಚನವು ನಮ್ಮ ಕಣ್ತೆರೆಸಲು ಪರ್ಯಾಪ್ತವಾಗಬೇಕು.

"ಪುನರುತ್ಥಾನ ದಿನ ಒಬ್ಬ ವ್ಯಕ್ತಿಯನ್ನು ತಂದು ನರಕಾಗ್ನಿಗೆ ಹಾಕಲಾಗುವುದು. ಅವನ ಕರುಳು ಹೊರಗೆ ಬಂದಿರುವುದು. ಅವನು ಸಂಕಟದಿಂದ, ಕತ್ತೆಯು ಗಾಣದ ಸುತ್ತ ತಿರುಗುವಂತೆ ನರಕದ ಸುತ್ತಲೂ ಓಡುತ್ತಿರುವನು. ಆಗ ನರಕವಾಸಿಗಳು "ಇದೇನು ನಿನ್ನ ಅವಸ್ಥೆ?" ನೀನು ನಮಗೆ ಒಳಿತಿನ ಆದೇಶ ನೀಡುತ್ತಿರಲಿಲ್ಲವೇ?ಕೆಡುಕಿನಿಂದ ನಮ್ಮನ್ನು ತಡೆಯುತ್ತಿರಲಿಲ್ಲವೇ?"ಎಂದು ಪ್ರಶ್ನಿಸುವರು. ಆಗ "ಹೌದು. ನಾನು ನಿಮಗೆ ಒಳಿತನ್ನು ಆದೇಶಿಸುತ್ತಲಿದ್ದೆ. ಆದರೆ ಸ್ವತಃ ಒಳಿತು ಮಾಡುತ್ತಿರಲಿಲ್ಲ. ನಾನು ನಿಮ್ಮನ್ನು ಕೆಡುಕಿನಿಂದ ತಡೆಯುತ್ತಲಿದ್ದೆ. ಆದರೆ ಸ್ವತಃ ಕೆಡುಕನ್ನು ಮಾಡುತ್ತಿದ್ದೆ"ಎಂದು ಉತ್ತರಿಸುವನು." (ಬುಖಾರಿ, ಮುಸ್ಲಿಮ್)

❁❁❁

# ಧರ್ಮದ ಉತ್ಥಾನಕ್ಕಾಗಿ ಹೋರಾಟ

**ಈ** ಹಿಂದಿನ ಅಧ್ಯಾಯಗಳ ಅಧ್ಯಯನದಿಂದ ಸ್ಪಷ್ಟವಾಗಿ ತಿಳಿಯುವಂತೆ, ಒಬ್ಬ ಸತ್ಯವಿಶ್ವಾಸಿಯು ಸ್ವತಃ ತಾನು ಅಲ್ಲಾಹನ ಆಜ್ಞಾಪಾಲನೆ ಮಾಡುವುದರ ಜೊತೆಗೆ ತನ್ನ ಮನೆಯವರೂ ಅಲ್ಲಾಹನ ಆದೇಶಗಳನ್ನು ಪಾಲಿಸಬೇಕು, ತನ್ನ ದೇಶವಾಸಿಗಳೆಲ್ಲರೂ ಅಲ್ಲಾಹನ ನಿಷ್ಠ ದಾಸರಾಗಿ ಮಾರ್ಪಡಬೇಕು, ತನ್ನ ಸಮಾಜ ಎಲ್ಲ ಕೆಡುಕುಗಳಿಂದ ಮುಕ್ತವಾಗಬೇಕು ಮತ್ತು ದೇಶವು ಸಕಲ ಒಳಿತುಗಳ ನೆಲೆವೀಡಾಗಬೇಕು ಎಂದು ಹಂಬಲಿಸುತ್ತಲಿರುತ್ತಾನೆ.

ಆದರೆ ಅವನು ವಾಸಿಸುತ್ತಿರುವ ದೇಶದಲ್ಲಿ ಅಲ್ಲಾಹನ ಧರ್ಮವು ಸಂಪೂರ್ಣವಾಗಿ ಸ್ಥಾಪನೆಗೊಂಡು, ಅಲ್ಲಾಹನ ಮೆಚ್ಚುಗೆಯ ನಿಯಮವು ಅನುಷ್ಠಾನದಲ್ಲಿದ್ದು, ಗೃಹ ಜೀವನದಿಂದಾರಂಭಿಸಿ ರಾಜಕೀಯ, ಆರ್ಥಿಕ ಮತ್ತು ಅಂತಾರಾಷ್ಟ್ರೀಯ ಕ್ಷೇತ್ರಗಳ ವರೆಗೆ ಎಲ್ಲೆಡೆ ಅಲ್ಲಾಹನ ಕಾನೂನು ಜಾರಿಯಲ್ಲಿದ್ದು ಇಡೀ ರಾಷ್ಟ್ರವೇ ಅಲ್ಲಾಹನ ಧರ್ಮದ ಬುನಾದಿಯಲ್ಲಿ ರಚಿತವಾದಾಗ ಮಾತ್ರ ಈ ಹಂಬಲವು ಈಡೇರಲು ಸಾಧ್ಯ.

ದೇಶದಲ್ಲಿ ಅಲ್ಲಾಹನ ಹೊರತು ಇತರ ಕಾನೂನು ಜಾರಿಯಲ್ಲಿರುವಾಗ ಆ ಕಾನೂನುಗಳು ಅಲ್ಲಾಹನ ಆಜ್ಞಾಪಾಲನೆಯನ್ನು ಅನುಮತಿಸುವುದು ಒಂದು ತೀರಾ ಸಣ್ಣ ಕ್ಷೇತ್ರದಲ್ಲಿ ಮಾತ್ರ. ಆ ಕ್ಷೇತ್ರ ಕೂಡಾ ದಿನಗಳೆದಂತೆ ಸಂಕುಚಿತಗೊಳ್ಳುತ್ತಾ ಸಾಗುತ್ತದೆ. ಆ ಪರಿಮಿತ ಕ್ಷೇತ್ರವನ್ನು ಬಿಟ್ಟರೆ ಉಳಿದೆಲ್ಲಾ ಮನುಷ್ಯನು ಆ ದೇವೇತರ ಕಾನೂನುಗಳನ್ನು ಪಾಲಿಸಲು ನಿರ್ಬಂಧಿತನಾಗುತ್ತಾನೆ. ತನ್ನ ಮನೆಯವರನ್ನು ಅಲ್ಲಾಹನ ಮೆಚ್ಚುಗೆಗೆ ಅನುಗುಣವಾಗಿ ಬೆಳೆಸಲು ಅವನಿಗೆ ಸಾಧ್ಯವಾಗುವುದಿಲ್ಲ. ಏಕೆಂದರೆ ಅವನು ವಾಸಿಸುವ ಪರಿಸರವೆಲ್ಲಾ ದೇವಧಿಕ್ಕಾರ, ನಾಸ್ತಿಕತೆ, ಬಹುದೇವಾರಾಧನೆ, ಅನೈತಿಕತೆ ಮತ್ತಿತರ ಕೆಡುಕು ಗಳಿಂದ ತುಂಬಿಕೊಂಡಿರುವುದು. ತಾನು ವಾಸಿಸುವ ಪ್ರದೇಶವನ್ನು ಕೆಡುಕುಗಳಿಂದ ಮುಕ್ತ ವಾಗಿಡಲು ಅವನು ಸಮರ್ಥನಾಗಲಾರನು. ಏಕೆಂದರೆ ಆ ಕೆಡುಕುಗಳಿಗೆಲ್ಲಾ ದೇಶದ ಕಾನೂನಿನ ಅಂಗೀಕಾರ ಪ್ರಾಪ್ತವಿರುವುದು. ಮದ್ಯಪಾನವನ್ನು ತಡೆಗಟ್ಟಲು ಅವನಿಂದಾಗದು. ಏಕೆಂದರೆ ಮದ್ಯಪಾನ ಮತ್ತು ಮದ್ಯ ವ್ಯಾಪಾರವು ಸರಕಾರದ ಆಶ್ರಯದಲ್ಲೇ ನಡೆಯುತ್ತಿರುವುದು. ಬಡ್ಡಿಯ ವ್ಯವಹಾರದಿಂದ ದೂರವಿರಲು ಅವನಿಂದಾಗದು, ಏಕೆಂದರೆ ದೇಶದ ನ್ಯಾಯಾಲಯ ಗಳ ಸಹಿತ ಎಲ್ಲ ಘಟಕಗಳು ಅದರ ಬೆಂಬಲಕ್ಕಿರುವುವು ಹಾಗೂ ವ್ಯವಸ್ಥೆಯ ನರನಾಡಿಗಳಲ್ಲಿ

ಬಡ್ಡಿಯೇ ಹರಿಯುತ್ತಿರುವುದು. ನಗ್ನತೆ ಅಶ್ಲೀಲತೆಗಳನ್ನು ನಿವಾರಿಸಲು ಅವನು ಶಕ್ತನಾಗಲಾರನು. ಏಕೆಂದರೆ ಪ್ರಾಬಲ್ಯವಿರುವ ವ್ಯವಸ್ಥೆಯು ಸಿನಿಮಾ, ರೇಡಿಯೋ, ಟಿ.ವಿ. ಪುಸ್ತಕ, ನಿಯತಕಾಲಿಕ ಮತ್ತಿತರ ಎಲ್ಲ ಮಾಧ್ಯಮಗಳ ಮೂಲಕ ಅವುಗಳನ್ನು ಹರಡುತ್ತಿರುವುದು. ಸ್ತ್ರೀ-ಪುರುಷರ ಅನಿಯಂತ್ರಿತ ಬೆರೆಯುವಿಕೆ, ವ್ಯಭಿಚಾರ ಮತ್ತು ಅದರ ಪ್ರೇರಕಗಳನ್ನು ತಡೆಗಟ್ಟಲು ಅವನಿಂದಾಗದು. ಏಕೆಂದರೆ ಅಂತಹ ವ್ಯವಸ್ಥೆಯಲ್ಲಿ ಈ ಕೆಡುಕುಗಳನ್ನೆಲ್ಲಾ ನಾಗರಿಕತೆಯ ಅಭಿಮಾನಾರ್ಹ ಅಂಶಗಳೆಂದು ಪರಿಗಣಿಸಲಾಗುವುದು. ತನ್ನ ಮಕ್ಕಳಿಗೆ ಸರಿಯಾದ ಧಾರ್ಮಿಕ ವಿದ್ಯಾಭ್ಯಾಸ ಕೊಡಿಸಲು ಅವನಿಗೆ ಸಾಧ್ಯವಾಗಲಾರದು. ಏಕೆಂದರೆ ದೇಶದಲ್ಲಿ ಜಾರಿಯಲ್ಲಿರುವ ಶಿಕ್ಷಣ ವ್ಯವಸ್ಥೆಯು ಸಂಪೂರ್ಣವಾಗಿ ಧರ್ಮವಿರಹಿತವಾಗಿರುವುದು ಮತ್ತು ಶೈಕ್ಷಣಿಕ ಪರಿಸರ ಹಾಗೂ ವಿಧಾನ ಕೂಡಾ ನೈತಿಕತೆಯಿಂದ ಮುಕ್ತವಾಗಿರುವುದು. ಅವನಿಗೆ ತನ್ನ ಯಾವುದೇ ವ್ಯವಹಾರದಲ್ಲಿ ದೇವನಿಯಮದ ಪ್ರಕಾರ ತೀರ್ಪು ಪಡೆಯಲು ಸಾಧ್ಯವಾಗಲಾರದು, ಏಕೆಂದರೆ ಅವನ ಸಮಾಜದ ನ್ಯಾಯಾಲಯಗಳು ದೇವನಿಯಮದ ಬದಲು ಇನ್ನಾವುದೋ ನಿಯಮಗಳ ಆಧಾರದಲ್ಲಿ ತೀರ್ಪುಗಳನ್ನು ಕೊಡುವುವು. ಅವನ ಧಾರ್ಮಿಕ ವ್ಯಕ್ತಿ ನಿಯಮ ಕೂಡಾ ಸದಾ ಅಪಾಯದಲ್ಲಿರುವುದು. ದೇಶದ ಸರಕಾರವು ತಾನಿಚ್ಛಿಸಿದಾಗ ಅದನ್ನು ಅನೂರ್ಜಿತಗೊಳಿಸಿ ಸಮಾನ ಪೌರ ನಿಯಮಗಳನ್ನು ಜಾರಿಗೊಳಿಸುವ ಹಕ್ಕು ಹೊಂದಿರುವುದು. ಆಗ ಆ ಸತ್ಯವಿಶ್ವಾಸಿಯು ವಿವಾಹ, ವಾರೀಸು ಹಕ್ಕು ಮುಂತಾದ ವಿಷಯ ಗಳಲ್ಲಿ ಕೂಡಾ ಇಸ್ಲಾಮಿನ ಕಾನೂನನ್ನು ಅನುಸರಿಸಲು ಅಸಮರ್ಥನಾಗುವನು.

ದೇವೇತರ ವ್ಯವಸ್ಥೆಯು ಒಂದು ಸಮಾಜದಲ್ಲಿ ಪ್ರಾಬಲ್ಯ ಪಡೆದಾಗ ಉಂಟಾಗುವ ಪರಿಣಾಮಗಳಿವು! ಜಗತ್ತಿನಲ್ಲಿ ಯಾವುದೇ ಧರ್ಮ ಅನ್ಯರ ಅಧೀನದಲ್ಲಿದ್ದು ಬೆಳೆಯಲಾರದು. ಹಾಗಿರುವಾಗ ಇಸ್ಲಾಮಿನಂತಹ, ಜೀವನದ ಎಲ್ಲ ಕ್ಷೇತ್ರಗಳ ಬಗ್ಗೆ ತನ್ನದೇ ಆದ ನಿಯಮ ನಿರ್ದೇಶನಗಳನ್ನು ನೀಡುವ ಧರ್ಮ ಇಂತಹ ವಾತಾವರಣದಲ್ಲಿ ಮುಕ್ತವಾಗಿ ಬೆಳೆಯಲು ಹೇಗೆ ಸಾಧ್ಯ? ಇಂತಹ ವಾತಾವರಣದಲ್ಲಿ ಈ ಧರ್ಮವನ್ನು ಪೂರ್ಣವಾಗಿ ಅನುಸರಿಸಲು ಯಾರಿಗಾದರೂ ಹೇಗೆ ಸಾಧ್ಯವಾದೀತು? ನಿಜವಾಗಿ ತಾನು ಅಲ್ಲಾಹನ ದಾಸ ಎಂಬ ಮಾತಿನಲ್ಲಿ ನಿಷ್ಠೆ ಹೊಂದಿರುವ ವ್ಯಕ್ತಿ ಇಂತಹ ಪರಿಸ್ಥಿತಿಯಲ್ಲಿ ದೇವಾಜ್ಞೆಗಳ ಸೀಮಿತ ಪಾಲನೆಯಲ್ಲೇ ತೃಪ್ತಿಪಡುವ ಬದಲು ಅಲ್ಲಾಹನ ಭೂಮಿಯಲ್ಲಿ ಅಲ್ಲಾಹನ ಇಚ್ಛೆ ಹಾಗೂ ಅವನ ನಿಯಮಗಳ ಹೊರತು ಬೇರಾವ ಇಚ್ಛೆಗಳೂ ನಡೆಯಬಾರದು ಮತ್ತು ಸಂಪೂರ್ಣವಾಗಿ ಅವನ ನಿಯಮಗಳೇ ಜಾರಿಯಾಗಬೇಕು ಎಂದು ಮನಸಾರೆ ಅಪೇಕ್ಷಿಸುತ್ತಲಿರುತ್ತಾನೆ. ಮಾತ್ರವಲ್ಲದೆ ಆ ನಿಟ್ಟಿನಲ್ಲಿ ಜೀವನ ಪರ್ಯಂತ ಹೆಣಗಾಡುತ್ತಲೂ ಇರುತ್ತಾನೆ.

ಸರ್ವಜ್ಞನೂ ಪರಮ ಯುಕ್ತಿವಂತನೂ ಆಗಿರುವ ಅಲ್ಲಾಹನು ತನ್ನ ಧರ್ಮವು ಪ್ರಾಬಲ್ಯದ ಸ್ಥಿತಿಯಲ್ಲಿರುವುದಕ್ಕಾಗಿಯೇ ಕಳುಹಿಸಲ್ಪಟ್ಟಿದೆ ಮತ್ತು ತನ್ನ ಸಂದೇಶವಾಹಕರು ಜಗತ್ತಿನಲ್ಲಿ ಜಗದೊಡೆಯನ ವ್ಯವಸ್ಥೆಯನ್ನು ಸ್ಥಾಪಿಸುವುದಕ್ಕಾಗಿಯೇ ಕಳುಹಿಸಲ್ಪಟ್ಟಿದ್ದಾರೆ ಎಂದು ಸ್ವತಃ ತಾನೇ ಸ್ಪಷ್ಟವಾಗಿ ಹೇಳಿರುವನು.

"ಸನ್ಮಾರ್ಗ ಮತ್ತು ಸತ್ಯಧರ್ಮದೊಂದಿಗೆ ತನ್ನ ಸಂದೇಶವಾಹಕನನ್ನು ಕಳುಹಿಸಿರು ನು ಅವನೇ. ಅದನ್ನು ಸಂಪೂರ್ಣ ಧರ್ಮದ ಮೇಲೆ ಪ್ರಬಲಗೊಳಿಸಲಿಕ್ಕಾಗಿ. ಬಹುದೇವ ್ವಾಸಿಗಳಿಗೆ ಇದು ಎಷ್ಟೇ ಅಪ್ರಿಯವಾದರೂ ಸರಿಯೆ."

(ಪವಿತ್ರ ಕುರ್‌ಆನ್, 61:9, 9:33)

ಪವಿತ್ರ ಕುರ್‌ಆನಿನಲ್ಲಿ ಈ ವಾಕ್ಯವು ಪ್ರಸ್ತುತ 'ಅತ್ತೌಬಾ' ಮತ್ತು 'ಅಸ್ಸಫ್ಫ್' ್ಯಾಯಗಳಲ್ಲಿ ಮಾತ್ರವಲ್ಲದೆ ಕೆಲವು ಭಿನ್ನ ಪದಗಳೊಂದಿಗೆ 'ಅಲ್ ಫತಹ್' ಎಂಬ ್ಯಾಯದಲ್ಲೂ ಪುನರಾವರ್ತಿಸಲ್ಪಟ್ಟಿದೆ. ಈ ರೀತಿ ಒತ್ತು ಕೊಟ್ಟು ಮೂರು ಬಾರಿ ರಾವರ್ತಿಸಲ್ಪಟ್ಟಿರುವ ಈ ವಾಕ್ಯವು ಅಲ್ಲಾಹನು ತನ್ನ ಧರ್ಮವನ್ನು ಅಂದರೆ ತನ್ನ ್ಮುಗೆಯ ಜೀವನ ವ್ಯವಸ್ಥೆಯನ್ನು ಜಗತ್ತಿಗೆ ಪರಿಚಯಿಸಿರುವುದರ ಉದ್ದೇಶವನ್ನು ್ಪವೂ ಸಂಶಯಕ್ಕೆ ಎಡೆಯಿಲ್ಲದಂತೆ ಬಹಳ ವ್ಯಕ್ತವಾಗಿ ತಿಳಿಯಪಡಿಸುತ್ತದೆ. ಹೀಗಿರುತ್ತಾ ವಿಶ್ವಾಸಿಗಳು ಸತ್ಯಧರ್ಮಕ್ಕೆ ಅಪೇಕ್ಷಿತ ಪ್ರಾಬಲ್ಯವನ್ನು ಗಳಿಸಿಕೊಡುವುದಕ್ಕಾಗಿ ತಮ್ಮ ್ವಸ್ವವನ್ನೂ ತೊಡಗಿಸಬೇಕಾದುದು ಅವರ ಧರ್ಮ ಮತ್ತು ವಿಶ್ವಾಸದ ಅನಿವಾರ್ಯ ಡಿಕೆ ಎನಿಸುತ್ತದೆ. ಈ ರೀತಿ ತಮ್ಮ ಸರ್ವಸ್ವವನ್ನೂ ಈ ಮಾರ್ಗದಲ್ಲಿ ಅರ್ಪಿಸುವುದು ರು ಸತ್ಯವಿಶ್ವಾಸಿಗಳೆಂಬುದಕ್ಕೆ ಪುರಾವೆಯಾಗುವುದರ ಜೊತೆಗೆ ಅವರು ಈ ಮೂಲಕ ಲೋಕದಲ್ಲಿ ಅಲ್ಲಾಹನ ಸಹಾಯವನ್ನೂ ಪರಲೋಕದಲ್ಲಿ ಶಾಶ್ವತ ಸ್ವರ್ಗವನ್ನೂ ಯಲು ಅರ್ಹರೆನಿಸಿಕೊಳ್ಳುತ್ತಾರೆ.

ಪ್ರಸ್ತುತ ದಿವ್ಯವಾಕ್ಯದಲ್ಲಿ, ಅಲ್ಲಾಹನು ತನ್ನ ಧರ್ಮವನ್ನು ಸಂದೇಶವಾಹಕರ ಮೂಲಕ ಕಳುಹಿಸಿರುವುದು, ಆ ಧರ್ಮವನ್ನು ಇತರೆಲ್ಲ ಧರ್ಮ ಮತ್ತು ವ್ಯವಸ್ಥೆ ದುರು ಸ್ಥಾಪಿಸುವುದಕ್ಕಾಗಿ ಎಂದು ತಿಳಿಸಲಾಗಿದೆ. ಒಬ್ಬ ದೇವ ಸಂದೇಶವಾಹಕನ ಮೂಲಕ ಅಲ್ಲಾಹನ ಧರ್ಮ ಸ್ಥಾಪಿಸಲ್ಪಡಲು ಅಥವಾ ಅದು ಪ್ರಾಬಲ್ಯಕ್ಕೆ ಬರಲು ುವ ಒಂದೇ ಮಾರ್ಗ ಏನೆಂದರೆ, ಆ ಸಂದೇಶವಾಹಕನ ಮತ್ತು ಆತನು ಪರಿಚಯಿಸು ುವ ಧರ್ಮದ ಅನುಯಾಯಿಗಳೆಲ್ಲರೂ ಆ ನಿಟ್ಟಿನಲ್ಲಿ ಸಕ್ರಿಯವಾಗಿ ಹೋರಾಡ ಕು. ಏಕೆಂದರೆ ಯಾವುದೇ ಪ್ರವಾದಿ, ಏಕಾಂಗಿಯಾಗಿ ಮಿಥ್ಯ ವ್ಯವಸ್ಥೆಯನ್ನು ್ಯಾಗೆದು ಸತ್ಯವ್ಯವಸ್ಥೆಯನ್ನು ಅನುಷ್ಠಾನಕ್ಕೆ ತರಲು ಸಾಧ್ಯವಾಗದು. ಆ ಶ್ರಮದಲ್ಲಿ ್ಲ ಸತ್ಯವಿಶ್ವಾಸಿಗಳು ಸಂಪೂರ್ಣ ಪಾಲ್ಗೊಳ್ಳುವುದು ಅತ್ಯಗತ್ಯ. ಆದ್ದರಿಂದಲೇ ್ಸಫ್ಫ್' ಅಧ್ಯಾಯದಲ್ಲಿ ಪ್ರಸ್ತುತ ವಾಕ್ಯದ ಬೆನ್ನಿಗೇ ಹೀಗೆ ಹೇಳಲಾಗಿದೆ:

"ಸತ್ಯವಿಶ್ವಾಸಿಗಳೇ, ನಿಮ್ಮನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವಂತಹ ಂದು ವ್ಯಾಪಾರವನ್ನು ನಾನು ನಿಮಗೆ ತೋರಿಸಿ ಕೊಡಲೇ? ಅಲ್ಲಾಹ್ ಮತ್ತು ಅವನ ಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ ಮತ್ತು ನಿಮ್ಮ ಸಂಪತ್ತುಗಳಿಂದಲೂ ವಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ, ್ಮ ಪಾಲಿಗೆ ಇದೇ ಉತ್ತಮವಾಗಿದೆ. ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ತ್ತು ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವಂತಹ ಸ್ವರ್ಗೋದ್ಯಾನಗಳಲ್ಲಿ

**ನಿಮ್ಮನ್ನು ಪ್ರವೇಶಗೊಳಿಸುವನು. ಸದಾ ನೆಲೆಸುವಂತಹ ಸ್ವರ್ಗಗಳಲ್ಲಿ ಅತ್ಯುತ್ತ ಭವನಗಳನ್ನು ನಿಮಗೆ ದಯಪಾಲಿಸುವನು. ಇದೇ ಮಹಾ ಯಶಸ್ಸು ಮತ್ತು ನಿ ಬಯಸುವಂತಹ ಇನ್ನೊಂದು ವಸ್ತುವನ್ನೂ ನಿಮಗೆ ಕೊಡುವನು. ಅಂದರೆ, ಅಲ್ಲಾ ಕಡೆಯಿಂದ ಸಹಾಯ ಮತ್ತು ಶೀಘ್ರದಲ್ಲೇ ಸಿಗಲಿರುವ ವಿಜಯ. ಸಂದೇಶವಾಹಕ ಸತ್ಯವಿಶ್ವಾಸಿಗಳಿಗೆ ಇದರ ಸುವಾರ್ತೆ ನೀಡಿರಿ."** **(61:10-**

ಈ ವಾಕ್ಯದ ಆರಂಭದಲ್ಲೇ 'ಸತ್ಯವಿಶ್ವಾಸಿಗಳೇ!' ಎಂದು ಅಭಿಸಂಬೋಧಿಸಲಾ ವುದರಿಂದ ಇದು ಕೇವಲ ಪ್ರವಾದಿ ಮುಹಮ್ಮದ್‌ರ(ಸ) ಕಾಲದ ಸಹಾಬಿಗಳಿಗೆ ಮ ಅನ್ವಯಿಸದೆ, ಎಲ್ಲ ಕಾಲದ ಸತ್ಯವಿಶ್ವಾಸಿಗಳಿಗೂ ಸಮಾನವಾಗಿ ಅನ್ವಹಿಸುತ್ತದೆಂಬು ವ್ಯಕ್ತವಾಗುತ್ತದೆ. ಎರಡನೆಯದಾಗಿ ಒಬ್ಬ ಮನುಷ್ಯನು ನರಕಯಾತನೆಯಿಂದ ರ ಪಡೆಯಬೇಕಿದ್ದರೆ, ಅವನ ಪಾಪಗಳೆಲ್ಲ ಕ್ಷಮಿಸಲ್ಪಡಬೇಕಿದ್ದರೆ ಮತ್ತು ಅವನು ಸ್ವ ಸುಖಕ್ಕೆ ಅರ್ಹರೆನಿಸಿಕೊಳ್ಳಬೇಕಿದ್ದರೆ, ಅವನು ಅಲ್ಲಾಹ್ ಮತ್ತು ಆತನ ಸಂದೇಶವಾಹ ಮೇಲೆ ಪ್ರಾಮಾಣಿಕವಾಗಿ ವಿಶ್ವಾಸವಿಡುವುದರ ಜೊತೆಗೆ, ಅಲ್ಲಾಹನ ಸಂಪ್ರೀತಿಗಾಗಿ ಮ ಅವನ ಧರ್ಮದ ಸಂಸ್ಥಾಪನಾರ್ಥವಾಗಿ ತನ್ನೆಲ್ಲಾ ಶಕ್ತಿ ಸಾಮರ್ಥ್ಯಗಳನ್ನೂ ಸಂಪತ್ತನ ಕೊನೆಗೆ ಜೀವವನ್ನೂ ತೊಡಗಿಸಿ ಹೋರಾಡಬೇಕಾದುದು ಅನಿವಾರ್ಯ ಎಂಬುದು ಸ್ ವಾಗುತ್ತದೆ. ಮೂರನೆಯದಾಗಿ, ಮೇಲ್ನೋಟಕ್ಕೆ ಹೋರಾಟದ ಈ ಮಾರ್ಗವು ಎ ಕಠಿಣವಾಗಿ ಕಾಣಿಸಿದರೂ ಪರಿಣಾಮದ ದೃಷ್ಟಿಯಿಂದ ಇದೊಂದು ಅತ್ಯಂತ ಲಾಭ ವ್ಯವಹಾರವಾಗಿದೆ. ನಿಜವಾದ ವಿಜಯ ಈ ಮಾರ್ಗದಲ್ಲೇ ಅಡಗಿದೆ. ಈ ಲೋ ಸಂಪತ್-ಸೌಕರ್ಯಗಳೆಲ್ಲಾ ತೀರಾ ತಾತ್ಕಾಲಿಕವಾಗಿದ್ದು ಹೇಗೂ ಕೊನೆಗೊಮ್ಮೆ ಮನುಷ್ಯ ಅವೆಲ್ಲವನ್ನು ಅನಿವಾರ್ಯವಾಗಿ ತೊರೆಯಲೇಬೇಕಾಗುತ್ತದೆ. ಹಾಗಿರುವಾಗ ಮನುಷ್ಯ ಇವೆಲ್ಲವನ್ನು ಅಲ್ಲಾಹನ ಧರ್ಮದ ಉತ್ಥಾನಕ್ಕಾಗಿ ತೊಡಗಿಸಿ ಬಿಡುವ ಮೂ ಪರಲೋಕದ ಶಾಶ್ವತ ಸುಖವನ್ನು ಖರೀದಿಸಿಕೊಳ್ಳುವುದೇ ಜಾಣತನ ಎಂಬ ಅಂಶ ಕೂ ಈ ವಾಕ್ಯದಿಂದ ತಿಳಿದು ಬರುತ್ತದೆ. ನಾಲ್ಕನೆಯದಾಗಿ, ಪರಲೋಕದ ಶಾಶ್ವತ ವಿಜ ಮಾತ್ರವಲ್ಲದೆ ಸಾಕ್ಷಾತ್ ಈ ಲೋಕದಲ್ಲೂ ವಿಜಯ ಸಾಧಿಸಲು ಇರುವ ಮಾ ಇದೊಂದೇ. ಜಗತ್ತಿನಲ್ಲಿ ಅಲ್ಲಾಹನ ಧರ್ಮವನ್ನು ಸ್ಥಾಪಿಸಲಿಕ್ಕಾಗಿ ತಮ್ಮ ಸರ್ವಸ್ವವನ ತೊಡಗಿಸಿ ಶ್ರಮಿಸುವ ಜನರು ಇಹದಲ್ಲೇ ಅಲ್ಲಾಹನ ನೆರವು ಮತ್ತು ಅನುಗ್ರಹ ಪಾತ್ರರಾಗುತ್ತಾರೆ ಮತ್ತು ವಿಜಯಿಗಳಾಗುತ್ತಾರೆ ಎಂಬ ಅಂಶವೂ ಇದರಲ್ಲಿ ಅಡಕವಾಗಿ

'ಅತ್ತೌಬಃ' ಅಧ್ಯಾಯದಲ್ಲಿ ಅಲ್ಲಾಹನು ಹೀಗೆ ಹೇಳಿರುವನು:

**"ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿಡುವವರು ತಮಗೆ ತನ ಧನಗಳೊಂದಿಗೆ ಹೋರಾಟ ನಡೆಸುವುದರಿಂದ ವಿನಾಯಿತಿ ನೀಡಬೇಕೆಂದು ಎಂದೆಂದಿಗ ವಿನಂತಿಸಲಾರರು. ಅಲ್ಲಾಹನು ಧರ್ಮನಿಷ್ಠರನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ಅಲ್ಲಾ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿರಿಸದವರು ಮಾತ್ರ ಇಂತಹ ನಿವೇದನೆಗಳನ ಮಾಡುತ್ತಾರೆ. ಅವರ ಹೃದಯಗಳಲ್ಲಿ ಸಂಶಯವಿದೆ. ಅವರು ತಮ್ಮ ಸಂಶಯಗಳಲ್ ತಲ್ಲಣಗೊಳ್ಳುತ್ತಿದ್ದಾರೆ."** **(9:44-4**

ಪವಿತ್ರ ಕುರ್‌ಆನಿನ ಈ ವಾಕ್ಯದಿಂದ ತಿಳಿಯುವಂತೆ, ಮನುಷ್ಯನು ಧರ್ಮ ಸಂಸ್ಥಾಪ ರ್ಥವಾಗಿ ನಡೆಯುವ ಹೋರಾಟದಲ್ಲಿ ಪಾಲ್ಗೊಳ್ಳುತ್ತಾನೋ ಇಲ್ಲವೋ ಎಂಬುದು ನ ವಿಶ್ವಾಸವನ್ನು ಪರೀಕ್ಷಿಸುವ ಮಾನದಂಡವಾಗಿದೆ. ಒಬ್ಬ ಪ್ರಾಮಾಣಿಕ ಸತ್ಯ ಶ್ವಾಸಿಯು ಎಂದೆಂದೂ ಈ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲು ಶ್ರಮಿಸಲಾರ. ನಂತೂ ತನ್ನೆಲ್ಲವನ್ನೂ ಈ ಮಾರ್ಗದಲ್ಲಿ ಉತ್ಸಾಹದಿಂದ ಅರ್ಪಿಸಿ ಬಿಡುತ್ತಾನೆ. ಇದಕ್ಕೆ ರುದ್ಧವಾಗಿ ಧರ್ಮದ ಉತ್ಥಾನಕ್ಕಾಗಿ ನಡೆಯುವ ಹೋರಾಟದಲ್ಲಿ ತನ್ನ ಪಾಲನ್ನು ಸಬಯಸದ ವ್ಯಕ್ತಿ ವಿವಿಧ ನೆಪಗಳನ್ನು ಒಡ್ಡಿ ಈ ಹೊಣೆಗಾರಿಕೆಯಿಂದ ದೂರ ುತ್ತಾನೆ. ಅಲ್ಲಾಹನು ಇಂತಹ ಪಲಾಯನವಾದಿಗಳ ಕುರಿತು, ಅವರಿಗೆ ಅಲ್ಲಾಹನ ತ್ತು ಪರಲೋಕದ ಮೇಲೆ ವಿಶ್ವಾಸವೇ ಇಲ್ಲ ಎಂದು ಸಾರಿರುವನು. ಇಂತಹ ವ್ಯಕ್ತಿಗಳು ವು ಮುಸ್ಲಿಮರೆಂದು ವಾದಿಸುತ್ತಿದ್ದರೆ ಆ ವಾದ ಸುಳ್ಳು.

ಈ ಸಂದರ್ಭದಲ್ಲಿ, ಮುಸ್ಲಿಮೇತರರೇ ಬಹುಸಂಖ್ಯಾತರಾಗಿರುವಂತಹ ಭಾರತ ಲ್ಲಿದ್ದು ಕೊಂಡು ನಾವು ಧರ್ಮದ ಉತ್ಥಾನಕ್ಕಾಗಿ ಶ್ರಮಿಸಲು ಹೇಗೆ ಸಾಧ್ಯ ಎಂದು ರಾದರೂ ಪ್ರಶ್ನಿಸಬಹುದು. ಅದಕ್ಕೆ ಉತ್ತರವೇನೆಂದರೆ, ಸ್ವತಃ ಪ್ರವಾದಿ ಮುಹಮ್ಮದ್(ಸ) ರು ಧರ್ಮೋತ್ಥಾನದ ಕಾರ್ಯವನ್ನು ಒಂದು ಅಪ್ಪಟ ಮುಸ್ಲಿಮೇತರರ ಸಮಾಜದಲ್ಲೇ ಂಭಿಸಿದ್ದರು. ಅವರ ಪರಿಶ್ರಮದಿಂದ ಅವರಿಗೆ ಅನುಯಾಯಿಗಳು ದೊರೆತರು. ಘಟಿತ ಶ್ರಮದ ಮತ್ತು ಹೋರಾಟದ ಫಲವಾಗಿ ಕ್ರಮೇಣ ಇಸ್ಲಾಮ್ ಧರ್ಮವು ಬ್ಬುತ್ತಲೇ ಹೋಗಿ ಕೊನೆಗೊಂದು ದಿನ ಅರೇಬಿಯದಾದ್ಯಂತ ಇಸ್ಲಾಮ್ ಹಬ್ಬಿತು. ು ಅರೇಬಿಯಾದ ಪ್ರಬಲ ಧರ್ಮವಾಗಿ ಬಿಟ್ಟಿತು.

ಭಾರತ ಒಂದು ಪ್ರಜಾಸತ್ತಾತ್ಮಕ ರಾಷ್ಟ್ರ. ರಾಜಾಳ್ವಿಕೆ ಅಥವಾ ಸರ್ವಾಧಿಕಾರ ಇರುವ ಷ್ಟ್ರಗಳಿಗೆ ಹೋಲಿಸಿದರೆ ಪ್ರಜಾಸತ್ತಾತ್ಮಕ ದೇಶಗಳಲ್ಲಿ ವ್ಯವಸ್ಥೆಯನ್ನು ಪರಿವರ್ತಿಸುವ ರ್ಯ ಹೆಚ್ಚು ಸುಲಭ. ಅಲ್ಲಿ ದೇಶದ ಜನತೆ ಯಾವ ವ್ಯವಸ್ಥೆಯನ್ನು ಬಯಸುತ್ತಾರೋ ವ್ಯವಸ್ಥೆಯೇ ಸ್ಥಾಪಿತವಾಗುತ್ತದೆ. ಇಲ್ಲಿಯ ಬಹುಸಂಖ್ಯೆಯು ಇಸ್ಲಾಮ್ ತಮ್ಮೆಲ್ಲ ಮಸ್ಯೆಗಳ ಪರಿಹಾರವಾಗಿದೆ ಎಂಬುದನ್ನು ಅರಿತೊಡನೆ ಇಸ್ಲಾಮ್ ಧರ್ಮವೇ ಈ ಶದ ವ್ಯವಸ್ಥೆಯಾಗಿ ಮಾರ್ಪಡಬಹುದು. ಆದರೆ ಆ ಹಂತವನ್ನು ತಲುಪಬೇಕಿದ್ದರೆ ವು ಈ ಹಿಂದೆ ಹೇಳಿರುವ ಕೆಲಸಗಳನ್ನೆಲ್ಲಾ ಮಾಡಬೇಕಾದುದು ಅನಿವಾರ್ಯ. ಸ್ಲಾಮಿನ ಪ್ರತಿಪಾದಕರು ನಿಜಕ್ಕೂ ಇಸ್ಲಾಮಿನ ಜೀವಂತ ಮಾದರಿಗಳಾಗಿಬಿಟ್ಟರೆ, ಸ್ಲಿಮ್ ಸಮುದಾಯವು ಅಪೇಕ್ಷಿತ ಮಟ್ಟದಲ್ಲಿ ಸುಧಾರಣೆಗೊಂಡರೆ, ಇಸ್ಲಾಮನ್ನು ತರರಿಗೆ ಪರಿಚಯಿಸುವ ಕಾರ್ಯವು ವ್ಯಾಪಕವಾಗಿ ನಡೆದರೆ ಮತ್ತು ಇಸ್ಲಾಮಿನ ಕುರಿತು ರಲ್ಲಿರುವ ತಪ್ಪು ತಿಳುವಳಿಕೆಗಳನ್ನು ನಿವಾರಿಸಲಾದರೆ ಖಂಡಿತವಾಗಿಯೂ ಈ ದೇಶದಲ್ಲಿ ಸ್ಲಾಮ್ ಸ್ಥಾಪಿತವಾಗುವ ದಿನ ದೂರವಿಲ್ಲ. ಇನ್‌ಶಾ ಅಲ್ಲಾಹ್.

❁❁❁

# ಸುಸಂಘಟಿತ ಸಾತ್ವಿಕ ಸಮಾಜದ ಅಗ

ಜಗತ್ತಿನಲ್ಲಿ ಯಾವುದೇ ಜನಾಂಗ ಅಥವಾ ಗುಂಪಿನ ಸ್ವತಂತ್ರ ಉಳಿವು ಮ
ಗೌರವಸ್ಥ ಅಸ್ತಿತ್ವವು ಆ ಜನಾಂಗದಲ್ಲಿರುವ ಐಕ್ಯವನ್ನು ಅವಲಂಬಿಸಿದೆ. ಐಕ
ಸ್ವತಃ ಒಂದು ದೊಡ್ಡ ಶಕ್ತಿಯಾಗಿದೆ. ಆಂತರಿಕ ಏಕತೆಯುಳ್ಳ ಮತ್ತು ಸಂಘ
ವಾಗಿರುವ ಜನಾಂಗವೊಂದನ್ನು ಅಡಿಯಾಳಾಗಿ ಮಾಡುವುದು ಅಥವಾ ಅದನ್ನು ಅ
ಹಾಕುವುದು ಸುಲಭ ಸಾಧ್ಯವಲ್ಲ. ಯಾವುದೇ ಸಮುದಾಯವಿರಲಿ, ಅದರ ಬಳಿ ಐ
ತ್ಯಾಗಶೀಲತೆ ಮತ್ತು ಹೋರಾಟದ ಹುರುಪು ಇರುವ ತನಕ ಅದು ಉನ್ನತವಾ
ಗೌರವದ ಸ್ಥಾನದಲ್ಲಿರುತ್ತದೆ. ಅಂತಹ ಜನಾಂಗದ ಮೇಲೆ ಕೈ ಹಾಕಲು ಹೊರ
ವವರು ಕೈ ಸುಟ್ಟುಕೊಳ್ಳುತ್ತಾರೆ.

ಇದಕ್ಕೆ ವ್ಯತಿರಿಕ್ತವಾಗಿ ವಿಚ್ಛಿದ್ರತೆಯ ವ್ಯಾಧಿಗೆ ತುತ್ತಾದ ಜನಾಂಗಗಳು ಪ್ರ
ಸಾಧಿಸುವುದಿಲ್ಲ. ಅದರ ಶಕ್ತಿ-ಸಾಮರ್ಥ್ಯಗಳೆಲ್ಲಾ ಒಳ ಜಗಳಗಳಲ್ಲೇ ವ್ಯರ್ಥವಾಗುತ್ತ
ಅಂತಹ ಜನಾಂಗಕ್ಕೆ ಜಗತ್ತಿನಲ್ಲಿ ಯಾವುದೇ ಘನತೆ ಅಥವಾ ವರ್ಚಸ್ಸು ಉಳಿ
ವುದಿಲ್ಲ. ಇತರ ಜನಾಂಗಗಳು ಧೈರ್ಯವಾಗಿ ಅದರ ಮೇಲೆ ಮುಗಿಬೀಳುತ್ತವೆ. ಅ
ಅದರ ಪ್ರಾಬಲ್ಯವನ್ನು ಮಾತ್ರವಲ್ಲದೆ ಸ್ವಾತಂತ್ರ್ಯವನ್ನು ಕೂಡಾ ನಾಶ ಮಾಡಿಬಿಡುತ್ತ
ಆ ಜನಾಂಗಕ್ಕೆ ತನ್ನ ಸ್ವಂತಿಕೆಯನ್ನಾಗಲೀ, ತನ್ನ ಧರ್ಮ, ನಂಬಿಕೆ, ಭಾ
ಸಂಸ್ಕೃತಿಯನ್ನಾಗಲೀ ರಕ್ಷಿಸಲು ಸಾಧ್ಯವಾಗುವುದಿಲ್ಲ. ಅದು ಎಲ್ಲವನ್ನೂ ಕಳಕೊಂ
ಅನ್ಯರ ದಾಸ್ಯಕ್ಕೆ ತುತ್ತಾಗಿ ಅಪರಿಚಿತತೆ ಮತ್ತು ಅಪಮಾನದ ಬದುಕು ಸಾಗಿಸ
ನಿರ್ಬಂಧಿತವಾಗುತ್ತದೆ.

ಇದು ಕೇವಲ ಸಾಮಾನ್ಯ ಜನಾಂಗಗಳಿಗೂ ಅನ್ವಯಿಸುವ ವಿಷಯ. ಇನ
ಒಂದು ಜನಾಂಗದ ಬಳಿ ತನ್ನದೇ ಆದ ಒಂದು ಸಿದ್ಧಾಂತವನ್ನು ಸಂಸ್ಥಾಪಿಸುವ ಗ
ಇದೆ ಎಂದಾದರೆ ಅಂತಹ ಜನಾಂಗದ ಪಾಲಿಗೆ ಆಂತರಿಕ ಐಕ್ಯವು ಇತರರಿಗಿ
ಹಲವಾರು ಪಟ್ಟು ಅಧಿಕ ಮಹತ್ವ ಹೊಂದಿರುತ್ತದೆ. ಐಕ್ಯವಿಲ್ಲದೆ ಜಗತ್ತಿನಲ್ಲಿ ಯಾ
ಗುರಿಯನ್ನೂ ಸಾಧಿಸಲಾಗುವುದಿಲ್ಲ. ಸಂಘಟನೆಯಿಲ್ಲದೆ ಯಾವುದೇ ವ್ಯವಸ್ಥೆಯ
ಸಂಸ್ಥಾಪಿಸುವಂತಿಲ್ಲ. ಸಂಘಟಿತ ಶಕ್ತಿಯಿಲ್ಲದೆ ಲೋಕದಲ್ಲಿ ಯಾವುದೇ ಕ್ರಾಂ
ತರುವುದನ್ನು ಊಹಿಸಲಿಕ್ಕೂ ಸಾಧ್ಯವಿಲ್ಲ.

ಮುಸ್ಲಿಮ್ ಸಮುದಾಯ, ಇಂದು ಜಗತ್ತಿನ ಎಲ್ಲ ಭಾಗಗಳಲ್ಲೂ ಹರಡಿ ಕೊಂಡಿರುವ ಸಮುದಾಯ. ಈ ಸಮುದಾಯದಲ್ಲಿ ಪ್ರಬಲವಾದ ಆಂತರಿಕ ಏಕತೆ ಇಲ್ಲದಿದ್ದರೆ ಇದನ್ನು ಅನ್ಯರ ಪ್ರಾಬಲ್ಯದಡಿಯಲ್ಲಿ ಅವರ ಜೊತೆ ಲೀನವಾಗದಂತೆ ರಕ್ಷಿಸಲು ಸಾಧ್ಯವಿಲ್ಲ. ಮುಸ್ಲಿಮ್ ಸಮುದಾಯವು ಇಸ್ಲಾಮಿನ ಉನ್ನತ ಆದರ್ಶಗಳನ್ನು ರಕ್ಷಿಸಬೇಕಾದ ಸಮುದಾಯ. ಈ ಆದರ್ಶಗಳು ಪ್ರಾಬಲ್ಯ ಪಡೆಯಬೇಕಿದ್ದರೆ ಮುಸ್ಲಿಮ್ ಸಮುದಾಯವು ಆಂತರಿಕ ಬಿಕ್ಕಟ್ಟುಗಳಿಂದ ಸಂಪೂರ್ಣ ಮುಕ್ತವಾಗಿರಬೇಕಾದುದು ಅತ್ಯಗತ್ಯ. ಒಳ ಜಗಳಗಳು ಈ ಸಮುದಾಯವನ್ನು ಹಲವು ಮಾರಕ ಅಪಾಯಗಳಿಗೆ ಗುರಿಯಾಗಿಸಬಲ್ಲವು. ಸಮುದಾಯವು ಅಸಂಘಟಿತವಾಗಿರುವಾಗ ಕೇವಲ ಕೆಲವೇ ದುಷ್ಟ ಶಕ್ತಿಗಳು ಕೂಡಾ ಷಡ್ಯಂತ್ರಗಳನ್ನು ಹೂಡಿ ಸಮುದಾಯವನ್ನು ದಾರಿಗೆಡಿಸಿ ಬಿಡಲು ಅವಕಾಶವಿರುತ್ತದೆ. ಈ ಸಮುದಾಯದ ಇತಿಹಾಸ ನೋಡಿದರೆ, ಇದು ವಿಚ್ಛಿದ್ರವಾಗಿದ್ದ ಕಾಲಾವಧಿಗಳಲ್ಲೇ ಅನೇಕ ದಾರಿಗೆಡಿಸುವ ಶಕ್ತಿಗಳು ತಲೆ ಎತ್ತಿ ಹಲವು ವಿನಾಶಗಳಿಗೆ ಕಾರಣವಾಗಿರುವುದನ್ನು ಕಾಣಬಹುದು. ಇಂತಹ ಶಕ್ತಿಗಳು ಮತ್ತು ಅವರಿಂದುಂಟಾಗುವ ಪ್ರಕ್ಷೋಭೆಗಳು ಸಮುದಾಯವನ್ನು ಮತ್ತಷ್ಟು ವಿಚ್ಛಿದ್ರತೆಗೆ ತಳ್ಳುತ್ತವೆ. ಮುಸ್ಲಿಮ್ ಸಮುದಾಯವು ವಿಶ್ವದಲ್ಲಿ ಇಸ್ಲಾಮೀ ವ್ಯವಸ್ಥೆಯನ್ನು ಸಂಸ್ಥಾಪಿಸುವ ತನ್ನ ಗುರಿಯನ್ನು ಸಾಧಿಸಬೇಕಿದ್ದರೆ ಅದು ಸಂಘಟಿತವಾಗಬೇಕಾದುದು ಮತ್ತು ತನ್ನ ಗುರಿ ಸಾಧನೆಗಾಗಿ ಸಂಘಟಿತ ಹೋರಾಟ ನಡೆಸಬೇಕಾದುದು ಅನಿವಾರ್ಯ. ವಿಚ್ಛಿದ್ರತೆಯ ಅವಸ್ಥೆಯಲ್ಲಿ ಅದು ತನ್ನ ಈ ಗುರಿಯ ಹತ್ತಿರ ಸುಳಿಯಲಿಕ್ಕೂ ಸಮರ್ಥವಾಗದು.

ಇದೇ ಕಾರಣದಿಂದ, ಇಸ್ಲಾಮ್ ಧರ್ಮವು ಮುಸ್ಲಿಮರ ಪರಸ್ಪರ ಏಕತೆ ಮತ್ತು ಸಂಘಟನೆಗೆ ಅಸಾಮಾನ್ಯ ಮಹತ್ವ ಕೊಟ್ಟಿದೆ. ಅದು ಮುಸ್ಲಿಮರಿಗೆ ಸಂಘಟಿತವಾಗಿರ ಬೇಕೆಂದು ಹಾಗೂ ಎಲ್ಲ ಬಗೆಯ ವಿಚ್ಛಿದ್ರತೆಗಳಿಂದ ದೂರವಿರಬೇಕೆಂದು ಆದೇಶಿಸು ವುದರ ಜೊತೆಗೇ, ಮುಸ್ಲಿಮ್ ಐಕ್ಯ ಹಾಗೂ ಸಂಘಟನೆಯ ಬುನಾದಿಗಳೇನು, ಅದರ ಉದ್ದೇಶವೇನು ಮತ್ತು ಅದನ್ನು ಸದಾ ಉಳಿಸಿಕೊಳ್ಳುವ ಬಗೆ ಹೇಗೆ ಎಂಬುದನ್ನೂ ವಿವರವಾಗಿ ತಿಳಿಸಿದೆ. ಪವಿತ್ರ ಕುರ್‌ಆನಿನ ಈ ಆದೇಶವನ್ನು ಗಮನಿಸಿರಿ:

"ನೀವೆಲ್ಲರೂ ಒಟ್ಟಾಗಿ ಅಲ್ಲಾಹನ ಪಾಶವನ್ನು ಬಿಗಿ ಹಿಡಿಯಿರಿ ಮತ್ತು ಭಿನ್ನ ಭಿನ್ನರಾಗದಿರಿ. ನಿಮ್ಮ ಮೇಲೆ ಅಲ್ಲಾಹನು ಮಾಡಿದ್ದ ಆ ಉಪಕಾರವನ್ನು ಸ್ಮರಿಸಿರಿ. ನೀವು ಪರಸ್ಪರ ಶತ್ರುಗಳಾಗಿದ್ದಿರಿ. ಅವನು ನಿಮ್ಮ ಹೃದಯಗಳನ್ನು ಜೋಡಿಸಿದನು ಮತ್ತು ಅವನ ಅನುಗ್ರಹದಿಂದ ನೀವು ಸಹೋದರರಾದಿರಿ. ನೀವು ಅಗ್ನಿ ತುಂಬಿದ ಒಂದು ಕುಂಡದ ಅಂಚಿನಲ್ಲಿ ನಿಂತಿದ್ದಿರಿ. ಅಲ್ಲಾಹನು ನಿಮ್ಮನ್ನು ಅದರಿಂದ ರಕ್ಷಿಸಿದನು. ಈ ದೃಷ್ಟಾಂತ ಗಳಿಂದ ನಿಮಗೆ ನಿಮ್ಮ ಶಾಶ್ವತ ವಿಜಯದ ನೇರ ಮಾರ್ಗ ಕಾಣಬಹುದೆಂದು ನಿರೀಕ್ಷಿಸಿ ಅಲ್ಲಾಹನು ತನ್ನ ನಿದರ್ಶನಗಳನ್ನು ನಿಮಗೆ ಪ್ರಕಾಶಗೊಳಿಸುತ್ತಾನೆ." (3:103)

ಈ ವಾಕ್ಯವು ನಮಗೆ ಅನೇಕ ಪಾಠಗಳನ್ನು ಕೊಡುತ್ತದೆ. ಮೊದಲನೆಯದಾಗಿ, ಮುಸ್ಲಿಮರ ಪರಸ್ಪರ ಐಕ್ಯವು ಅಲ್ಲಾಹನ ಒಂದು ದೊಡ್ಡ ಅನುಗ್ರಹವಾಗಿದೆ.

ಎರಡನೆಯದಾಗಿ, ಮುಸ್ಲಿಮರು ಸನ್ಮಾರ್ಗದಲ್ಲಿರುವುದು ಅವರ ಐಕ್ಯವನ್ನು ಅವಲಂಬಿಸಿದೆ, ಐಕ್ಯವಿಲ್ಲದೆ ಅವರು ಸನ್ಮಾರ್ಗದಲ್ಲಿ ಸ್ಥಿರವಾಗಿ ಉಳಿದಿರಲು ಸಾಧ್ಯವಿಲ್ಲ. ಮೂರನೆಯದಾಗಿ, ಅನೈಕ್ಯ ಅಥವಾ ವಿಚ್ಛಿದ್ರತೆಯು ಶಾಪ ಹಾಗೂ ಖಂಡನಾರ್ಹವಾಗಿದೆ. ನಾಲ್ಕನೆಯದಾಗಿ, ಅಲ್ಲಾಹನ ಪಾಶ ಅರ್ಥಾತ್ ದೇವ ಧರ್ಮದ ಜೊತೆಗಿನ ಸಂಬಂಧವೇ ಮುಸ್ಲಿಮರ ಐಕ್ಯದ ಬುನಾದಿಯಾಗಿದೆ. ಅಂದರೆ ಅವರು ಅಲ್ಲಾಹನ ಧರ್ಮವನ್ನು, ಅವನ ಗ್ರಂಥವನ್ನು ಮತ್ತು ಅವನ ಸಂದೇಶವಾಹಕರ ಆದರ್ಶವನ್ನು ಬಲವಾಗಿ ನೆಚ್ಚಿಕೊಂಡಿರಬೇಕು. ಧರ್ಮದ ಬುನಾದಿಯಲ್ಲಿ ಪರಸ್ಪರ ಸಹೋದರರಾಗಬೇಕು. ವಿಚ್ಛಿದ್ರತೆಯಿಂದ ಸಂಪೂರ್ಣ ದೂರವಿರಬೇಕು. ಈ ರೀತಿ ಏಕತೆ ಸಾಧಿಸಿದ ಬಳಿಕ ಅವರು ನಿರ್ವಹಿಸಬೇಕಾದ ಕರ್ತವ್ಯವೇನು?

**"ನಿಮ್ಮಲ್ಲಿ ಸತ್ಕರ್ಮದ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟ ವೊಂದು ಇರಬೇಕಾದುದು ಅತ್ಯಗತ್ಯ. ಈ ಕಾರ್ಯ ವೆಸಗುವವರೇ ನಿಶ್ಚಯವಾಗಿಯೂ ಕೃತಾರ್ಥರಾಗುವರು." (ಪವಿತ್ರ ಕುರ್‌ಆನ್, 3:104)**

ಅರ್ಥಾತ್, ಇಸ್ಲಾಮಿನೆಡೆಗೆ ವಿಶ್ವವನ್ನು ಆಮಂತ್ರಿಸುವುದು, ವಿಶ್ವದಲ್ಲಿ ಒಳಿತನ್ನು ಸಂಸ್ಥಾಪಿಸುವುದು ಮತ್ತು ಕೆಡುಕನ್ನು ಹೋಗಲಾಡಿಸುವುದೇ ಈ ಸಂಘಟಿತ ಶಕ್ತಿಯ ಉದ್ದೇಶವಾಗಬೇಕು.

ಪ್ರಸ್ತುತ 'ಆಲಿ ಇಮ್ರಾನ್' ಅಧ್ಯಾಯದ ಮುಂದಿನ ವಾಕ್ಯಗಳಲ್ಲಿ ಅನೈಕ್ಯದ ಸ್ವರೂಪ ಹಾಗೂ ಪರಿಣಾಮಗಳನ್ನು ಬಹಳ ಸ್ಪಷ್ಟವಾಗಿ ಚಿತ್ರಿಸಲಾಗಿದೆ:

**"ಸುವ್ಯಕ್ತ ನಿದರ್ಶನಗಳು ಪ್ರಾಪ್ತಿಯಾದ ಮೇಲೆ ಭಿನ್ನಾಭಿಪ್ರಾಯಗಳಲ್ಲಿ ಸಿಲುಕಿ ವಿಭಿನ್ನ ಪಕ್ಷ ಪಂಗಡಗಳಲ್ಲಿ ಹರಿ ಹಂಚಿ ಹೋದವರಂತೆ ನೀವಾಗಬಾರದು. ಹೀಗೆ ಮಾಡಿದವರು ಘೋರ ಯಾತನೆಯನ್ನನುಭವಿಸುವರು. ಅಂದು ಕೆಲವರು ಪ್ರಸನ್ನವದನ ರಾಗುವರು. ಇನ್ನು ಕೆಲವರ ಮುಖಗಳು ಕಠ್ರಗಾಗುವುವು. ಮುಖ ಕರ್ರಗಾದವರೊಡನೆ (ಹೀಗೆ ಹೇಳಲಾಗುವುದು), 'ಈಮಾನಿನ ಭವ್ಯ ಕೊಡುಗೆ ಪ್ರಾಪ್ತವಾದ ಬಳಿಕವೂ ನೀವು ನಿಷೇಧ ನೀತಿಯನ್ನು ಅನುಸರಿಸಿದಿರಾ? ಸರಿ, ಹಾಗಾದರೆ ಈ ಕೃತಘ್ನತೆಯ ಬದಲಿಗೆ ನರಕ ಯಾತನೆಯ ಸವಿಯನ್ನುಣ್ಣಿರಿ.' ಪ್ರಸನ್ನವದನರಾದವರ ವಿಚಾರ-ಅವರಿಗೆ ಅಲ್ಲಾಹನ ಕೃಪಾಶ್ರಯದಲ್ಲಿ ಸ್ಥಾನ ಸಿಗುವುದು ಮತ್ತು ಅವರು ಸದಾ ಅದೇ ಸ್ಥಿತಿಯಲ್ಲಿರುವರು." (3:105-107)**

ಈ ವಾಕ್ಯ ಎಷ್ಟೊಂದು ಪಾಠ ಬೋಧಕವಾಗಿದೆ: ವಿಚ್ಛಿದ್ರತೆಗೆ ಕಾರಣವಾಗುವವರು ಮತ್ತು ಸ್ವತಃ ವಿಚ್ಛಿದ್ರರಾಗುವವರು ಪರಲೋಕದಲ್ಲಿ ಘೋರ ಶಿಕ್ಷೆಗೆ ತುತ್ತಾಗುವುದಲ್ಲದೆ ಈ ಲೋಕ ದಲ್ಲಿ ಅವರು ಆ ಮೂಲಕ ಇಸ್ಲಾಮಿನಿಂದ ಸಂಬಂಧ ಕಡಿದುಕೊಂಡಂತಾಗುತ್ತದೆ. ಅದು ಕುಫ್ರ್ ಅರ್ಥಾತ್ ಕೃತಘ್ನತೆ ಅಥವಾ ಸತ್ಯಧಿಕ್ಕಾರಕ್ಕೆ ನಿಕಟವಾಗಿರುವ ಕ್ರಿಯೆಯಾಗಿದೆ. ಅದಕ್ಕಿರುವ ಶಿಕ್ಷೆ ಕೂಡಾ ಕುಫ್ರ್‌ಗೆ ಇರುವ ಶಿಕ್ಷೆಯಂತೆ ಯಾತನಾಮಯವಾಗಿರುತ್ತದೆ.

ಮುಸ್ಲಿಮ್ ಸಮಾಜವನ್ನು ಸುಸಂಘಟಿತಗೊಳಿಸುವ ಮತ್ತು ಅದನ್ನು ಸಂಘಟಿತ ಸ್ಥಿತಿಯಲ್ಲೇ ಉಳಿಸುವ ನಿಟ್ಟಿನಲ್ಲಿ ಇಸ್ಲಾಮ್ ನೀಡಿರುವ ಆದೇಶವೇನೆಂದರೆ, ಪ್ರಥಮವಾಗಿ

ಮುಸ್ಲಿಮರು ತಮಗೊಬ್ಬ ನಾಯಕನನ್ನು ಆಯ್ಕೆ ಮಾಡಬೇಕು, ಆ ಬಳಿಕ ಅಲ್ಲಾಹನು ಮತ್ತು ಪ್ರವಾದಿಯು ನಿಗದಿಪಡಿಸಿರುವ ಮೇರೆಗಳಿಗೆ ಬದ್ಧವಾಗಿದ್ದು ಆತನನ್ನು ಅನುಸರಿಸಬೇಕು. ಈ ರೀತಿ ನಾಯಕನನ್ನು ಅನುಸರಿಸಬೇಕಾದುದು, ಅಲ್ಲಾಹ್ ಮತ್ತು ಪ್ರವಾದಿಯನ್ನು ಅನುಸರಿಸುವಷ್ಟೇ ಪ್ರಾಮುಖ್ಯವಾಗಿದೆ. ಈ ಮಧ್ಯೆ ಒಂದು ವೇಳೆ ಯಾವುದಾದರೂ ವಿಷಯದಲ್ಲಿ ವಿವಾದವುಂಟಾದರೆ ಅಲ್ಲಾಹ್ ಮತ್ತು ಪ್ರವಾದಿಯ ಆದೇಶವೇನೆಂಬುದನ್ನು ನೋಡಿ ಆ ಪ್ರಕಾರ ತೀರ್ಮಾನಿಸಬೇಕು.

"ಓ ಸತ್ಯವಿಶ್ವಾಸಿಗಳೇ, ಅಲ್ಲಾಹನ ಆಜ್ಞಾಪಾಲನೆ ಮಾಡಿರಿ, ಸಂದೇಶವಾಹಕರ ಮತ್ತು ನಿಮ್ಮೊಳಗಿನ 'ಉಲುಲ್ ಅಮ್ರ್'ರ (ಆಜ್ಞಾಧಿಕಾರ ಹೊಂದಿದವರ) ಆಜ್ಞಾಪಾಲನೆ ಮಾಡಿರಿ. ಅನಂತರ ನಿಮ್ಮೊಳಗೆ ಯಾವುದಾದರೊಂದು ವಿಷಯದಲ್ಲಿ ವಿವಾದವುಂಟಾದರೆ ನೀವು ನಿಜಕ್ಕೂ ಅಲ್ಲಾಹನ ಮತ್ತು ಅಂತಿಮ ದಿವಸದ ಮೇಲೆ ವಿಶ್ವಾಸವಿರಿಸುತ್ತೀರಾದರೆ ಆ ವಿವಾದವನ್ನು ಅಲ್ಲಾಹ್ ಮತ್ತು ಸಂದೇಶವಾಹಕರ ಕಡೆಗೆ ತಿರುಗಿಸಿರಿ. ಇದುವೇ ಅತ್ಯಂತ ಸರಿಯಾದ ಕರ್ಮ ವಿಧಾನ. ಇದು ಪರಿಣಾಮದ ದೃಷ್ಟಿಯಿಂದಲೂ ಉತ್ತಮವಾಗಿದೆ." (4:59)

ಇದು ಪವಿತ್ರ ಕುರ್‌ಆನಿನ ಆದೇಶವಾದರೆ, ಪ್ರವಾದಿ ಮುಹಮ್ಮದ್‌ರ(ಸ) ನುಡಿ ಈ ರೀತಿ ಇದೆ:

"ನನ್ನನ್ನು ಯಾರಾದರೂ ಅನುಸರಿಸಿದರೆ ಅವನು ಅಲ್ಲಾಹನನ್ನು ಅನುಸರಿಸಿದನು. ನನ್ನ ಆಜ್ಞೆಗಳನ್ನು ಯಾರಾದರೂ ಉಲ್ಲಂಘಿಸಿದರೆ ಅವನು ಅಲ್ಲಾಹನ ಆಜ್ಞೆಗಳನ್ನು ಉಲ್ಲಂಘಿಸಿದನು. ಯಾರು ನಾಯಕನ ಆಜ್ಞಾಪಾಲನೆ ಮಾಡಿದನೋ ಅವನು ನನ್ನ ಆಜ್ಞಾಪಾಲನೆ ಮಾಡಿದನು. ಯಾರು ನಾಯಕನ ಆಜ್ಞೋಲ್ಲಂಘನೆ ಮಾಡಿದನೋ ಅವನು ನನ್ನ ಆಜ್ಞೋಲ್ಲಂಘನೆ ಮಾಡಿದನು. ಇಮಾಮ್(ನಾಯಕನು) ಗುರಾಣಿಯಾಗಿರುತ್ತಾನೆ. ಗುರಾಣಿಯ ರಕ್ಷಣೆಯಲ್ಲಿ ಯುದ್ಧ ಮಾಡಲಾಗುತ್ತದೆ ಮತ್ತು ಅದರ ಮೂಲಕ ಅಪಾಯಗಳಿಂದ ರಕ್ಷಣೆ ಪಡೆಯಲಾಗುತ್ತದೆ." (ಬುಖಾರಿ, ಮುಸ್ಲಿಮ್)

ಈ ಹದೀಸ್‌ನಿಂದ ಸ್ಪಷ್ಟವಾಗುವ ಪ್ರಕಾರ, ನಾಯಕನ ಆಜ್ಞೆಗಳನ್ನು ಪಾಲಿಸುವುದು ಅಲ್ಲಾಹ್ ಮತ್ತು ಪ್ರವಾದಿಯ ಆಜ್ಞೆಗಳನ್ನು ಪಾಲಿಸುವುದಕ್ಕೆ ಸಮಾನವಾಗಿದೆ. ಅವನ ಆಜ್ಞೆಗಳನ್ನು ಮುರಿಯುವುದು ಅಲ್ಲಾಹ್ ಮತ್ತು ಪ್ರವಾದಿಯ ಆಜ್ಞೆಗಳನ್ನು ಮುರಿಯುವುದಕ್ಕೆ ಸಮಾನವಾಗಿದೆ. ಸಮುದಾಯವನ್ನು ಬಾಹ್ಯ ಅಪಾಯಗಳಿಂದ ಸುರಕ್ಷಿತವಾಗಿಡಲು ಮತ್ತು ಆಂತರಿಕ ಅಪಾಯಗಳಿಂದ ಸುರಕ್ಷಿಸಲು ನಾಯಕನ ಅನುಸರಣೆ ಅನಿವಾರ್ಯವಾಗಿದೆ.

ಒಮ್ಮೆ ಪ್ರವಾದಿ(ಸ) ಹೀಗೆ ಹೇಳಿದರು:

"ಸತ್ಯವಿಶ್ವಾಸಿಯ ಮೇಲೆ (ತನ್ನ ನಾಯಕನ) ಆಜ್ಞೆಗಳನ್ನು ಆಲಿಸುವುದು ಮತ್ತು ಪಾಲಿಸುವುದು ಕಡ್ಡಾಯವಾಗಿದೆ. ತಾನು ಮೆಚ್ಚುವ ಆದೇಶಗಳನ್ನೂ ತಾನು ಮೆಚ್ಚದಿರುವ ಆದೇಶಗಳನ್ನೂ ಅವನು ಪಾಲಿಸಬೇಕು. ಇದು ಪಾಪಕಾರ್ಯದ ಆದೇಶ ನೀಡಲಾಗುವ ತನಕ.

ಒಂದು ವೇಳೆ ಪಾಪ ಕಾರ್ಯವನ್ನು ಆದೇಶಿಸಲಾದರೆ, ಅದನ್ನು ಆಲಿಸಲೂಬಾರದು, ಪಾಲಿಸಲೂ ಬಾರದು." (ಬುಖಾರಿ, ಮುಸ್ಲಿಮ್)

ಪ್ರವಾದಿವರ್ಯರ(ಸ) ಇನ್ನೊಂದು ವಚನ ಹೀಗಿದೆ:

"(ನಾಯಕನ)" ಅನುಸರಣೆಯಿಂದ ದೂರವಿದ್ದ ವ್ಯಕ್ತಿಯು ಪುನರುತ್ಥಾನ ದಿನ ಅಲ್ಲಾಹನನ್ನು ಭೇಟಿಯಾಗುವಾಗ(ಅಲ್ಲಾಹನ ಹಿಡಿತದಿಂದ ತಪ್ಪಿಸಿಕೊಳ್ಳಲು) ಅವನ ಬಳಿ ಯಾವ ನೆಪವೂ ಇರಲಾರದು. ತನ್ನ ಕೊರಳ ಮೇಲೆ ಬೈಅತ್‌ನ (ನಿಷ್ಠೆ ಮತ್ತು ಅನುಸರಣೆಯ ಕರಾರಿನ) ನೊಗವಿಲ್ಲದ ಸ್ಥಿತಿಯಲ್ಲಿ ಸಾಯುವ ವ್ಯಕ್ತಿ ಅಜ್ಞಾನದ (ಇಸ್ಲಾಮೇತರ) ಸ್ಥಿತಿಯಲ್ಲಿ ಸತ್ತನು. (ಮುಸ್ಲಿಮ್)

ಒಂದು ನಾಯಕತ್ವಕ್ಕೆ ಬದ್ಧವಾದ ಸುಸಂಘಟಿತ ಸಮುದಾಯದ ಸ್ಥಾಪನೆ ಕಡ್ಡಾಯವೆಂದೂ ಅದಕ್ಕೆ ಬದ್ಧವಲ್ಲದ ಬದುಕು ಅಜ್ಞಾನದ ಬದುಕೆಂದೂ ಇದರಿಂದ ವ್ಯಕ್ತವಾಗುತ್ತದೆ.

ಮುಸ್ಲಿಮ್ ಸಮುದಾಯದಲ್ಲಿ ಪರಸ್ಪರ ಏಕತೆಗೆ ಎಷ್ಟು ಮಹತ್ವ ಇದೆ ಎಂಬುದನ್ನು ನಾವು ಪವಿತ್ರ ಕುರ್‌ಆನಿನ ಈ ಕೆಳಗಿನ ವಾಕ್ಯದಲ್ಲಿ ಗುರುತಿಸಬಹುದು:

**"ಅಲ್ಲಾಹನಿಗಂತು, ಅವನ ಮಾರ್ಗದಲ್ಲಿ ಸೀಸದ ಎರಕ ಹೊಯ್ದ ಉಕ್ಕಿನ ಗೋಡೆಯೋ ಎಂಬಂತೆ ಪಂಕ್ತಿಬದ್ಧರಾಗಿ ಹೋರಾಡುವವರೇ ಪ್ರಿಯರು." (61:4)**

ಅಂದರೆ ಯುದ್ಧದಂತಹ ಅತ್ಯಂತ ಸಂಕೀರ್ಣ ಹಾಗೂ ಕ್ಲಿಷ್ಟ ಪರಿಸ್ಥಿತಿಯಲ್ಲಿ ಸತ್ಯವಿಶ್ವಾಸಿಗಳ ಮಧ್ಯೆ ಅಭೇದ್ಯ ಸಂಬಂಧವಿರಬೇಕು. ಅವರು ಅಲ್ಲಾಹನ ಧರ್ಮದ ಉತ್ಥಾನಕ್ಕಾಗಿ ಎರಕ ಹೊಯ್ದ ಬಲಿಷ್ಠ ಗೋಡೆಯಂತೆ ಸಂಘಟಿತ ಶ್ರಮ ನಡೆಸಬೇಕು.

ಪ್ರವಾದಿ(ಸ) ಒಮ್ಮೆ ಹೀಗೆ ಹೇಳಿದರು:

"ಒಬ್ಬ ಸತ್ಯವಿಶ್ವಾಸಿಯು ಇನ್ನೊಬ್ಬ ಸತ್ಯವಿಶ್ವಾಸಿಯ ಪಾಲಿಗೆ ಗೋಡೆಯಂತಿರುತ್ತಾನೆ. ಗೋಡೆಯ ಒಂದು ಭಾಗವು ಇನ್ನೊಂದು ಭಾಗಕ್ಕೆ ಬಲ ಒದಗಿಸುತ್ತಲಿರುತ್ತದೆ." ಹೀಗೆ ಹೇಳಿ ಪ್ರವಾದಿ(ಸ) ತಮ್ಮ ಬೆರಳುಗಳನ್ನು ಪರಸ್ಪರ ಹೆಣೆದು 'ಹೀಗೆ' ಎಂದು ಹೇಳಿದರು. (ಬುಖಾರಿ, ಮುಸ್ಲಿಮ್)

❁❁❁

# ಸಂಕಲ್ಪ ಶುದ್ಧಿ

ಅಲ್ಲಾಹನು ತನ್ನ ದಾಸರಿಂದ ಏನನ್ನು ಅಪೇಕ್ಷಿಸುತ್ತಾನೆ ಎಂಬುದರ ವಿವರವನ್ನು ಗತ ಅಧ್ಯಾಯದಲ್ಲಿ ವಿವರಿಸಲಾಗಿದೆ. ಅಲ್ಲಿ ತಿಳಿಸಲಾಗಿರುವ ಆದೇಶಗಳ ಅನುಸರಣೆ ಪ್ರತಿಯೊಬ್ಬ ಸತ್ಯವಿಶ್ವಾಸಿಯ ಕರ್ತವ್ಯವಾಗಿದೆ. ಈ ಅನುಸರಣೆಯೇ ಅವನನ್ನು ಇಹ-ಪರಗಳ ವಿಜಯಕ್ಕೆ ಅರ್ಹಗೊಳಿಸುತ್ತದೆ. ಆದರೆ ಮನುಷ್ಯನ ಯಾವುದೇ ಸತ್ಕರ್ಮವು ಅಲ್ಲಾಹನ ಬಳಿ ಸ್ವೀಕೃತವಾಗಬೇಕಿದ್ದರೆ, ಆ ಕರ್ಮವನ್ನು ಅಪ್ಪಟವಾಗಿ ಕೇವಲ ಅಲ್ಲಾಹನ ಸಂಪ್ರೀತಿ ಮತ್ತು ಪರಲೋಕದ ವಿಜಯವನ್ನು ಉದ್ದೇಶವಾಗಿಟ್ಟು ಮಾಡಬೇಕಾದುದು ಅತ್ಯಗತ್ಯ. ಕೇವಲ ತೋರಿಕೆಗಾಗಿ ಮಾಡಿದ ಕರ್ಮಗಳು ಅಥವಾ ಲೌಕಿಕ ಸ್ವಾರ್ಥಗಳನ್ನು ಮುಂದಿಟ್ಟು ಮಾಡಲಾದ ಕರ್ಮಗಳು ಅಲ್ಲಾಹನ ಬಳಿ ಸ್ವೀಕೃತವಾಗುವುದಿಲ್ಲ. ಅಂತಹ ಕರ್ಮಗಳು ತಿರಸ್ಕರಿಸಲ್ಪಡುತ್ತವೆ. ತೋರಿಕೆಗಾಗಿ ಕರ್ಮವೆಸಗುವುದು ಕಪಟವಿಶ್ವಾಸಿಗಳ ಲಕ್ಷಣವೆಂದು ಪವಿತ್ರ ಕುರ್‌ಆನ್ ಹೇಳುತ್ತದೆ:

"ಈ ಕಪಟವಿಶ್ವಾಸಿಗಳು ಅಲ್ಲಾಹನೊಂದಿಗೆ ವಂಚನೆ ಮಾಡುತ್ತಿದ್ದಾರೆ. ವಸ್ತುತಃ ಅಲ್ಲಾಹನೇ ಅವರನ್ನು ವಂಚನೆಯಲ್ಲಿ ಸಿಲುಕಿಸಿ ಬಿಟ್ಟಿರುತ್ತಾನೆ. ಇವರು ನಮಾಝ್ ಮಾಡಲು ಅರೆ ಮನಸ್ಸಿನಿಂದ, ಕೇವಲ ಜನರಿಗೆ ತೋರಿಸಲಿಕ್ಕಾಗಿ ಏಳುತ್ತಾರೆ. ಇವರು ಅಲ್ಲಾಹನನ್ನು ಅತ್ಯಲ್ಪವೇ ಸ್ಮರಿಸುತ್ತಾರೆ." (4:142)

ತೋರಿಕೆಗಾಗಿ ಕೆಲಸ ಮಾಡುವುದು, ಅಲ್ಲಾಹನ ಮೇಲೂ ಪರಲೋಕದ ಮೇಲೂ ವಿಶ್ವಾಸ ಇಲ್ಲದಿರುವುದರ ಲಕ್ಷಣ ಎಂದು ಪವಿತ್ರ ಕುರ್‌ಆನ್ ಹೇಳಿದೆ:

"ಓ ಸತ್ಯವಿಶ್ವಾಸಿಗಳೇ, ತನ್ನ ಸಂಪತ್ತನ್ನು ಆಡಂಬರಕ್ಕಾಗಿ ಖರ್ಚು ಮಾಡುವವನಂತೆ ಹಾಗೂ ಅಲ್ಲಾಹ್ ಮತ್ತು ಪರಲೋಕದಲ್ಲಿ ವಿಶ್ವಾಸವಿರಿಸದವನ ಹಾಗೆ ಉಪಕಾರ ಸಾರವಿರಿಸಿಯೂ ನೋಯಿಸಿಯೂ ನಿಮ್ಮ ದಾನಧರ್ಮಗಳನ್ನು ನೀವು ನಿಷ್ಫಲಗೊಳಿಸಿಕೊಳ್ಳಬೇಡಿರಿ." (2:264)

ಪ್ರವಾದಿ ಮುಹಮ್ಮದ್(ಸ) ಹೇಳಿರುವರು:

"ಕರ್ಮಗಳು ಸಂಪೂರ್ಣವಾಗಿ ಸಂಕಲ್ಪಗಳನ್ನು ಅವಲಂಬಿಸಿವೆ. ಮನುಷ್ಯನು ಯಾವ ಸಂಕಲ್ಪದಿಂದ ಕರ್ಮವೆಸಗುವನೋ ಅದರ ಫಲ ಮಾತ್ರ ಅವನಿಗೆ ಸಿಗುವುದು. ಅಲ್ಲಾಹ್

ಮತ್ತು ರಸೂಲರಿಗಾಗಿ ಹಿಜ್ರತ್(ವಲಸೆ) ಮಾಡುವವನಿಗೆ ಅಲ್ಲಾಹ್ ಮತ್ತು ರಸೂಲರಿಗಾಗಿ ಹಿಜ್ರತ್ ಮಾಡಿದ ಫಲ ಸಿಗುವುದು, ಇನ್ನು ಯಾರು ಲೌಕಿಕ ಸಂಪಾದನೆ ಮಾಡಲಿಕ್ಕಾಗಿ ಅಥವಾ ಹೆಣ್ಣನ್ನು ವಿವಾಹವಾಗಲಿಕ್ಕಾಗಿ ಹಿಜ್ರತ್ ಮಾಡುವನೋ ಅವನ ಹಿಜ್ರತ್‌ಗೆ ಯಾವ ಉದ್ದೇಶದಿಂದ ಹಿಜ್ರತ್ ಮಾಡಲಾಗಿತ್ತೋ ಅದರ ಪ್ರಕಾರ ಮಾತ್ರ ಫಲ ದೊರೆಯುವುದು." (ಬುಖಾರಿ, ಮುಸ್ಲಿಮ್)

ಜಿಹಾದ್‌ನಂತೆ ಹಿಜ್ರತ್ ಕೂಡಾ ಒಂದು ದೊಡ್ಡ ಪುಣ್ಯ ಕಾರ್ಯ. ಅದು ಸತ್ಯವಿಶ್ವಾಸದ ಒರೆಗಲ್ಲು ಕೂಡಾ ಆಗಿದೆ. ಮನುಷ್ಯನು ಅಲ್ಲಾಹನ ಧರ್ಮವನ್ನು ನಿರಾತಂಕವಾಗಿ ಪಾಲಿಸಲಿಕ್ಕಾಗಿ ತನ್ನ ತಾಯ್ನಾಡನ್ನೂ ಬಂಧುಗಳನ್ನೂ ವ್ಯಾಪಾರ, ಸೊತ್ತು ಇತ್ಯಾದಿಗಳನ್ನೂ ಬಿಟ್ಟು ಬೇರೊಂದು ಅಪರಿಚಿತ ನಾಡಿಗೆ ಹೋಗುತ್ತಾನೆ. ಇದು ಎಷ್ಟೊಂದು ದೊಡ್ಡ ತ್ಯಾಗ! ಆದರೆ ಇಷ್ಟು ದೊಡ್ಡ ತ್ಯಾಗ ಮಾಡುವಾಗಲೂ ಒಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಅಲ್ಲಾಹನ ಸಂಪ್ರೀತಿ ಗಳಿಸುವ ಮತ್ತು ಪ್ರವಾದಿಯ ಅನುಸರಣೆ ಮಾಡುವ ಸ್ಫೂರ್ತಿ ಇರುವ ಬದಲು ಇತರ ಲೌಕಿಕ ಉದ್ದೇಶವೇನಾದರೂ ಇದ್ದರೆ ಧನ ಸಂಪಾದನೆ, ವಿವಾಹ ಮುಂತಾದ ಪ್ರೇರಣೆಗಳಿದ್ದರೆ ಅವನಿಗೆ ಈ ಬಗ್ಗೆ ಪರಲೋಕದಲ್ಲಿ ಯಾವುದೇ ಸತ್ಫಲ ಸಿಗಲಾರದು. ಒಮ್ಮೆ ಪ್ರವಾದಿ(ಸ) ಹೇಳಿದರು:

"ಪರಲೋಕದಲ್ಲಿ ಪ್ರಥಮವಾಗಿ ಹುತಾತ್ಮ ವ್ಯಕ್ತಿಯ ಬಗ್ಗೆ ತೀರ್ಮಾನ ಮಾಡಲಾಗುವುದು. ಅವನನ್ನು ಕರೆ ತರಲಾಗುವುದು. ಅಲ್ಲಾಹನು ಅವನಿಗೆ ತನ್ನ ಅನುಗ್ರಹಗಳನ್ನು ನೆನಪಿಸುವನು. ಅವನು ಅವೆಲ್ಲವನ್ನೂ ಅರಿತುಕೊಳ್ಳುವನು. ಆ ಬಳಿಕ ಅಲ್ಲಾಹನು, ನೀನು ಈ ಅನುಗ್ರಹಗಳ ಕುರಿತು ಎಂತಹ ಧೋರಣೆಯನ್ನು ಅನುಸರಿಸಿದೆ ಎಂದು ಪ್ರಶ್ನಿಸುವನು. ಆಗ ಆತನು ನಾನು ನಿನ್ನ ಮಾರ್ಗದಲ್ಲಿ ಹೋರಾಟ ನಡೆಸಿದೆ ಕೊನೆಗೆ ಹುತಾತ್ಮನೂ ಆದೆ ಎಂದು ಹೇಳುವನು. ಆಗ, ನೀನು ಸುಳ್ಳು ಹೇಳುತ್ತಿರುವೆ ನೀನು ಹೋರಾಡಿದ್ದು, ಜನರು ನಿನ್ನನ್ನು ವೀರನೆಂದು ಕರೆಯಬೇಕೆಂಬ ಅಪೇಕ್ಷೆಯಿಂದ ಅವರು ನಿನ್ನನ್ನು ಹಾಗೆ ಕರೆದದ್ದಾಯಿತು ಎಂದು ಅಲ್ಲಾಹನು ಹೇಳುವನು. ಅನಂತರ ಅವನ ಮುಖವನ್ನು ನೆಲಕ್ಕೊರೆಸುತ್ತಾ ಎಳೆದೊಯ್ದು ನರಕಕ್ಕೆ ಎಸೆಯಬೇಕೆಂದು ಆದೇಶಿಸಲಾಗುವುದು. ಆ ಬಳಿಕ (ಧರ್ಮದ) ಜ್ಞಾನ ಕಲಿತು, ಇತರರಿಗೆ ಕಲಿಸಿ, ಪವಿತ್ರ ಕುರ್‌ಆನಿನ ಪಠಣ ಮಾಡುತ್ತಲಿದ್ದ ವ್ಯಕ್ತಿಯನ್ನು ತರಲಾಗುವುದು. ಅಲ್ಲಾಹನು ಅವನಿಗೆ ತನ್ನ ಅನುಗ್ರಹಗಳನ್ನು ನೆನಪಿಸುವನು. ಅವನು ಅವುಗಳನ್ನು ಅರಿತುಕೊಳ್ಳುವನು ಆ ಬಳಿಕ ನೀನು ಈ ಅನುಗ್ರಹಗಳ ಬಗ್ಗೆ ಯಾವ ಧೋರಣೆಯನ್ನು ಅನುಸರಿಸಿದೆ ಎಂದು ಪ್ರಶ್ನಿಸಲಾಗುವುದು. ಅವನು, ನಾನು ಜ್ಞಾನ ಸಂಪಾದಿಸಿದೆ, ಇತರರಿಗೆ ಕಲಿಸಿದೆ ಮತ್ತು ನಿನಗಾಗಿ ಕುರ್‌ಆನ್ ಪಠಿಸುತ್ತಿದ್ದೆ ಎಂದು ಹೇಳುವನು. ಆಗ, ನೀನು ಸುಳ್ಳು ಹೇಳುತ್ತಿರುವೆ ನೀನು ಜ್ಞಾನ ಸಂಪಾದಿಸಿದ್ದು ಜನರು ನಿನ್ನನ್ನು ಜ್ಞಾನಿ ಎಂದು ಕರೆಯಬೇಕೆಂಬ ಉದ್ದೇಶದಿಂದ. ನೀನು ಕುರ್‌ಆನ್ ಓದುತ್ತಿದ್ದುದು ಜನರು ನಿನ್ನನ್ನು ಕುರ್‌ಆನಿನ ಪಂಡಿತನೆಂದು

ೊಗಳಬೇಕೆಂಬ ಉದ್ದೇಶದಿಂದ. ಜನರು ಹಾಗೆ ಹೊಗಳಿದ್ದಾಯಿತು ಎಂದು ಅಲ್ಲಾಹನು ೇಳುವನು. ಆ ಬಳಿಕ ಅವನ ಮುಖವನ್ನು ನೆಲಕ್ಕೊರೆಸುತ್ತಾ ಅವನನ್ನು ನರಕಕ್ಕೆ ೆದೊಯ್ಯಲು ಆದೇಶಿಸಲಾಗುವುದು. ಆ ಬಳಿಕ ಅಲ್ಲಾಹನ ಮುಂದೆ ಈ ಲೋಕದಲ್ಲಿ ಲ್ಲಾ ಬಗೆಯ ಸಂಪತ್ ಸೌಕರ್ಯಗಳನ್ನು ದಯಪಾಲಿಸಿರುವ ವ್ಯಕ್ತಿಯನ್ನು ತರಲಾಗು ುದು. ಅಲ್ಲಾಹನು ಅವನಿಗೂ ತನ್ನ ಅನುಗ್ರಹಗಳನ್ನು ನೆನಪಿಸುವನು. ಅವನು ವುಗಳನ್ನು ಅರಿತುಕೊಳ್ಳುವನು. ನೀನು ಈ ಅನುಗ್ರಹಗಳ ವಿಷಯದಲ್ಲಿ ಯಾವ ೋರಣೆ ಅನುಸರಿಸಿದೆ ಎಂದು ಅವನನ್ನು ಪ್ರಶ್ನಿಸಲಾಗುವುದು. ಆಗ ಆತನು ನಾನು ದನ್ನು ಯಾವೆಲ್ಲಾ ಮಾರ್ಗದಲ್ಲಿ ವ್ಯಯಿಸುವುದನ್ನು ನೀನು ಮೆಚ್ಚುವೆಯೋ ಆ ಎಲ್ಲಾ ಾರ್ಗ ಗಳಲ್ಲಿ ವ್ಯಯಿಸಿದ್ದೇನೆ ಎಂದು ಹೇಳುವನು. ಆಗ, ನೀನು ಸುಳ್ಳು ಹೇಳುತ್ತಿರುವೆ. ೀನು ಖರ್ಚು ಮಾಡುತ್ತಿದ್ದುದೆಲ್ಲಾ ಜನರು ನಿನ್ನನ್ನು ಕೊಡುಗೈ ದಾನಿಯೆಂದು ಕೊಂಡಾಡ ೇಕೆಂಬ ಉದ್ದೇಶದಿಂದ. ಅವರು ನಿನ್ನನ್ನು ಕೊಂಡಾಡಿದ್ದಾಯಿತು ಎಂದು ಅಲ್ಲಾಹನು ೇಳುವನು. ಆ ಬಳಿಕ ಅವನ ಮುಖವನ್ನೂ ನೆಲಕ್ಕೊರೆಸುತ್ತಾ ಎಳೆದೊಯ್ದು ನರಕಕ್ಕೆ ಎಕಲು ಆದೇಶಿಸಲಾಗುವುದು." (ಮುಸ್ಲಿಮ್)

ಈ ಹದೀಸ್‌ನಲ್ಲಿ ತೋರಿಕೆಯ ಬುದ್ಧಿಯ ವಿರುದ್ಧ ನೀಡಲಾಗಿರುವ ಎಚ್ಚರಿಕೆ ಷ್ಟೊಂದು ಭಯಾನಕವಾಗಿದೆ! ಮನುಷ್ಯನ ಬಳಿ ಮೂರು ಬಗೆಯ ಸಾಮರ್ಥ್ಯ ಳಿರುತ್ತವೆ. ಶಾರೀರಿಕ ಸಾಮರ್ಥ್ಯ, ಬೌದ್ಧಿಕ ಸಾಮರ್ಥ್ಯ ಮತ್ತು ಆರ್ಥಿಕ ಸಾಮರ್ಥ್ಯ. ಜವಾದ ಸತ್ಯವಿಶ್ವಾಸಿಯು ಈ ಎಲ್ಲಾ ಸಾಮರ್ಥ್ಯಗಳನ್ನು ಕೇವಲ ಅಲ್ಲಾಹನ ೆಚ್ಚುಗೆಗಾಗಿ ಅವನ ಮಾರ್ಗದಲ್ಲಿ ತೊಡಗಿಸುತ್ತಾನೆ. ಒಂದು ವೇಳೆ ಯಾರಾದರೂ ೀ ಎಲ್ಲಾ ಸಾಮರ್ಥ್ಯಗಳನ್ನು ಧರ್ಮ ಮಾರ್ಗದಲ್ಲಿ ತ್ಯಾಗ ಮಾಡುವಾಗ, ಅಲ್ಲಾಹನ ದಲು ಇತರರ ಮೆಚ್ಚುಗೆ ಮತ್ತು ಹೊಗಳಿಕೆಯನ್ನು ಅಪೇಕ್ಷಿಸಿದ್ದರೆ ಆ ತ್ಯಾಗವು ಣ್ಯ ತರುವ ಪಾಪಕ್ಕೆ ಕಾರಣವಾಗುತ್ತದೆ. ಅವರ ಎಲ್ಲಾ ತ್ಯಾಗಗಳೂ ವ್ಯರ್ಥ ಮಾತ್ರ ಲ್ಲದೆ ವಿನಾಶಕರವಾಗಿ ಪರಿಣಮಿಸುತ್ತದೆ. ಅಲ್ಲಾಹನು ಕೊಟ್ಟ ಸಾಮರ್ಥ್ಯಗಳನ್ನು ಇತರರ ಮೆಚ್ಚುಗೆಗಾಗಿ ವ್ಯಯಿಸುವುದಕ್ಕೆ ನರಕಾಗ್ನಿಯೇ ಶಿಕ್ಷೆ.

❀❀❀

# ಧರ್ಮ ಸಂಸ್ಥಾಪ

ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನ ಸಂದೇಶವಾಹಕರ ಆಗಮನ, ದಿವ್ಯಗ್ರಂಥಗ
ಅವತೀರ್ಣ ಮತ್ತು ದಿವ್ಯ ಧರ್ಮದ ರವಾನೆಯ ಉದ್ದೇಶ ತಿಳಿಸುತ್ತಾ ಹೀಗೆ ಹೇಳಲಾಗಿದೆ:

**"ಅವನು ನೂಹರಿಗೆ ಆಜ್ಞಾಪಿಸಿದ್ದ ಧರ್ಮ ವಿಧಾನವನ್ನೇ ನಿಮ ಗಾಗಿಯೂ ನಿಶ್ಚಯಿ
ಕೊಟ್ಟಿದ್ದಾನೆ ಮತ್ತು (ಮುಹಮ್ಮದರೇ) ಈಗ ನಾವು ಅದನ್ನೇ ದಿವ್ಯವಾಣಿಯ ಮೂ
ನಿಮ್ಮ ಕಡೆಗೆ ಕಳುಹಿಸಿರುತ್ತೇವೆ. ಇದನ್ನೇ ನಾವು ಇಬ್‌ರಾಹೀಮ್, ಮೂಸಾ ಮತ
ಈಸಾರಿಗೂ ಬೋಧಿಸಿದ್ದೆವು. ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಇದರಲ್ಲಿ ವಿಭಿ
ರಾಗದಿರಿ ಎಂಬ ಆದೇಶದೊಂದಿಗೆ." (42:1**

ಅಂದರೆ ಅಲ್ಲಾಹನ ಧರ್ಮವು ಸಂಸ್ಥಾಪಿಸಲ್ಪಡಬೇಕು ಎಂಬುದೇ ಎಲ್ಲ ಪ್ರವಾದಿಗ
ಆಗಮನದ ಮತ್ತು ಎಲ್ಲ ಧರ್ಮ ಸಂಹಿತೆಗಳ ರವಾನೆಯ ಹಿಂದಿರುವ ಮೂಲಭೂತ ಉದ್ದೇ
ಅಲ್ಲಾಹನ ಧರ್ಮ ಎಂದರೇನು ಎಂಬುದನ್ನು ನಾವು ಈ ಹಿಂದಿನ ಅಧ್ಯಾಯಗಳಲ್ಲಿ ಕುರ್‌ಆ
ಮತ್ತು ಹದೀಸ್‌ನ ಆಧಾರದಲ್ಲಿ ಸವಿಸ್ತಾರವಾಗಿ ವಿವರಿಸಿರುವೆವು. ಇದೀಗ ನಾವು ಧರ್ಮ
ಸಂಸ್ಥಾಪನೆ ಅಥವಾ 'ಇಕಾಮತುದ್ದೀನ್' ಅಂದರೇನು ಎಂಬುದನ್ನು ನೋಡೋಣ. ಈ ನಿಟ್ಟಿನ
ಮೊದಲು ನಾವು ಈ ಇಕಾಮತ್ ಅಥವಾ ಸಂಸ್ಥಾಪನೆ ಎಂಬ ಪದದ ವಿವರಗಳನ
ಅರಿಯುವುದಗತ್ಯ. ಪವಿತ್ರ ಕುರ್‌ಆನಿನಲ್ಲಿ ಈ ಪದವು ಹಲವಾರು ಬಾರಿ ಪ್ರಯೋಗಿಸಲ್ಪಟ್ಟಿ

**"ಅಲ್ಲಿ ಅವರೊಂದು ಗೋಡೆಯನ್ನು ಕಂಡರು. ಅದು ಬೀಳುವುದರಲ್ಲಿತ್ತು.
ವ್ಯಕ್ತಿಯು ಆ ಗೋಡೆಯನ್ನು ಸರಿಪಡಿಸಿ ನಿಲ್ಲಿಸಿತು." (18:7**

ಇಲ್ಲಿ ಗೋಡೆಯನ್ನು ಸಂಸ್ಥಾಪಿಸುವುದು ಎಂದರೆ ಅದನ್ನು ಬಲಪಡಿಸುವುದು, ಬೀಳದ
ತಡೆಯುವುದು, ಬಲವಾಗಿ, ನೇರವಾಗಿ ಕಟ್ಟಿ ನಿಲ್ಲಿಸುವುದು ಎಂದು ಅರ್ಥ.

**"ನ್ಯಾಯದೊಂದಿಗೆ ಸರಿಯಾಗಿ ತೂಗಿರಿ ಮತ್ತು ತೂಕದಲ್ಲಿ ಕಡಿತ ಮಾಡಬೇಡಿರಿ.
(ಪವಿತ್ರ ಕುರ್‌ಆನ್, 55:**

ಇಲ್ಲಿ ತೂಕದ ಸ್ಥಾಪನೆ ಅಥವಾ ತಕ್ಕಡಿಯ ಸ್ಥಾಪನೆ ಎಂದರೆ ಬಹಳ ಕರಾರುವಾಕ್ಕಾ
ಹೆಚ್ಚು ಕಡಿಮೆ ಇಲ್ಲದೆ ಸರಿಯಾಗಿ ತೂಕ ಮಾಡಿಕೊಡುವುದು ಎಂದರ್ಥ.

**"ಸಾಕ್ಷ್ಯವನ್ನು ಸರಿಯಾದ ರೀತಿಯಲ್ಲಿ ಅಲ್ಲಾಹನಿಗಾಗಿಯೇ ನೀಡಿರಿ."
(ಪವಿತ್ರ ಕುರ್‌ಆನ್, 65:**

ಸಾಕ್ಷ್ಯದ ಸ್ಥಾಪನೆ ಎಂದರೆ ತಾರತಮ್ಯ ಮಾಡದೆ ಇದ್ದದ್ದನ್ನು ಇದ್ದಂತೆ ಸಾಕ್ಷ್ಯ
ಯುವುದು ಎಂದರ್ಥ.

"ಪ್ರತಿಯೊಂದು ಉಪಾಸನೆಯಲ್ಲಿ ಗಮನವನ್ನು ಸರಿಯಾಗಿರಿಸಬೇಕೆಂದೂ ಧರ್ಮವನ್ನು
ನಿಗೇ ಮೀಸಲಾಗಿಟ್ಟು ಅವನನ್ನೇ ಕೂಗಿ ಕರೆಯಬೇಕೆಂದೂ ಅವನ ಆಜ್ಞೆಯಾಗಿರುತ್ತದೆ."

(ಪವಿತ್ರ ಕುರ್‌ಆನ್, 7:29)

ಇಲ್ಲಿ ದಿಕ್ಕನ್ನು ಸ್ಥಾಪಿಸುವುದು ಎಂದರೆ, ಎಲ್ಲ ಬಗೆಯ ಬಹುದೇವಾರಾಧನೆಗಳಿಂದ
ಕ್ತವಾಗಿದ್ದು ನಿಷ್ಕಳಂಕವಾಗಿ, ಸರಿಯಾಗಿ ಅಲ್ಲಾಹನ ಆರಾಧನೆ ಮಾಡುವುದು ಎಂದರ್ಥ.

"ನೀವು ಏಕನಿಷ್ಠೆಯಿಂದ ನಿಮ್ಮ ಮುಖವನ್ನು ಈ ಧರ್ಮದ ಕಡೆ ಕೇಂದ್ರೀಕರಿಸಿರಿ.
ಲ್ಲಾಹನು ಮಾನವನನ್ನು ಸೃಷ್ಟಿಸಿದ ಪ್ರಕೃತಿಯಲ್ಲೇ ಸ್ಥಿರವಾಗಿರಿ."

(ಪವಿತ್ರ ಕುರ್‌ಆನ್, 30:30)

"ಆದುದರಿಂದ ನಿವಾರಣೆಯಾಗುವ ಯಾವ ಸಾಧ್ಯತೆಯೂ ಅಲ್ಲಾಹನ ಕಡೆಯಿಂದ
ದಿರುವಂತಹ ಆ ದಿನವು ಬರುವುದಕ್ಕೆ ಮುಂಚಿತವಾಗಿ ನಿಮ್ಮ ಮುಖವನ್ನು ಈ ಸತ್ಯ
ರ್ಮದ ಕಡೆಗೆ ಸ್ಥಿರವಾಗಿರಿಸಿಕೊಳ್ಳಿರಿ. ಅಂದು ಜನರು ಸಿಡಿದು ಪರಸ್ಪರ ಬೇರ್ಪಡುವರು."

(ಪವಿತ್ರ ಕುರ್‌ಆನ್, 30:43)

ಈ ಎರಡೂ ವಾಕ್ಯಗಳಲ್ಲಿ, ಧರ್ಮಕ್ಕಾಗಿ ದಿಕ್ಕನ್ನು ಸ್ಥಾಪಿಸುವುದು ಅಂದರೆ ಬೇರೆಲ್ಲದ
ರ ವಿಮುಖನಾಗಿ ಸಂಪೂರ್ಣ ಗಮನವನ್ನು ಏಕಾಗ್ರಚಿತ್ತವಾಗಿ ಅಲ್ಲಾಹನ ಧರ್ಮದಲ್ಲಿ
ದ್ರೀಕರಿಸಿ, ಚಾಚೂ ತಪ್ಪದೆ ಧರ್ಮದ ಅನುಸರಣೆಯಲ್ಲಿ ನಿರತನಾಗುವುದು.

ಪವಿತ್ರ ಕುರ್‌ಆನಿನ ಅನೇಕ ಕಡೆ 'ನಮಾಝ್‌ನ ಸಂಸ್ಥಾಪನೆ' ಮಾಡಬೇಕೆಂದು ವಿಭಿನ್ನ
ಲನಗಳಿಂದ ಆದೇಶಿಸಲಾಗಿದೆ. ಇಲ್ಲಿ ನಾವು ಕೇವಲ ಮೂರು ಉದಾಹರಣೆಗಳನ್ನು
ಂದಿಡುತ್ತಿದ್ದೇವೆ:

"ಸೂರ್ಯನ ಇಳಿಮುಖಾರಂಭದಿಂದ ನಿಶಾಂಧಕಾರದ ತನಕ ನಮಾಝನ್ನು
ಸ್ಥಾಪಿಸಿರಿ ಮತ್ತು ಪ್ರಾತಃಕಾಲದ ಕುರ್‌ಆನನ್ನು ರೂಢಿಗೊಳಿಸಿಕೊಳ್ಳಿರಿ. ಏಕೆಂದರೆ ಪ್ರಾತಃ
ದ ಕುರ್‌ಆನ್ ಪ್ರಮಾಣಿತವಾಗಿರುತ್ತದೆ." (17:78)

"ನಮಾಝ್ ಮುಗಿಸಿಕೊಂಡ ಬಳಿಕ ನಿಂತೂ ಕುಳಿತೂ ಮಲಗಿಯೂ ಎಲ್ಲ ಅವಸ್ಥೆ
ಯಲ್ಲೂ ಅಲ್ಲಾಹನನ್ನು ಸ್ಮರಿಸುತ್ತಲೇ ಇರಿ. ಶಾಂತಿಯುಂಟಾದ ಮೇಲೆ ಸಂಪೂರ್ಣ
ಮಾಝನ್ನು ನೆರವೇರಿಸಿರಿ. ವಾಸ್ತವದಲ್ಲಿ ನಮಾಝ್ ಸತ್ಯವಿಶ್ವಾಸಿಗಳ ಮೇಲೆ ಸಮಯ
ಪಾಲನೆಯೊಂದಿಗೆ ನೆರವೇರಿಸಲು ವಿಧಿಸಲ್ಪಟ್ಟಿರುವ ಕಡ್ಡಾಯ ವಿಧಿಯಾಗಿರುತ್ತದೆ."

(4:103)

"ಅವುಗಳೊಳಗೆ ಬೆಳಗು ಬೈಗುಗಳಲ್ಲಿ ಅವನ ಕೀರ್ತನೆ ಮಾಡುತ್ತಿರುವವರನ್ನು ವ್ಯಾಪಾರ
ಮತ್ತು ಕ್ರಯ-ವಿಕ್ರಯಗಳು, ಅಲ್ಲಾಹನ ಸ್ಮರಣೆಯಿಂದಲೂ ನಮಾಝಿನ ಸಂಸ್ಥಾಪನೆ
ಯಿಂದಲೂ ಝಕಾತಿನ ಪಾವತಿಯಿಂದಲೂ ಅಲಕ್ಷ್ಯರಾಗಿ ಮಾಡುವುದಿಲ್ಲ." (24:37)

ಇಲ್ಲಿ ನಮಾಝ್‌ನ ಸಂಸ್ಥಾಪನೆ ಎಂದರೆ - ಸಮಯ ಮತ್ತಿತರ ಎಲ್ಲವನ್ನೂ ಸಂಪೂ ಪಾಲನೆ ಮಾಡುತ್ತಾ ಸರಿಯಾಗಿ ನಮಾಝ್ ನಿರ್ವಹಿಸುವುದು.

"ತಲಾಕ್ (ವಿವಾಹ ವಿಚ್ಛೇದನ) ಎರಡು ಸಲ. ಅನಂತರ ನ್ಯಾಯೋಚಿತವ ಸ್ತ್ರೀಯನ್ನು ತಡೆದಿರಿಸಿಕೊಳ್ಳಬೇಕು ಅಥವಾ ಯೋಗ್ಯ ರೀತಿಯಿಂದ ಅವಳನ್ನು ಬಿಡು ಗೊಳಿಸಬೇಕು. ಬಿಡುಗಡೆಗೊಳಿಸುವಾಗ ನೀವು ಅವರಿಗೆ (ಪತ್ನಿಯರಿಗೆ) ಕೊಟ್ಟಿದ್ದ ಸಾಧನ ಪೈಕಿ ಏನನ್ನೂ ಮರಳಿ ಪಡೆಯುವುದು ನಿಮಗೆ ಧರ್ಮಸಮ್ಮತ ಅಲ್ಲ. ದಂಪತಿಗ ಅಲ್ಲಾಹನ ಮೇರೆಗಳಲ್ಲೇ ನೆಲೆನಿಲ್ಲಲು ಅಸಾಧ್ಯವಾದೀತೆಂಬ ಸಂದೇಹ ಸ್ಥಿತಿಯು ಇ ಹೊರತಾಗಿದೆ. ಇಂತಹ ಸ್ಥಿತಿಯಲ್ಲಿ ಅವರಿಬ್ಬರೂ ಅಲ್ಲಾಹನ ಮೇರೆಗಳಲ್ಲೇ ನಿಲ್ಲಲಾರರೆಂದು ನಿಮಗೆ ಶಂಕೆಯುಂಟಾದಾಗ ಸ್ತ್ರೀಯು ತನ್ನ ಪುರುಷನಿಗೆ (ಪತಿಗೆ) ಏನಾದ ಪರಿಹಾರ ಕೊಟ್ಟು ಬಿಡುಗಡೆ ಹೊಂದುವುದರಲ್ಲಿ ದೋಷವಿಲ್ಲ. ಅಲ್ಲಾಹನಿಂದ ನಿಶ್ಚ ಸಲ್ಪಟ್ಟ ಮೇರೆಗಳಿವು. ಇವುಗಳನ್ನು ಉಲ್ಲಂಘಿಸಬೇಡಿರಿ. ಅಲ್ಲಾಹನ ಮೇರೆಗಳ ಯಾರಾದರೂ ಮೀರಿದರೆ ಅವರೇ ಅಕ್ರಮಿಗಳು." (ಪವಿತ್ರ ಕುರ್‌ಆನ್, 2:2

ಈ ವಾಕ್ಯದಲ್ಲಿ ಅಲ್ಲಾಹನ ಮೇರೆಗಳ ಸಂಸ್ಥಾಪನೆ ಎಂದರೆ, ಸಾಮಾಜಿಕ ಜೀವ ಕುರಿತು ಅಲ್ಲಾಹನು ನೀಡಿರುವ ಎಲ್ಲ ಆದೇಶಗಳ ಕಟ್ಟುನಿಟ್ಟಾದ ಪಾಲನೆ. ಅಲ್ಲಾ ಮೇರೆಗಳ ಉಲ್ಲಂಘನೆ ಎಂದರೆ ದೇವಾದೇಶಗಳ ಉಲ್ಲಂಘನೆ.

ಅಹ್ಲೆ ಕಿತಾಬ್ ಅಥವಾ ಗ್ರಂಥ ನೀಡಲ್ಪಟ್ಟ ಜನಾಂಗಗಳ ಬಗ್ಗೆ ಪವಿತ್ರ ಕುರ್‌ಆ ಹೀಗೆಂದಿದೆ:

"ಈ ಗ್ರಂಥದವರು (ಈ ಉದ್ಧಟತನದ ಬದಲು) ವಿಶ್ವಾಸವಿಟ್ಟಿದ್ದರೆ ಹಾ ದೇವಭಯ ನೀತಿಯನ್ನನುಸರಿಸುತ್ತಿದ್ದರೆ, ನಾವು ಅವರ ಕೆಡುಕುಗಳನ್ನು ಅವರಿ ದೂರೀಕರಿಸುತ್ತಿದ್ದೆವು ಮತ್ತು ಅವರನ್ನು ಸಕಲ ಸೌಭಾಗ್ಯಗಳಿಂದ ಕೂಡಿದ ಸ್ವರ್ಗೋದ್ಯಾ ಗಳಿಗೆ ತಲಪಿಸಿ ಬಿಡುತ್ತಿದ್ದೆವು." (5:

ಈ ವಾಕ್ಯದಲ್ಲಿ ಗ್ರಂಥದವರಿಗೆ ಪಾಪ ವಿಮೋಚನೆ ಮತ್ತು ಸ್ವರ್ಗದ ಕೊಡ ನೀಡಲು ಎರಡು ಶರತ್ತುಗಳನ್ನು ಮುಂದಿಡಲಾಗಿದೆ. ಮೊದಲನೆಯದಾಗಿ ಅವರು ವಿಶ್ವಾಸ ಸ್ವೀಕರಿಸಬೇಕು. ಎರಡನೆಯದಾಗಿ ತಮ್ಮ ಸಂಪೂರ್ಣ ಜೀವನದಲ್ಲಿ ತ ಅರ್ಥಾತ್ ಅಲ್ಲಾಹನ ಆದೇಶಗಳನ್ನು ಪಾಲಿಸುವ ಮತ್ತು ಆಜ್ಞೋಲ್ಲಂಘನೆಯಿ ದೂರವಿರುವ ನೀತಿಯನ್ನು ಪಾಲಿಸಬೇಕು. ಒಂದು ವೇಳೆ ಅವರು ಹಾಗೆ ಮಾಡುತ್ತಿ ಪ್ರಸ್ತುತ ಎರಡೂ ಕೊಡುಗೆಗಳಿಗೆ ಅವರು ಅರ್ಹರಾಗುತ್ತಿದ್ದರು.

ಇದರ ಮುಂದಿನ ವಾಕ್ಯ ಹೀಗಿದೆ:

"ಅಕಟ! ಅವರು ತೌರಾತ್, ಇಂಜೀಲ್ ಮತ್ತು ಅವರ ಪಾಲಕ ಪ್ರಭುವಿನ ವತಿಯಿ ಅವರ ಕಡೆಗೆ ಕಳುಹಿಸಲ್ಪಟ್ಟಿದ್ದ ಇತರ ಗ್ರಂಥಗಳನ್ನು ಸಂಸ್ಥಾಪಿಸಿರುತ್ತಿದ್ದರೆ! ಹ ಮಾಡುತ್ತಿದ್ದರೆ, ಅವರಿಗಾಗಿ ಆಹಾರವು ಮೇಲ್ಭಾಗದಿಂದ ವರ್ಷಿಸುತ್ತಿತ್ತು, ಕೆಳಭಾಗದಿ

ಬರುತ್ತಿತ್ತು. ಅವರಲ್ಲಿ ಕೆಲವರು ಸನ್ಮಾರ್ಗಿಗಳೂ ಇದ್ದಾರೆ ಆದರೆ ಅವರಲ್ಲಿ ನವರು ಮಹಾ ದುಷ್ಕರ್ಮಿಗಳಾಗಿದ್ದಾರೆ." (ಪವಿತ್ರ ಕುರ್‌ಆನ್, 5:66)

ಈ ವಾಕ್ಯದಲ್ಲಿ ತೌರಾತ್, ಇಂಜೀಲ್ ಮತ್ತು ಇತರ ದಿವ್ಯಗ್ರಂಥಗಳನ್ನು ಸ್ಥಾಪಿಸು ) ಎಂದರೆ, ಸಂಪೂರ್ಣ ಬದುಕಿನಲ್ಲಿ ಅವುಗಳ ಆದೇಶಗಳನ್ನು ಪಾಲಿಸುವುದು ಮತ್ತು , ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಇತ್ಯಾದಿ ಎಲ್ಲ ಕ್ಷೇತ್ರಗಳಲ್ಲಿ ಅವುಗಳನ್ನು ಷ್ಠಾನಿಸುವುದು ಎಂದು ಅರ್ಥ. ಪವಿತ್ರ ಕುರ್‌ಆನ್‌ನಿಂದಲೂ ಸ್ವತಃ ತೌರಾತ್ ಲೂ ಸ್ಪಷ್ಟವಾಗಿ ತಿಳಿದು ಬರುವಂತೆ, ತೌರಾತ್‌ನಲ್ಲಿ ಜನರ ಸಾಮಾಜಿಕ ಮತ್ತು ಕೀಯ ಜೀವನದ ಬಗ್ಗೆ ಹಲವಾರು ಆದೇಶಗಳಿದ್ದುವು. ವಿವಿಧ ಅಪರಾಧಗಳಿಗೆ ಬೇಕಾದ ಶಿಕ್ಷೆಗಳ ವಿವರವೂ ಅದರಲ್ಲಿತ್ತು. ತೌರಾತ್‌ನ ಸ್ಥಾಪನೆ ಎನ್ನುವಾಗ ರಲ್ಲಿರುವ ಈ ಎಲ್ಲ ಆದೇಶ ಮತ್ತು ನಿಯಮಗಳ ಪರಿಪೂರ್ಣ ಪಾಲನೆ ಒಳಗೊಂಡಿದೆ.

ತುಸು ಮುಂದುವರಿದು ಇದೇ ಅಧ್ಯಾಯದಲ್ಲಿ ಹೀಗೆ ಹೇಳಲಾಗಿದೆ:

"ಓ ಗ್ರಂಥದವರೇ, ನೀವು ತೌರಾತನ್ನೂ ಇಂಜೀಲನ್ನೂ ನಿಮಗೆ ನಿಮ್ಮ ಪಾಲಕಪ್ರಭುವಿನ ಯಿಂದ ಅವತೀರ್ಣಗೊಳಿಸಲ್ಪಟ್ಟ ಇತರ ಗ್ರಂಥಗಳನ್ನೂ ನೆಲೆ ನಿಲ್ಲಿಸುವ ತನಕ ನಿಮಗೆ ವ ತಳಹದಿಯೂ ಇಲ್ಲ ಎಂದು ಸ್ಪಷ್ಟವಾಗಿ ಹೇಳಿಬಿಡಿರಿ." (ಪವಿತ್ರ ಕುರ್‌ಆನ್, 5:68)

ಇಲ್ಲಿ ಕೂಡಾ ತೌರಾತ್ ಮತ್ತು ಇತರ ದಿವ್ಯ ಗ್ರಂಥಗಳ ಸ್ಥಾಪನೆ ಎಂದರೆ ದೇವದತ್ತ ರ್ಮದ ಸಂಸ್ಥಾಪನೆ ಮತ್ತು ಅದರ ಎಲ್ಲ ಆದೇಶಗಳ ಪರಿಪೂರ್ಣ ಪಾಲನೆ ಎಂದೇ ಅರ್ಥ.

ಈ ಎಲ್ಲ ಉದಾಹರಣೆಗಳಿಂದ ವ್ಯಕ್ತವಾಗಿ ತಿಳಿಯುವಂತೆ, ಇಕಾಮತುದ್ದೀನ್ ವಾ ಧರ್ಮಸಂಸ್ಥಾಪನೆ ಎಂದರೆ, ಅಲ್ಲಾಹನ ಧರ್ಮವನ್ನು ಅಪೇಕ್ಷಿತ ರೀತಿಯಲ್ಲಿ ರ್ಣವಾಗಿ ಪಾಲಿಸುವುದು, ದೇವಾದೇಶಗಳನ್ನು ಪಾಲಿಸುವುದು, ಸಂಪೂರ್ಣ ಸ್ಥಿರಚಿತ್ತತೆ ತ್ತು ಏಕಾಗ್ರತೆಯೊಂದಿಗೆ ಧರ್ಮಕ್ಕೆ ಸಂಬಂಧಿಸಿದ ಕರ್ತವ್ಯಗಳನ್ನು ಈಡೇರಿಸುವುದು ತ್ತು ಜೀವನದ ಎಲ್ಲ ಕ್ಷೇತ್ರಗಳಲ್ಲೂ ಸತ್ಯಧರ್ಮದ ತತ್ವಗಳನ್ನು ಸಂಸ್ಥಾಪಿಸುವುದು ೂ ಅನುಷ್ಠಾನಿಸುವುದು ಎಂದರ್ಥ.

ಅಲ್ಲಾಹನ ಧರ್ಮದ ಉತ್ಥಾನಕ್ಕಾಗಿ ಶ್ರಮಿಸುವುದು ಧರ್ಮ ಸಂಸ್ಥಾಪನೆಯ ಅವಿಭಾಜ್ಯ ಓ. ಏಕೆಂದರೆ ಧರ್ಮವು ಪ್ರಾಬಲ್ಯದ ಸ್ಥಾನಕ್ಕೆ ತಲುಪುವ ತನಕ ಧರ್ಮ ಸಂಸ್ಥಾಪನೆಯನ್ನು ಸಿಕೊಳ್ಳಲಿಕ್ಕೂ ಸಾಧ್ಯವಿಲ್ಲ. ಅಧಿಕಾರದ ಕಡಿವಾಣವು ಸತ್ಯದ ವಾಹಕರ ಕೈಯಲ್ಲಿದ್ದಾಗ ತ್ರ ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಸತ್ಯಧರ್ಮದ ನಿಯಮಾವಳಿಗಳನ್ನು ಸ್ಥಾಪಿಸಲು ್ಯವಾಗುವುದು. ವೈಯಕ್ತಿಕ ಮತ್ತು ಸಾಮೂಹಿಕ ಜೀವನದಲ್ಲಿ ಒಬ್ಬ ವ್ಯಕ್ತಿ ಸಂಪೂರ್ಣವಾಗಿ ರ್ಮವನ್ನು ಪಾಲಿಸಲು ಸಾಧ್ಯವಾಗಬೇಕಾದರೆ ಅವನು ವ್ಯವಹರಿಸುವ ಎಲ್ಲ ಕ್ಷೇತ್ರಗಳಲ್ಲಿ ರ್ಮದ ನಿಯಮಗಳೇ ಅನುಷ್ಠಾನದಲ್ಲಿರಬೇಕಾದುದು ಅನಿವಾರ್ಯ. ಅನ್ಯಥಾ ಅವನು ಎಷ್ಟೇ ಎಸಿದರೂ ಸಂಪೂರ್ಣ ಧರ್ಮಾನುಸರಣೆ ಅವನಿಗೆ ಅಸಾಧ್ಯವೆನಿಸಬಹುದು. ಧರ್ಮವು ಬೇರೆ ವಸ್ಥೆಗಳ ಅಧೀನದಲ್ಲಿರುವ ತನಕ ಈ ಸ್ಥಿತಿ ಅನಿವಾರ್ಯ. ಆದ್ದರಿಂದಲೇ ಧರ್ಮವು

ಅಧೀನತೆಯಿಂದ ಪ್ರಾಬಲ್ಯದ ಸ್ಥಿತಿಗೆ ತರಲ್ಪಡಬೇಕು. ಧರ್ಮವು ಬಂದಿರುವುದೇ ಪ್ರಾ ದಲ್ಲಿರುವುದಕ್ಕಾಗಿ. ಪವಿತ್ರ ಕುರ್‌ಆನ್ ಪ್ರವಾದಿವರ್ಯರ(ಸ) ಬಗ್ಗೆ ಹೀಗೆ ಹೇಳಿದೆ:

**"ಸನ್ಮಾರ್ಗ ಮತ್ತು ಸತ್ಯಧರ್ಮದೊಂದಿಗೆ ತನ್ನ ಸಂದೇಶವಾಹಕನನ್ನು ಕಳುಹಿ ವವನು ಅವನೇ. ಅದನ್ನು ಸಂಪೂರ್ಣ ಧರ್ಮದ ಮೇಲೆ ಪ್ರಬಲಗೊಳಿಸಲಿಕ್ಕಾಗಿ. ಬಹು ವಿಶ್ವಾಸಿಗಳಿಗೆ ಇದು ಎಷ್ಟೇ ಅಪ್ರಿಯವಾದರೂ ಸರಿಯೆ."** **(61**

ಇದರಿಂದ ಪ್ರವಾದಿಯ(ಸ) ಆಗಮನದ ಉದ್ದೇಶ ಕೇವಲ ಧರ್ಮ ಬೋ ಯಾಗಿರದೆ, ಧರ್ಮೋತ್ಥಾನ ಅವರ ಕರ್ತವ್ಯವಾಗಿದೆ ಎಂಬುದು ವ್ಯಕ್ತವಾಗುತ್ತದೆ. ಆದ್ದ ಅಲ್ಲಾಹನು ಪ್ರವಾದಿವರ್ಯರ(ಸ) ಅನುಯಾಯಿಗಳ ಸಮುದಾಯದ ಮೇಲೆ, ಧರ್ಮೋ ತ್ಥಾನಕ್ಕಾಗಿ ಅಲ್ಲಾಹನ ಮಾರ್ಗದಲ್ಲಿ ಜಿಹಾದ್(ಹೋರಾಟ) ನಡೆಸುವುದನ್ನು ಕಡ್ಡಾ ಗೊಳಿಸಿರುವನು. ಅಷ್ಟೇ ಅಲ್ಲ, ಈ ಹೋರಾಟವೇ ನಿಮಗೆ ಇಹದಲ್ಲಿ ಅಲ್ಲಾಹನ ನೆರವ ಪರದಲ್ಲಿ ನರಕದಿಂದ ಮುಕ್ತಿ ಹಾಗೂ ಸ್ವರ್ಗದ ಶಾಶ್ವತ ಅನುಗ್ರಹಗಳಿಗೆ ಪ್ರವೇಶವ ಗಳಿಸಿಕೊಡುವ ಸಾಧನವೆಂದು ಅವರಿಗೆ ಸ್ಪಷ್ಟವಾಗಿ ತಿಳಿಸಲಾಗಿದೆ.

**"ಸತ್ಯವಿಶ್ವಾಸಿಗಳೇ, ನಿಮ್ಮನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವ ಒಂದು ವ್ಯಾಪಾರವನ್ನು ನಾನು ನಿಮಗೆ ತೋರಿಸಿ ಕೊಡಲೇ? ಅಲ್ಲಾಹ್ ಮತ್ತು ಅ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ ಮತ್ತು ನಿಮ್ಮ ಸಂಪತ್ತುಗಳಿಂದಲೂ ಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ, ನಿ ಪಾಲಿಗೆ ಇದೇ ಉತ್ತಮವಾಗಿದೆ. ಅಲ್ಲಾಹನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವಂತಹ ಸ್ವರ್ಗೋದ್ಯಾನಗಳಲ್ಲಿ ನಿಮ್ಮನ್ನು ಪ್ರ ಗೊಳಿಸುವನು. ಸದಾ ನೆಲೆಸುವಂತಹ ಸ್ವರ್ಗಗಳಲ್ಲಿ ಅತ್ಯುತ್ತಮ ಭವನಗಳನ್ನು ನಿ ದಯಪಾಲಿಸುವನು. ಇದೇ ಮಹಾ ಯಶಸ್ಸು."** **(ಪವಿತ್ರ ಕುರ್‌ಆನ್, 61:10**

ಇಕಾಮತುದ್ದೀನ್ ಅಥವಾ ಧರ್ಮ ಸಂಸ್ಥಾಪನೆಯೆಂಬುದು ಬಹಳ ವಿಶಾಲ ಅರ್ಥ ಪದವಾಗಿದ್ದು ಅದರಲ್ಲಿ ಧರ್ಮದ ನಿಸ್ವಾರ್ಥ ಹಾಗೂ ಪರಿಪೂರ್ಣ ಅನುಸ ಧರ್ಮಪ್ರಚಾರ, ಸತ್ಯಸಾಕ್ಷ್ಯ, ಧರ್ಮೋತ್ಥಾನಕ್ಕಾಗಿ ಪರಿಶ್ರಮ, ಧರ್ಮ ಮಾರ್ಗದಲ್ಲಿ ಹೋ ಮತ್ತು ಎಲ್ಲ ದೇವನಿಶ್ಚಿತ ಹೊಣೆಗಾರಿಕೆಗಳ ಈಡೇರಿಕೆಯು ಸೇರಿದೆ. ಧರ್ಮಸಂಸ್ಥಾಪನೆ ಎಲ್ಲ ಪ್ರವಾದಿಗಳ ಆಗಮನ ಮತ್ತು ಎಲ್ಲ ಧರ್ಮ ಗ್ರಂಥಗಳ ಅವತೀರ್ಣದ ಮ ಉದ್ದೇಶವಾಗಿದೆ. ಅಲ್ಲಾಹನು ಎಲ್ಲ ಕಾಲದ ಸತ್ಯವಿಶ್ವಾಸಿಗಳಿಗೂ ಧರ್ಮ ಸಂಸ್ಥಾಪನೆ ಪರಿಶ್ರಮಿಸಲು ಆದೇಶಿಸಿರುವನು. ಈ ವಿಷಯದಲ್ಲಿ ಸದಾ ಒಗ್ಗಟ್ಟಿನಿಂದಿರಬೇಕೆಂದೂ ಭ ತೋರಬಾರದೆಂದೂ ಎಚ್ಚರಿಸಿರುವನು. ಇದುವೇ ಇಹ-ಪರಗಳಲ್ಲಿ ವಿಜಯ ಮತ್ತು ಮೋ ಸಾಧನವೆಂದು ಸಾರಿರುವನು. ಆದ್ದರಿಂದ ಸಹಜವಾಗಿ ಇದುವೇ ಪ್ರತಿಯೊಬ್ಬ ಮುಸ್ಲಿ ಮತ್ತು ಸಂಪೂರ್ಣ ಮುಸ್ಲಿಮ್ ಸಮಾಜದ ಧ್ಯೇಯ, ಗುರಿ ಹಾಗೂ ಜೀವನೋದ್ದೇಶವಾ

❁ ◆ ❁